ಹದಿನೈದನೆಯ ಪ್ರಕಟನೆ:—

# ಸಾಮ್ಯವಾದವೇ ಏಕೆ?



ಜಯಪ್ರಕಾಶ ನಾರಾಯಣ



ಕನ್ನಡಿಸಿದವರು:
ಶ್ರೀ. ಮಳಿಯೆ ಗೋವರ್ಧನರಾಯರು

ಎರಡನೆಯ ಮುದ್ರಣ

ಸಾಹಿತ್ಯ ಭಂಡಾರ, ಹುಬ್ಬಳ್ಳಿ

ಪ್ರಕಾಶಕರು :
ಶ್ರೀ. ರಂ. ರಾ. CHECKER
ಕಾರ್ಯದರ್ಶಿ, ಕರ್ನಾಟಕ ಶಿಕ್ಷಣ ಸಮಿತಿ
ಹುಬ್ಬಳ್ಳಿ

ಮುದ್ರಕರು :
ಶ್ರೀ. ಎಚ್. ಬಿ. ನವಲ...ರು
ಹಿಂದಮಾತಾ ಮುದ್ರಣಾಲಯ
ಧಾರವಾಡ

ಮೊದಲನೆಯ ಮುದ್ರಣ ೧೯೩೬
ಎರಡನೆಯ ಮುದ್ರಣ ೧೯೫೭

ಬೆಲೆ : ೧—೧೦—೯

೧೯೫೭

# ಪರಿವಿಡಿ

# ಮುನ್ನುಡಿ



ಸಾಮ್ಯವಾದವು ಇತ್ತೀಚೆಗೆ ಪ್ರಪಂಚದ ಒಂದಂಚಿನಿಂದ ಇನ್ನೊಂದು ಅಂಚಿನ ವರೆಗೆ ಕೈಚಾಚಿ ಎಲ್ಲೆಲ್ಲಿಯೂ ಆಲ್ಲೋಲಕಲ್ಲೋಲವನ್ನೆಬ್ಬಿಸಿದೆ. ಕೆಲವು ನಾಡುಗಳಲ್ಲಿ ಸಾಮ್ಯವಾದದ ಪ್ರಭಾವದಿಂದ ಬಂಡವಲುಗಾರಿಕೆ ಬುಡ ಮೇಲಾಗಿ ಕಂಬಿಕೀಳುತ್ತಿದೆ. ಕೆಲವೆಡೆಗಳಲ್ಲಿ ಅದು ಸಾಮ್ಯವಾದವನ್ನೆದುರಿಸಲು ಕೈಮೀರಿದ ಕುತಂತ್ರಗಳನ್ನು ನಡೆಸಿದೆ. ಬಂಡವಲುಗಾರಿಕೆ ಹೊಸ ಹೆಸರಿನಿಂದ ಮುಂದೆ ಬಂದಿದೆ. ಕುಪ್ಪಳಿಸಿ ಬೀಳುತ್ತಿರುವ ತನ್ನ ಕೋಟಿ-ಪೇಟಿಗಳನ್ನು ಅಚ್ಚುಕಟ್ಟಾಗಿ ಗಟ್ಟಿಮುಟ್ಟಾಗಿ ಕಟ್ಟಿಕೊಳ್ಳುತ್ತಿದೆ. ತನ್ನ ಹಿತಸಂಬಂಧಗಳನ್ನು ಕಾಪಾಡುತ್ತಿದೆ. ಅದು ಪರಿಬಿಸುಟ ಹಾವಿನಂತೆ ನಾಜಿಜಂ, ಫ್ಯಾಸಿಜಂ ಎಂಬ ನೂತನ ನಾಮಗಳಿಂದ ಎಲ್ಲವನ್ನೂ ಮುತ್ತಲು ತುತ್ತಲು ಸಾರಿಬರುತ್ತಿದೆ.

ಬಂಡವಲುಗಾರಿಕೆಗೆ ಸಾಮ್ಯವಾದವು ಹುಟ್ಟುಹಗೆ. ಸಾಮ್ರಾಜ್ಯವಾದವು ಅದರ ರಕ್ಷಾಕವಚ. ಬಂಡವಲುಗಾರಿಕೆಯ ಹುಟ್ಟು-ಹಂಬಲುಗಳ ಸರಿಯಾದ ಅರಿವು ಜನತೆಯಲ್ಲಿ ಹಬ್ಬಿದಂತೆ ಸಾಮ್ಯವಾದಕ್ಕೆ ಸ್ವಾಗತವು ಸಿಕ್ಕುತ್ತಿದೆ. ಬಂಡವಲುಗಾರಿಕೆಯ ಖಂಡನವಿಲ್ಲದ ಸಾಮ್ಯವಾದದ ಮಂಡನಕ್ಕೆ ಅರ್ಥವೇ ಇಲ್ಲ.

ಕನ್ನಡದಲ್ಲಿ ಈ ವರೆಗೆ ಸಾಮ್ಯವಾದದ ಬಗೆಗೆ ಕೆಲವು ಬಿಡಿ ಬರೆಹಗಳು ಬಂದಿವೆಯೇ ಹೊರತು ಇಡಿಯಾದ ಹೊತ್ತಿಗೆಗಳು ಪ್ರಕಟವಾಗಿಲ್ಲ. ಆದುದರಿಂದ ಎಷ್ಟೋ ಜನರಲ್ಲಿ ಸಾಮ್ಯವಾದದ ತಕ್ಕ ತಿಳುವಳಿಕೆಯ ಬದಲು ವಿಕಲ್ಪ-ವಿಪರ್ಯಯಗಳೇ ತುಂಬಿಕೊಂಡಿವೆ. ಈ ಪರಿಸ್ಥಿತಿಯನ್ನು ತಕ್ಕಮಟ್ಟಿಗಾದರೂ ಹೋಗಲಾಡಿಸುವ ಸದುದ್ದೇಶದಿಂದ ಶ್ರೀ. ಕಮಲಾದೇವಿಯವರು ನನಗೆ ಶ್ರೀ. ಜಯಪ್ರಕಾಶ ನಾರಾಯಣರು ಇಂಗ್ಲಿಷಿನಲ್ಲಿ ಬರೆದ "Why Socialism?" ಎಂಬ ಪುಸ್ತಕವನ್ನು ಕನ್ನಡಿಸಿ ಕೊಡಬೇಕೆಂದು ಕೇಳಿದರು.

ಶ್ರೀ. ಜಯಪ್ರಕಾಶ ನಾರಾಯಣರು ಬಹುಧಾನಕ ಬುದ್ಧಿಯವರು. ವಿವಿಧ ವಿಷಯವಿಚಕ್ಷಣರು. ಅವರ ಸೂಕ್ಷ್ಮ ನಿರೀಕ್ಷಣ ಶಕ್ತಿ, ಯುಕ್ತಿವಾದ,

ನಿರೂಪಣಕೌಶಲ, ಬೆರಗುಗೊಳಿಸುವಂತಹವು. ಬಿಗಿಯಾದ ಪ್ರಮೇಯಗಳ
ಹಗುರಾಗಿ ಸೊಗಸಾಗಿ ತಿಳಿಸುವಲ್ಲಿ ಅವರನ್ನು ಸರಿಗಟ್ಟುವುದು ತುಂಬ ಕ
ಸಾಲದುದಕ್ಕೆ ಸಾಮ್ಯವಾದ (ಸಮಾಜವಾದ) ವು ಕನ್ನಡಕ್ಕೆ ಹೊಸ
ಅದರಲ್ಲಿಯೂ, ಸರಿಹೋಗುವ ಪಾರಿಭಾಷಿಕ ಶಬ್ದಸಂಪತ್ತಿನ ಕೊರತೆ. ಆದ
ರಿಂದ ಮೂಲದ ಬಿಗುವು ಅಳಿಯದಂತೆ ಈ ಅನುವಾದವು ಅಷ್ಟೇ ಗೆಲವುಗ
ನಡೆದಿದೆಯೆಂದು ನಂಬಲಾರೆ.

ಮುಖ್ಯವಾಗಿ ಈ ಪುಸ್ತಕವನ್ನು ಬರೆದುದು ಕಾಂಗ್ರೆಸಿನ ಸಾಮ್ಯವಾ
ಪಕ್ಷದ ಧ್ಯೇಯ-ಧೋರಣಗಳನ್ನು ಸ್ಪಷ್ಟೀಕರಿಸಲಿಕ್ಕೆ. ಆದುದರಿಂದ ಇ
ಸಾಮ್ಯವಾದದ ಪ್ರತಿಪಾದನವು ಪ್ರಾಸಂಗಿಕವಾಗಿ ಆಗಿದೆಯೇ ಹೊರ
ಪ್ರಾಮುಖ್ಯವಾಗಿ ಅಲ್ಲ. ಆದರೂ ಮೂಲ ಲೇಖಕರು ಮೊದಲಿನ ಹತ್ತಿಪ್ಪ
ಪುಟಗಳಲ್ಲಿಯೇ ತಮ್ಮ ಜಾಣ್ಮೆಯ ಹಿಡಿತದಿಂದ ಮಾರ್ಮಿಕವಾದ ಶೈಲಿಯಿಂ
ಸಾಮ್ಯವಾದದ ತಿರುಳನ್ನು ತಿಳುಹಿಸಿದ್ದಾರೆ.

ಮುಂದಿನ ಅಧ್ಯಾಯದಲ್ಲಿ ಭಾರತೀಯ ಸಮಸ್ಯೆಗಳ ಪರಿಹಾರಕ್ಕಾ
ಸಾಮ್ಯವಾದದ ಸ್ಥಾನವನ್ನಾಕ್ರಮಿಸಲು ಸಮರ್ಥವೆಂದು ಹೇಳಲ್ಪಡು
ಗಾಂಧೀವಾದ, ಪ್ರಾಚೀನ ಸಾಮ್ಯವಾದ (ವರ್ಣಾಶ್ರಮ ಧರ್ಮ), ಮುಂತಾ
ದವುಗಳನ್ನು ಚರ್ಚೆಯ ತಕ್ಕಡಿಗೇರಿಸಿ ಅವುಗಳಿಂದಾದ ಮತ್ತು ಆಗಬಹು
ದಾದ ಅನಾಹುತಗಳನ್ನು ಸೂಚಿಸಿ ವಿವೇಚಿಸಿದ್ದಾರೆ. ಹೀಗೆ ಮಾಡುವಾಗ
ವ್ಯಕ್ತಿಗಳನ್ನು ಮುಟ್ಟದೆ, ಅವರು ಪ್ರತಿಪಾದಿಸುವ ತತ್ತ್ವವಿಚಾರಗಳನ್ನೇ
ಪ್ರತಿಭಟಿಸಿದ್ದಾರೆ.

ಕೊನೆಯ ಅಧ್ಯಾಯದಲ್ಲಿ 'ರಾಷ್ಟ್ರೀಯ ಐಕ್ಯ'ವೆಂಬ ಶುಭನಾಮದಿಂದ ಬಡವರ ಹಿತದ ಹೋಮವು ನಡೆಯುತ್ತಿರುವುದನ್ನು ಮನವಟ್ಟಾಗಿ ವಿವರಿಸಿ, ಕಾಂಗ್ರೆಸು ನಿಜವಾಗಿಯೂ ಜನತೆಯ ಪ್ರತಿನಿಧಿಯಾಗಬೇಕಾದರೆ ಏನು ಮಾಡಬೇಕೆಂಬುದನ್ನು ಸೂಚಿಸಿ, ಸಾಮ್ರಾಜ್ಯವಾದವನ್ನೆದುರಿಸಲು ನೂತನ ರಣವ್ಯೂಹವೊಂದನ್ನು ರಚಿಸಬೇಕಾದರೆ ವರ್ಗಸಂಘಟನವು ಹೇಗೆ ಅಗತ್ಯವಾಗಿದೆಯೆಂಬುದನ್ನೂ ತಿಳಿಸಿದ್ದಾರೆ.

**ಗೋವರ್ಧನರಾಯ**

# ಸಾಮ್ಯವಾದವೇ ಏಕೆ ?

## ೧ ಸಾಮ್ಯವಾದದ ಬುನಾದಿ

**ಆಸ್ತಿಯೆಂಬುದು ಅಳಿಯದ ಹೊರತು ಸರಕುಗಳ ಹಂಚುವಿಕೆ ನ್ಯಾಯವಾದುದೂ ಸಮವಾದುದೂ ಆಗಲಾರದು. ಜಗದ ಆಡಳಿತವೂ ಸುಖಕರವಾಗಿ ಜರುಗಲಾರದು.**

**— ಥೋಮಸ್ ಮೂರ್**

### ಸಾಮ್ಯವಾದದ ಪಂಥಗಳು

ಸಾಮ್ಯವಾದವು ಹಲವು ವಿಧವಾಗಿದೆಯೆಂದು ಅರಿತವರೂ ಅರಿಯದವರೂ ಸೇರಿಯೇ ಆಡುತ್ತಿರುತ್ತಾರೆ. ಆದುದರಿಂದ ಸಾಮ್ಯವಾದವೆಂದರೇನೆಂದು ಹೇಳುವುದು ಬಲು ಬಿಗಿ. ಐತಿಹಾಸಿಕ ದೃಷ್ಟಿಯಿಂದ ನೋಡಿದರೆ, ಸಾಮ್ಯವಾದದಲ್ಲಿ ಪರಸ್ಪರ ವಿರೋಧವುಳ್ಳ ಬೇರೆ ಬೇರೆ ಪಂಗಡಗಳಿರುವುದು ನಿಜ. ಆದರೆ ಜಗತ್ತಿಗೆ ಇತ್ತೀಚೆಗೊದಗಿದ ಆರ್ಥಿಕ ಮುಗ್ಗಟ್ಟಿನಿಂದಲೂ ಫ್ಯಾಸಿಜಮ್ಮಿನ ( **Fascism** ) ಉದಯದಿಂದಲೂ ಸಾಮ್ಯವಾದದ ವಿಚಾರಗಳಲ್ಲಿ ಒಕ್ಕಟ್ಟು ಬೆಳೆಯತೊಡಗಿದೆಯೆಂದರೆ ತಪ್ಪಾಗದು. ಆದುದರಿಂದ ಸಾಮ್ಯವಾದಕ್ಕೆ—ಮಾರ್ಕ್ಸನ ಸಾಮ್ಯವಾದಕ್ಕೆ—ಒಂದೇ ವ್ಯಾಖ್ಯೆಯು ಒಂದೇ ರೂಪವಿದೆಯೆಂದು, ಎಂದಿಗಿಂತಲೂ ಇಂದು ಹೆಚ್ಚು ನಂಬುಗೆಯಿಂದ ಹೇಳಬಹುದಾಗಿದೆ.

ಸಾಮ್ಯವಾದಿಗಳ ಬೇರೆ ಬೇರೆ ಬಣಗಳಲ್ಲಿ ಇದ್ದ ಮತ್ತು ಇರುವ ವಿಶೇಷ ಭೇದಗಳಿಗೆ, ಸಾಮ್ಯವಾದದ ಸ್ವಭಾವ ವ್ಯಾಖ್ಯೆಗಳು ಕಾರಣವಾಗಿರಲಿಲ್ಲ. ಆದರೆ ಬಂಡವಾಳಗಾರಿಕೆಯ ಬುನಾದಿಯ ಮೇಲೆ ನಿಂತಿದ್ದ ಸಮಾಜವನ್ನು ಪಲ್ಲಟಿಸಿ, ಸಾಮ್ಯವಾದದ ತಳಹದಿಯ ಮೇಲಿರಿಸುವ ಅದರ ನೀತಿ-ರೀತಿಗಳೇ ಆ ಭೇದಗಳ ಮೂಲವಾಗಿದ್ದುವು. ಈ ವರೆಗೆ ರಶಿಯಾ ದೇಶದ ಸಂಘವಾದಿಗಳು (Communists) ಮಾತ್ರ ತಾವು ಗಳಿಸಿದ, ಹೊಗಳಿಕೆಗೆ ತಕ್ಕುದಾದ ಗೆಲುವಿನಿಂದ ತಮ್ಮ ಸಾಮ್ಯವಾದದ ಪದ್ಧತಿಯ ಪ್ರಭಾವವನ್ನು ತೋರಿಸಿದ್ದಾರೆ. ಬೇರೆ ಪದ್ಧತಿಗಳ ಪ್ರಚಾರಕರು ಮಾತ್ರ ಇನ್ನೂ ಎಲ್ಲೆಲ್ಲಿಯೂ ಸೋಲಿನ ಮಡುವಿನಲ್ಲಿದ್ದಾರೆ.

ಸಾಮ್ಯವಾದವನ್ನು ಗೆಲುವಿಗೊಯ್ಯುವ ಹಂಚಿಕೆ (Tactics) ಗಳ ಗೊಡವೆ ನನಗಿಲ್ಲ. ಅದರ ಮೂಲ ತತ್ತ್ವಗಳ ವಿವೇಚನೆಯನ್ನು ಮಾಡಬೇಕೆಂಬುದೇ ನನ್ನ ಬಯಕೆ. ಈ ತರದ ಪುಸ್ತಕದ ಚಿಕ್ಕ ಅಧ್ಯಾಯವೊಂದು, ಅವುಗಳ ವಿವೇಚನೆಗೆ ಸಾಲದೆಂಬುದು ನಿಜವೇ. ಸಾಮ್ಯವಾದದ ಘನಭವನವು ನಿಲ್ಲುವ ತಳಹದಿಯ ತತ್ತ್ವಗಳಷ್ಟು ವಾಚಕರಿಗೆ ಮನವರಿಕೆಯಾದರೆ ನನಗೆ ತುಂಬ ತೃಪ್ತಿ.

## ಸಾಮ್ಯವಾದವು ಸಮಾಜಸಂಘಟನೆಯ ಒಂದು ಪದ್ಧತಿ

ಸಾಮ್ಯವಾದವು ಸಮಾಜದ ಪುನರ್ಘಟನೆಯ ಒಂದು ಪದ್ಧತಿಯೆಂಬುದನ್ನು ಮೊದಲು ನೆನಪಿನಲ್ಲಿಡಬೇಕು. ಅದು ವ್ಯಕ್ತಿಯ ಆಚಾರದ ಸೂತ್ರವಲ್ಲ; ನಾನಾಗಲಿ ನೀವಾಗಲಿ ಒಬ್ಬೊಬ್ಬರೇ ನೆರವೇರಿಸಬಹುದಾದ ಸಂಗತಿಯಲ್ಲ. ಅದಲ್ಲದೆ ಕೂಡಲೆ ಕೈಗೂಡುವ ವಿಷಯವೂ ಅಲ್ಲ. ಭಾರತದಲ್ಲಿ ಸಾಮ್ಯವಾದದ ಪ್ರಯೋಗವನ್ನು ಕೈಕೊಳ್ಳುವುದೆಂದರೆ, ದೇಶದ ಸಮಗ್ರ ಆರ್ಥಿಕ ಮತ್ತು ಸಾಮಾಜಿಕ ಜೀವನದ ಪುನರ್ಘಟನೆಯನ್ನು ಮಾಡುವುದು. ಇದರಲ್ಲಿ ಹೊಲ ಮನೆ ಕಾರಖಾನೆಗಳ ಮತ್ತು ವಿದ್ಯಾಮಂದಿರ ನಾಟ್ಯಗೃಹ ಮುಂತಾದುವುಗಳ ಸಮಾವೇಶವಾಗುವುದು. ಒಂದೇ ಒಂದು ಗ್ರಾಮದ ಆಡಳಿತವನ್ನಾಗಲಿ ಕಾರಖಾನೆಯ ವ್ಯವಹಾರವನ್ನಾಗಲಿ ಸಾಮ್ಯವಾದದ ಪದ್ಧತಿಯಂತೆ ಜರುಗಿಸಬಹುದು. ಆದರೆ ಅದರಿಂದ ಸಾಮ್ಯವಾದದ ಸಿದ್ಧಿಯಾದಂತಾಗಲಿಲ್ಲ. ಬಿಸಿಗೆ

ಹಿಡಿದ ಲೋಲಕದಿಂದ ಕರ್ಮಶಾಲೆಯ ಗೋಡೆಯ ಮೇಲೆ ಬೀಳುವ ಆಕೃತಿಯೊಂದಕ್ಕೆ ಏಳು ಬಣ್ಣಗಳಿರಬಹುದು. ಆದರೆ ಅವಕ್ಕೆ ಮುಗಿಲ ಕಾಮನಬಿಲ್ಲು ಎಂಬ ಹೆಸರು ಬಾರದು.

## ಸಾಮ್ಯವಾದದ ಸಿದ್ಧಿಗೆ ಸರಕಾರದ ಶಕ್ತಿ ಬೇಕು

ಸಾಮ್ಯವಾದದ ತಳಹದಿಯ ಮೇಲೆ ಸಮಾಜದ ಪುನರ್ಘಟನೆ ಮಾಡಬೇಕೆಂಬ ಅಪೇಕ್ಷೆಯುಳ್ಳವರಿಗೆ ಅದನ್ನು ನೆರವೇರಿಸಲು ತಕ್ಕಷ್ಟು ಶಕ್ತಿ-ಪ್ರಭಾವಗಳ ಬೆಂಬಲ ಬೇಕು. ಸರಕಾರದ ಶಕ್ತಿಯ ಅನುಕೂಲವಿಲ್ಲದ ಯಾವ ಆದರ್ಶವಾದಿಗಳ ಸಂಗಡದಿಂದಲೂ ಸಾಮ್ಯವಾದವನ್ನು ಕಾರ್ಯರಂಗಕ್ಕಿಳಿಸಲಾಗದು.

ಶಕ್ತಿಯೆಂದರೇನು? ಇಂದಿನ ಜಗತ್ತನ್ನು ನೋಡಿದರೆ, ಯಾವುದೊಂದು ವ್ಯಕ್ತಿಯಾಗಲಿ ಪಕ್ಷವಾಗಲಿ ಸಂಗಡವಾಗಲಿ ತನ್ನ ನಿರ್ದಿಷ್ಟ ಯೋಜನೆಗಳನ್ನು, ತನ್ನ ಹಂಚಿಕೆಗಳನ್ನು ಒಂದು ಸಂಘದಲ್ಲಿ ಅಥವಾ ಒಂದು ಜನಾಂಗ (Nation) ದಲ್ಲಿ ನೆರವೇರಿಸಿಕೊಳ್ಳಬೇಕಾದರೆ ರಾಷ್ಟ್ರ (State) ವೆಂಬ ಸಾಧನವನ್ನೇ ಅವಲಂಬಿಸುವುದು. ಅದು ಇಂಗ್ಲಂಡಿನ ಕೂಲಿಕಾರರ ಸಂಗಡದಂತಹ ಶಾಸನಾನುಸಾರವಾದ ಪಕ್ಷವಿರಬಹುದು; ರಶಿಯಾದ ಬೊಲ್ಶೆವಿಕ್ ಸಂಗಡದಂತಹ ಪಕ್ಷವಿರಬಹುದು: ಜರ್ಮನಿಯ ಹಿಟ್ಲರನ ಸಂಗಡದಂತಹ ಫ್ಯಾಸಿಸ್ಟ್ ಪಕ್ಷವಿರಬಹುದು. ಆದರೆ ಅದು ಯಾವಾಗಲೂ ರಾಷ್ಟ್ರವನ್ನು ಕೈಯಲ್ಲಿ ತೆಗೆದುಕೊಳ್ಳಲು ಹವಣಿಸುವುದು. ರಾಷ್ಟ್ರವು ತಮ್ಮ ವಶದಲ್ಲಿದ್ದರೆ ಶಾಸನಗಳನ್ನು (Legislation) ಮಾಡಬಹುದು. ಆಧುನಿಕ ವಿಜ್ಞಾನವು ಒದಗಿಸಿಕೊಟ್ಟಿರುವ ಅದರಲ್ಲಿಯ ಸಕಲ ಭವ್ಯವಾದ ಪ್ರಚಾರಕ ಸಾಮಗ್ರಿಯನ್ನೂ ವಿದ್ಯಾಶಕ್ತಿಯನ್ನೂ ತಮ್ಮ ಕಾರ್ಯಕ್ಕೆ ಉಪಯೋಗಿಸಿಕೊಳ್ಳಬಹುದು. ತಮ್ಮ ಮನಸ್ಸಿನಲ್ಲಿದ್ದುದನ್ನೆಲ್ಲ ಮಾಡಿಕೊಳ್ಳಬಹುದು. ಇದಕ್ಕೆದುರಾಗಿ ಏಳುವ ಬಂಡಾಯವನ್ನೆಲ್ಲ ಪೋಲಿಸ್‌ಪಡೆ ಮತ್ತು ಸೈನ್ಯಬಲ ಎಂಬ ರಾಜದಂಡದಿಂದ ಹಣಿದು ಮಣಿಸಬಹುದು. ಒಂದೊಂದು ಶಾಸನದ ಬೆಂಬಲಕ್ಕೂ ರಾಷ್ಟ್ರಶಕ್ತಿಯ (State power) ಮನವೊಲಿಸುವ ಮತ್ತು ಕೊನೆಗೆ ಘಣಿಸುವ ಅನುಕೂಲವಿದೆ.

ರಾಷ್ಟ್ರದ ಆಡಳಿತದ ಯಂತ್ರವು ಅಧೀನದಲ್ಲಿರದೆ ಜಗತ್ತಿನಲ್ಲಿರುವ ಯಾವ ಪಕ್ಷದವರಿಂದಲೂ ಸಾಮ್ಯವಾದವನ್ನು ಸಾಧಿಸುವುದಾಗದು. ಈ ರಾಷ್ಟ್ರ-ಸೂತ್ರಗಳು ಒಂದು ಪಕ್ಷದವರ ಕೈಗೆ ಪ್ರಜಾಭಿಮತದಿಂದ ಬರುವುದಾಗಲಿ "ಒಡನೆಯೇ ಪ್ರಯೋಗಿಸಿದ ಹಿಂಸಾಶಕ್ತಿಯ ಒತ್ತಾಯದಿಂದ ಬರುವುದಾಗಲಿ ನಮ್ಮ ಇಲ್ಲಿಯ ಚರ್ಚೆಗೆ ಅನ್ವಯಿಸುವುದಿಲ್ಲ.

ಇದರ ಉಪಸಿದ್ಧಾಂತವೆಂದು ಇನ್ನೊಂದು ಸಂಗತಿಯನ್ನು ಹೇಳಬಹುದು. ಸಮರ್ಥರಾದ, ಅಂದರೆ ರಾಷ್ಟ್ರವನ್ನು ವಶದಲ್ಲಿಟ್ಟುಕೊಂಡ ಒಂದು ಪಕ್ಷದವರು ಸಾಮ್ಯವಾದವನ್ನು ನೆಲೆಗೊಳಿಸಲು ಎರಡರಲ್ಲಿ ಒಂದು ಸಾಧನವು ಬೇಕೇಬೇಕು. ಎದುರಾಳಿಗಳನ್ನು ಮಣಿಸಲು ಬೇಕಾದ ಬಲವಾಗಲಿ ವಿರೋಧವನ್ನು ಕಡೆಗಾಣಿಸುವ ಪ್ರಜಾಮತದ ಬೆಂಬಲವಾಗಲಿ ಇಲ್ಲದೆ ನಡೆಯದು. ಕೊನೆಗೆ ಎರಡರ ತಾತ್ಪರ್ಯವೂ ಒಂದೇ. ಸಾಮ್ಯವಾದದ ರಾಷ್ಟ್ರದಲ್ಲಿ ದಮನಶಕ್ತಿ (Coercive power) ಇರುವುದಾದರೆ ಅದೆಲ್ಲವೂ ಪ್ರಜಾಮತದ ಆಧಾರದಿಂದಲೇ ಬರುವುದು. ಆಸ್ತಿಯುಳ್ಳವರ ಬೆಂಬಲವೆಲ್ಲವೂ ಹೆಚ್ಚಾಗಿ ವಿರೋಧ ಪಕ್ಷಕ್ಕೆ ದೊರೆಯುವುದು.

ರಾಷ್ಟ್ರದ ಒಡೆತನವಿರಬೇಕು. ಅದನ್ನು ಕಾಪಾಡುವ ಸಿದ್ಧತೆ ಇರಬೇಕು. ಹೀಗಿರುವಪಕ್ಷದವರು ಜಗತ್ತಿನಲ್ಲಿ ಸಾಮ್ಯವಾದದ ಸುಂದರ ಸೌಧವೊಂದನ್ನು ನಿರ್ಮಿಸಬಲ್ಲರು. ಇಂತಹ ಪಕ್ಷವು ಇದನ್ನು ಕೈಗೂಡಿಸಲು ಮುಂಚೆ ಏನು ಮಾಡಬೇಕು ? ಸುಲಿಗೆಗಾರರನ್ನೂ ವೃಕೋದರರಾದ ಬಂಡವಾಳಗಾರರನ್ನೂ ಬಯಲಿಗೆಳೆದು ಗುಂಡುಗಳಿಂದ ಅವರ ರುಂಡಗಳನ್ನು ಚೆಂಡಾಡಬೇಕೋ ? ಪಂಡಿತ ಜವಾಹಿರಲಾಲರು ಒಂದು ವೇಳೆ ಸಾಮ್ಯವಾದೀ ಭಾರತದ ಪ್ರಧಾನರು ಅಥವಾ ಅಧ್ಯಕ್ಷರಾದರೆ ಸಂಯುಕ್ತ ಪ್ರಾಂತದ ತಾಲೂಕುದಾರರನ್ನೆಲ್ಲ ಸಾಲಾಗಿ ನಿಲ್ಲಿಸಿ ಅವರನ್ನೆಲ್ಲ ಚೂರುಚೂರಾಗಿಸಿ ಗಾಳಿಗೆ ತೂರಬೇಕೋ ? ಮಹಾಜನರ ಮತ್ತು ರಾಜರ ಕೋಶಗಳನ್ನು ಕಸಿದುಕೊಂಡು ಪ್ರಜೆಗಳಿಗೆಲ್ಲ ಸಮನಾಗಿ ಹಂಚಿಬಿಡಬೇಕೋ ? ಟಾಟಾ ಕಬ್ಬಿಣದ ಕಾರಖಾನೆಯನ್ನು ಅಲ್ಲಿಯ ದುಡಿತಗಾರರುಗಳ ವಶಕ್ಕೆ ಕೊಟ್ಟು ಅದರಿಂದ ಬೇಕಾದುದನ್ನು ಮಾಡಿಕೊಳ್ಳಿರೆಂದು ಬಿಡುವುದು ಸರಿಯೋ ? ದೇಶದ ಹೊಲಗದ್ದೆಗಳನ್ನೆಲ್ಲ ಅಳೆದು ಅದನ್ನು ಜನಸಂಖ್ಯೆಯ ಬಲದಿಂದ ವಿಭಾಗಿಸಿ ಸರಿಪಾಲು ಮಾಡಿ ಒಂದೊಂದು

ತುಂಡನ್ನು ಒಬ್ಬೊಬ್ಬನಿಗೆ ಕೊಟ್ಟು ಬಿಡಬೇಕೋ? ಇದಕ್ಕೆ ಸಾಮ್ಯವಾದವೆನ್ನಬಹುದೋ?

ಇಲ್ಲ. ಸಾಮ್ಯವಾದವು ಇದಕ್ಕಿಂತಲೂ ವಿವೇಕವುಳ್ಳದೂ ವಿಜ್ಞಾನಸಮ್ಮತವಾದುದೂ ಹೆಚ್ಚು ನಾಗರಿಕತೆಯುಳ್ಳದೂ ಆಗಿದೆ.

ಹಾಗಾದರೆ ಪಂಡಿತ ಜವಾಹರಲಾಲರೇನು ಮಾಡತಕ್ಕದು?

ನಾವು ವಾಸಿಸುವ ನಮ್ಮ ನಾಡಿನ ಮತ್ತು ಹೊರನಾಡುಗಳ ಸಮಾಜಗಳನ್ನೆಲ್ಲ ಪರೀಕ್ಷಿಸಿದರೆ ಈ ಪ್ರಶ್ನೆಗೆ ಉತ್ತರವು ಸಿಕ್ಕುವುದು.

## ಅಸಮತೆಯು ಸಮಾಜದ ಕೇಂದ್ರಸಮಸ್ಯೆ

ಕಣ್ತೆರೆದೊಡನೆ ನಮಗೆ ಶ್ರೇಣಿ ( Rank ), ಸಂಸ್ಕೃತಿ, ಸಂದರ್ಭಗಳ ವಿಚಿತ್ರವಾದ ಮತ್ತು ದುಃಖದಾಯಕವಾದ ಅಸಮತೆಯು ಕಾಣುವುದು. ಎಲ್ಲೆಲ್ಲಿಯೂ ಜೀವನದ ಸದ್ವಸ್ತುಗಳ ಅಸಮಾಧಾನಕಾರಕವಾದ ಅಸಮವಾದ ಪಾಲುಗಳು. ಬಹುಸಂಖ್ಯಾಕರ ಪಾಲಿಗೆ ಬಿಟ್ಟಿರುವುದು ಬಡತನ, ಹಸಿವು, ಹೊಲಸು, ಹೊಲಬುಗೇಡಿತನ ಮತ್ತು ಬೇಸಬೇಸರಿಕೆ ಇವುಗಳ ಬಳಗವನ್ನು. ಅತ್ತ ಆರಿಸಿದ ಕೆಲವು ಜನರಿಗೆ ಮಾತ್ರ ಅಧಿಕಾರ, ಸ್ಥಾನಮಾನ, ಸಂಸ್ಕೃತಿ, ವಿಶ್ರಾಂತಿ, ವಿಲಾಸಗಳ ಪಂಚಾಮೃತ. ಈ ಪಕ್ಷಪಾತವು ಇನ್ನೆಲ್ಲಿಗಿಂತಲೂ ನಮ್ಮಲ್ಲಿ ವಿಶೇಷವಾಗಿದೆ. ಒಂದು ಕಡೆ ಬಡತನದ ಬೇಗೆ, ಇನ್ನೊಂದು ಕಡೆ ಧನಿಕರ ದೌಲತ್ತು; ಇತ್ತ ನಿರಂಕುಶ ಪ್ರಭುತ್ವ, ಅತ್ತ ಅಧೋಗತಿಯ ಅಂಧಂತಮಸ್ಸು; ಈ ನೋಟವು ಸುಖವರಿಯದ ಭಾರತದಲ್ಲಲ್ಲದೆ ಇನ್ನೆಲ್ಲಿ ಸಿಕ್ಕುವುದು? ಲೆಕ್ಕವಿಲ್ಲದ ಸಾಮಾಜಿಕ ಸಂಕಟಗಳ ಗರ್ಭದಂತಿದ್ದ ಈ ಅಸಮತೆಯೇ ನಮ್ಮ ಸಮಾಜದ ಕೇಂದ್ರ ಸಮಸ್ಯೆಯಾಗಿದೆ. ಇದನ್ನು ಬಿಡಿಸುವುದಕ್ಕಾಗಿಯೆ ಎಂದಿನಿಂದಲೂ— ಎಂದಿಗಿಂತಲೂ ಹೆಚ್ಚಾಗಿ ಇಂದು— ದೊಡ್ಡವರೆಂಬವರು ಹಂಗುದೊರೆದು ಹೋರಾಡುತ್ತಿದ್ದಾರೆ. ಈ ಅಸಮತೆಯ ದುರಿತಗಳನ್ನು ದುಮ್ಮಾಳಿಸಲು ದಾನಧರ್ಮದ ಕಲ್ಪನೆಯುದಯಿಸಿತು. ದತ್ತಿಗಳೂ ( Endowments ) ಛತ್ರಗಳೂ ಹುಟ್ಟಿದುವು. ಬಡವರನ್ನು ಕಾಪಾಡುವ ಕರುಣೆಯಿಡಿರೆಂದು ಸಿರಿವಂತರಿಗೆ ಬೇಡಿದುದಾಯಿತು. ಬಯಕೆಗಳನ್ನು ಕಡಿಮೆ

ವಮಾಡಿದುದಾಯಿತು. ಬಡತನವನ್ನು ಹೊಗಳಿ ಪುರಸ್ಕರಿಸಿಯೂ ಐಸಿರಿಯನ್ನು ತೆಗಳಿ ತಿರಸ್ಕರಿಸಿಯೂ ಆಯಿತು. ಆದರೆ ಅಸಮತೆಯು ಇದ್ದಂತೆಯೆ ಇದೆ.

ಸಾಮ್ಯವಾದಿಯ ಪ್ರತೀಕಾರವು ಮಾತ್ರ ಬೇರೆ ತರದ್ದು. ವೈದ್ಯನು ರೋಗನಿದಾನವನ್ನು ಮಾಡುವಂತೆ ಆತನು ಈ ಸಮಸ್ಯೆಯನ್ನು ಎದುರಿಸುವನು. ಈ ಸಾಮಾಜಿಕ ರೋಗದ ಮೂಲವನ್ನೇ ಕಂಡುಹಿಡಿಯಬೇಕೆನ್ನುವನು. ಅಸಮತೆಯಿರುವುದಂತೂ ನಿಜವೇ ಎಂದು ನಂಬಿ, ನೇರವಾಗಿ ಅದನ್ನು ಸರಿಪಡಿಸಲು ಆತನು ಹೋಗನು. ಈ ಹೆಚ್ಚುಕಡಿಮೆಯ ಹುಟ್ಟಡಗುವಂತೆ ಅದರ ಬುಡವನ್ನೇ ಕಡಿದೊಗೆಯಬೇಕೆಂದು ಆತನ ಹವಣಿಕೆ.

## ಜೀವಶಾಸ್ತ್ರಕ್ಕನುಗುಣವಾದ ವ್ಯತ್ಯಾಸ

ಈ ಕೇಡಿನ ಬುಡವನ್ನು ಹುಡುಕುವ ಸಾಮ್ಯವಾದಿಗೆ ತೀರ ಮೊದಲು ಜೀವಶಾಸ್ತ್ರಜ್ಞನು ಎದುರಾಗುವನು. ಮಾನವರೆಲ್ಲ ಸಮತೆಯಿಂದ ಜನ್ಮ ತಾಳುವುದಿಲ್ಲ, ಪ್ರಜಾಪ್ರಭುತ್ವವಾದಿಯು ಆಗಿಂದಾಗ ಹೇಳುವಂತೆ ಅವರು ಅಸಮರಾಗಿಯೇ ಹುಟ್ಟುವರು ಎಂದು ಆತನಿಗೆ ಹೇಳುವನು. ನಮ್ಮ ನಮ್ಮ ಆಂತರಿಕ ಶಕ್ತಿಯಲ್ಲಿ ಅದರ ಗುಣ ಪ್ರಮಾಣಗಳೆರಡರಿಂದಲೂ ಜನ್ಮತಃ ವ್ಯತ್ಯಾಸವಿದ್ದೇಯಿದೆಯಂತೆ. ಇದು ನಿಜವಾದುದು, ನಿರ್ವಿವಾದಾಸ್ಪದವಾದುದು. ಜೀವಶಾಸ್ತ್ರಜ್ಞರ ಈ ಸಿದ್ಧಾಂತವನ್ನು ಆಚಾರವಾದಿಯು ಸಹ ತೊಂದರೆಯಿಲ್ಲದೆ ಒಪ್ಪುವನು.

ಸಾಮ್ಯವಾದಿಯ ಸಮಾಜದ ಅಸಮತೆಗಳ ಈ ಶೋಧನ ಪರೀಕ್ಷಣಗಳಿಗೆ ಜೀವಶಾಸ್ತ್ರದ ಮೇರೆಗಿನ ವ್ಯತ್ಯಾಸದಿಂದ ಯಾವ ಪರಿಣಾಮವುಂಟಾಗುವುದೆಂಬುದನ್ನು ನೋಡುವಾ. ಬೇರೆ ಸಂಗತಿಗಳಂತೆ ಮಾನವನ ಶಕ್ತಿಗಳ ವಿಕಾಸದ ವಿಷಯದಲ್ಲಿಯೂ ಈ ವ್ಯತ್ಯಾಸದ ಸಂಭವವಿದೆಯೆಂಬುದನ್ನು ಆತನು ಬಲ್ಲನು.

ಸಮಾಜದ ಒಂದು ತುದಿಯಲ್ಲಿ ಬಹುಜ್ಞಾನಕ ಬುದ್ಧಿಯವರ ಚಿಕ್ಕ ಗುಂಪೊಂದಿದ್ದರೆ ಮತ್ತೊಂದು ಕೊನೆಯಲ್ಲಿ ತಿಳಿಗೇಡಿಗಳಾದ ಮೂಢರ ಗೂಡೊಂದಿರುವುದು. ನಟ್ಟನಡುವೆ ಮಾತ್ರ ಹೆಚ್ಚುಕಡಿಮೆ ಸಮಶಕ್ತಿಯುಳ್ಳ ಬಹುಸಂಖ್ಯಾಕವಾದ ಮಾನವವರ್ಗವೆಲ್ಲ ಇರುವುದು.

ಈ ಜೀವವ್ಯತ್ಯಾಸಗಳೆಲ್ಲ ಹಲವು ಸಾಮಾಜಿಕ ರೂಪಗಳಾಗಿ ತೋರ್ಪಡು ವುವು. ಕಲಾವಿಜ್ಞಾನಗಳಲ್ಲಿಯೂ ವಿದ್ಯಾರ್ಜನೆಯಲ್ಲಿಯೂ ಬೇರೆ ಬೇರೆ ವ್ಯಕ್ತಿಗಳು ಪಡೆದ ಸಿದ್ಧಿಗಳಲ್ಲಿ ಈ ವ್ಯತ್ಯಾಸವು ಕಂಡುಬರುವುದು. ಹಾಗೆಯೇ ಮಡ್ಡು ದರ್ಜೆಗಳಲ್ಲಿಯೂ ಅಧಿಕಾರ ಅವಕಾಶಗಳಲ್ಲಿಯೂ ಹೆಚ್ಚುಕಡಿಮೆಗಳಿರು ವುದುಂಟು. ಸಮಾಜದಲ್ಲಿ ರಾಮನ್, ರವೀಂದ್ರನಾಥರಂತಹರು ಇದ್ದಾರೆಂಬ ಬಗೆಗೆ ಸಾಮ್ಯವಾದಿಯು ಅಸಮಾಧಾನವನ್ನು ತಳೆದು, ಎಂದೆಂದೂ ಪ್ರತಿಭಟಿ ಸಿಲ್ಲ. ಏನೆಂದರೂ ಅಂತಹರಿರುವುದರಿಂದ ಅವನಿಗೆ ಆನಂದವೇ ಆಗುವೆ. ಆದರೆ ಸ್ವವಿಕಾಸಕ್ಕೆ ಸಾಕಷ್ಟು ಅವಕಾಶವು ಸಿಕ್ಕದಿರುವುದರಿಂದ ಅಂತಹ ನೂರಾರು ರವೀಂದ್ರರು ಬೆಳಕಿಗೆ ಬಾರದೆ ಹೋಗುವರಲ್ಲ, ಎಂಬುದೇ ಅವನ ವ್ಯಸನ. ನಿಸರ್ಗದೇವಿಯ ಪ್ರಸಾದದಿಂದ ನಮ್ಮಲ್ಲಿ ಕೆಲವರೇ ಮಹಾಕವಿಗಳೂ ಅಪ್ರತಿಮ ವಿಜ್ಞಾನಿಗಳೂ ಆಗುವರೆಂಬ ಸಂಗತಿಯಲ್ಲಿ, ಅಸಮತೆಯ ದುರಿತವು ಅಡಗಿದೆ ಯೆಂದು ಸಾಮ್ಯವಾದಿಗಳಾಗಲಿ ಇತರರಾಗಲಿ ಎಂದೂ ಹೇಳುವುದಿಲ್ಲ. ಆದರೆ ಮೇಲೆ ವಿವರಿಸಿದ ಅಂತಸ್ತು, ಹಣ ಮುಂತಾದ ಎರಡನೆಯ ತರದ ಹೆಚ್ಚು-ಕಡಿಮೆಗಳಲ್ಲಿಯೇ ಅಸಮತೆಯ ಕೇಡು ಬೀಡುಮಾಡಿಕೊಂಡಿದೆಯೆಂದು ಸಾಮ್ಯವಾದಿಯ ಮತ. ನಮ್ಮ ಆಧುನಿಕ ಜಗದಲ್ಲಿ ಎಲ್ಲೆಲ್ಲಿಯೂ ಆಸ್ತಿಗೆ ಪ್ರಾಶಸ್ತ್ಯವಿದ್ದೇ ಇದೆ. ಈ ಆಸ್ತಿಯ ಅಸಮ ವಿಭಾಗವೇ ಸಮಾಜದ ಸಮ ಸ್ಯೆಯ ಒಳದಿರುಳು.

## ಸಾಂಪತ್ತಿಕ ಅಸಮತೆ

ಹಾಗಾದರೆ ಈ ಹಣದ ಹೆಚ್ಚುಕಡಿಮೆಗೆ ಕಾರಣವೇನು ? ಇದಕ್ಕೂ ಜೀವಶಾಸ್ತ್ರದ ಸಂಬಂಧವಿದೆಯೆಂದು ಯಾರಾದರೂ ಸೂಚಿಸಬಹುದು. ನಮ್ಮಲ್ಲಿ ಜಾಣರಾಗಿದ್ದವರು ತಮ್ಮ ವ್ಯವಹಾರವನ್ನು ಚಾತುರ್ಯದಿಂದ ಹೆಚ್ಚು ಸೊಗಸಾಗಿ ಸಾಗಿಸುವರು. ಆದುದರಿಂದ ಅವರು ಬೇರೆಯವರಿಗಿಂತ ಹೆಚ್ಚು ಹಣಗಾರರಾಗುವರು. ಈ ಅಭಿಪ್ರಾಯವನ್ನು ಒಂದು ನಿಮಿಷ ಒಪ್ಪಿಕೊಳ್ಳುವಾ. ಆದರೆ ಪಿತ್ರಾರ್ಜಿತದಿಂದ ಹಣ ಪಡೆದವರ ವಿಷಯಕ್ಕೆ ಏನು ಹೇಳಬಹುದು ? ಪಿತ್ರಾರ್ಜಿತದಿಂದ ಪ್ರಾಪ್ತವಾದ ಹಣದ ಬಗೆಗೆ ಜೀವಿಗಳ ಗುಣಧರ್ಮಗಳ ಭೇದದ ಯಾವ ಸಂಬಂಧವೂ ಇರುವುದಿಲ್ಲ. ಒಬ್ಬ ಕೋಟ್ಯಧೀಶನ ಮಗನು ಮೂರ್ಖನಾಗಲಿ ಮಹಾಮತಿಯಾಗಲಿ, ತಂದೆಯು ಗಳಿಸಿಟ್ಟ ಕೋಟಿಗಟ್ಟಲೆ

ಹಣವನ್ನು ಖಂಡಿತವಾಗಿಯೂ ಪಡೆಯುವನು. ಇಲ್ಲಿ ಆತನ ಹಣದ ಗಳಿಕೆಗೆ ಸಮಾಜದಲ್ಲಿ ರೂಢವಾಗಿರುವ ಒಂದು ಪದ್ಧತಿಯೇ ಕಾರಣವಲ್ಲದೆ ಆತನ ಯೋಗ್ಯತೆಯಲ್ಲ. ಪಿತ್ರಾರ್ಜಿತ ಆಸ್ತಿಯೆಂಬುವನ್ನು ತೆಗೆದು ಬಿಟ್ಟರೆ ಈಗ ಹಣದ ಹೆಚ್ಚಳದಿಂದ ಕೊಬ್ಬಿರುವ ಹಲವರು ಕೂಡಲೆ ಬಡವರಾಗುವರು.

ಆದರೆ ತಮ್ಮ ದೇಹವನ್ನು ದಣಿಸಿ, ಬುದ್ಧಿಯನ್ನು ಬಳಸಿ ಬಹುದೊಡ್ಡ ಬಂಡವಾಳವನ್ನು ಗಳಿಸಿದವರನ್ನು ನೋಡಿದರೆ ನಮಗೇನು ತೋರುವುದು ? ಕೇವಲ ಅವರ ಹೆಚ್ಚಿನ ಯೋಗ್ಯತೆಯಿಂದಲೆ ಅವರು ದುಡ್ಡು ದೊರಕಿಸಿದರೆಂದು ತಿಳಿಯ ಬರುವುದಿಲ್ಲವೇ ? ಅಹುದು. ಗೆಲವುಗಟ್ಟಿ ಒಂದು ವ್ಯವಹಾರವನ್ನು ನಡೆಸಲು ಒಂದು ತರದ ಒಂದು ಮಟ್ಟದ ಯೋಗ್ಯತೆ ಬೇಕೆಂಬುದು ನಿಜ. ಆದರೆ ಒಂದೇ ತರಗತಿಯ ಯೋಗ್ಯತೆಯನ್ನೇ ಧನೋತ್ಪಾದನಕ್ಕೆ ಅನುಕೂಲವಾಗಿರಿಸಿ ಬೇರೆ ಎಲ್ಲವೂ ದುಡ್ಡಿಗಾಗಿ ಧನಿಕರ ಕೃಪಾದೃಷ್ಟಿಗೊಳಗಾಗುವಂತೆ ಏರ್ಪಾಡು ಮಾಡಿದ ಪರಮಾತ್ಮನ ನ್ಯಾಯಬುದ್ಧಿ ಬಹು ವಿಚಿತ್ರವಾಗಿರಬೇಕಲ್ಲವೇ? ತನ್ನ ಕಾಲಕ್ಕೆ ಎಲ್ಲರಿಗಿಂತ ಮಿಗಿಲಾದ ಮಹಾ ಗಣಿತಿಯೊಬ್ಬನಿರಬಹುದು. ಆತನಿಗೆ ಅಮರಕೀರ್ತಿಯೂ ಬರಬಹುದು. ಆದರೆ ಇದರಿಂದ ದ್ರವ್ಯಸಂಪಾದನೆಯಾದೀತೆಂಬ ನಿಯಮವಿಲ್ಲ. ವ್ಯಾಪಾರದ ಕೆಲವೊಂದು ರೂಢವಾದ ಕ್ರಮಗಳನ್ನನುಸರಿಸಿ ಹಣ ಗಳಿಸುವ ವರ್ತಕನೊಬ್ಬನ ಯೋಗ್ಯತೆಗಿಂತ ಈ ತೀಕ್ಷ್ಣಬುದ್ಧಿಯ ಲೆಕ್ಕಿಗನ ಯೋಗ್ಯತೆ ಕೀಳ್ತರದ್ದಾಗಬಹುದೋ ? ವಿಜ್ಞಾನಿಯು, ಅದೆಂತಹ ಜಾಣನಾದರೂ, ವರ್ತಕನಾಗದ ಹೊರತು ತನ್ನ ಪ್ರಯೋಗಶಾಲೆಯಲ್ಲಿಯೇ ಹಣವನ್ನು ಗಳಿಸಲಾರನು. ವರ್ತಕನ ಪ್ರಯೋಗಾಲಯವೇ ನಿಜವಾಗಿಯೂ ಧನೋತ್ಪಾದಕವಾದುದು. ಅವನ ಈ ಪ್ರಯೋಗಾಲಯವು (ಒಂಡಸಾಲೆ) ಹೇಗಿದೆ ? ಅಲ್ಲಿ ಹಣವು ಹುಟ್ಟುವುದು ಹೇಗೆ ? ಅದರ ಸಂಗ್ರಹವಾಗುವುದೆಂತು ? ಈ ಸಂಗತಿಗಳನ್ನು ನಾವು ಈಗ ತಿಳಿದುಕೊಳ್ಳಬೇಕು.

## ಹಣದ ಹುಟ್ಟು ಮತ್ತು ಸಂಗ್ರಹ

ಈ ಜಗತ್ತಿನಲ್ಲಿ ಮಾನವ ವರ್ಗ ಒಂದು ಕಡೆಗಾದರೆ, ಭೂಮಿ ಇನ್ನೊಂದು ಕಡೆಗೆ. ಧನವೆಂಬುದೆಲ್ಲ ಪ್ರಕೃತಿಯ ಗರ್ಭದಲ್ಲಿದೆ. ಮಾನವನು

ತನಗೆ ಬೇಕಾದುದನ್ನು ದೊರಕಿಸಲು ಅವಳ ಅಂಗಳದಲ್ಲಿ ದುಡಿಯಬೇಕು. ತನ್ನ ಪ್ರಯೋಜನಕ್ಕೆಂದು ಅಲ್ಲಿ ತಾನು ಗಳಿಸಿದುದೆಲ್ಲವೂ ಆತನ ಧನ. ಈ ಮೇರೆಗೆ ಪ್ರಕೃತಿಯಲ್ಲಿಯೇ ಧನದ ಉಗಮ; ಮಾನವನ ಶ್ರಮವೇ ಅದನ್ನು ಹುಟ್ಟಿಸುವ ಶಕ್ತಿ. ಇದುವೆ ಅರ್ಥಶಾಸ್ತ್ರಕ್ಕೆಲ್ಲ ಅಡಿಗಲ್ಲು.

ಹಣದ ಸಂಗ್ರಹವಾಗುವುದು ಹೇಗೆ? ಮಾನವನು ಭೂಮಿಯಿಂದ ತನ್ನ ಉಪಜೀವನಕ್ಕೆ ಸಾಲುವಷ್ಟು ಮಾತ್ರ ದೊರಕಿಸಿದರೆ ಕೂಡಿಹಾಕುವುದಕ್ಕೆ ಏನೂ ಉಳಿಯುವುದಿಲ್ಲೆಂಬುದು ನಿಜವೇ. ಮಾನವನು ನಿಸರ್ಗದಿಂದ ಗಳಿಸ ಬಹುದಾದ ಧನದ ಪ್ರಮಾಣವು ಆತನ ಉತ್ಪಾದಕ ಶಕ್ತಿಯನ್ನವಲಂಬಿ ಸುತ್ತದೆ. ಆತನು ಕೆಲಸ ಮಾಡುವ ರೀತಿ ಮತ್ತು ಅದಕ್ಕೆ ಉಪಯೋಗಿಸುವ ಸಾಧನಗಳ ಯೋಗ್ಯತೆ ಇವುಗಳಿಂದ ಅವನ ಉತ್ಪಾದಕ ಶಕ್ತಿಯನ್ನು ಕಂಡು ಹಿಡಿಯಬಹುದು. **ಅಂದ ಬಳಿಕ ಧನದ ಸಂಗ್ರಹವು ಎಂದಿಗಾದರೂ ಸಾಧ್ಯವಾಗಬೇಕಾದರೆ, ಮಾನವನ ಉತ್ಪಾದಕ ಶಕ್ತಿಯು ಆತನ ಉಪಜೀವಿಕೆಗೆ ಬೇಕಾಗುವುದಕ್ಕಿಂತಲೂ ಹೆಚ್ಚು ಗಳಿಸುವಷ್ಟು ಯೋಗ್ಯತೆಯುಳ್ಳುದಾಗಬೇಕು.** ಇದು ಧನಸಂಗ್ರಹದ ಮೂಲ ಮಾತು. ತೀರ ಕೆಳಗಿನ ತರಗತಿಯು ಬದುಕಿಗೆ ಬೇಕಾಗುವುದಕ್ಕಿಂತಲೂ ಹೆಚ್ಚು ದೊರಕಿ ಸುವಷ್ಟರ ಮಟ್ಟಿಗೆ ತೋಟಗಾರಿಕೆ, ಜಾಲಗಾರಿಕೆ, ಬೇಟೆ ಮುಂತಾದವುಗಳ ಪ್ರಗತಿಯಾದಾಗ ಧನದ ಸಂಗ್ರಹವು ಶಕ್ಯವಾಗುವುದು. ಉಪಜೀವಿಕೆಗೆ ಸಾಲು ವಷ್ಟಕ್ಕಿಂತಲೂ ಹೆಚ್ಚು ಸಂಪಾದಿಸುವ ಶಕ್ತಿಯುಳ್ಳ ಉತ್ಪತ್ತಿ ಕಲೆಗಳುಳ್ಳ ಸಮಾಜದ ಪ್ರತಿಯೊಬ್ಬ ಮನುಷ್ಯನೂ ಧನದ ಕೆಲವೊಂದು ಸಂಗ್ರಹವನ್ನು ಮಾಡಬಲ್ಲನು. ಆದರೆ ಆತನಿಗೆ ಕೆಲಸ ಮಾಡುವ ಸ್ವಾತಂತ್ರ್ಯವಿರಬೇಕು. ತನ್ನವೇ ಆದ ಸಾಧನಗಳಿರಬೇಕು. ಸ್ವತಂತ್ರವಾದ ಹೊಲಗದ್ದೆಗಳಿರಬೇಕು. ಅದಲ್ಲದೆ ತಾನು ಗಳಿಸಿದುದನ್ನೆಲ್ಲ ತನಗಾಗಿಯೇ ಇಟ್ಟುಕೊಳ್ಳುವ ಅವಕಾಶ ವಿರಬೇಕು. ವ್ಯಕ್ತಿಯ ಅತ್ಯಂತ ಹೆಚ್ಚಿನ ಗಳಿಕೆ ಮತ್ತು ಅತ್ಯಂತ ಕಡಿಮೆಯ ಬಳಿಕೆ ಇವೆರಡರ ಅಂತರವೇ ಆತನ ಸಂಗ್ರಹದ ಪರಮಾವಧಿ ಪ್ರಮಾಣವೆಂದು ತಿಳಿಯಬಹುದು. ಇನ್ನು ಕೆಲವು ಕುಟುಂಬದವರು ತೀರ ಕಡಿಮೆ ಬಳಸುವು ದನ್ನು ಬಿಟ್ಟು ತಾವು ಗಳಿಸಿದುದೆಲ್ಲವನ್ನೂ ವೆಚ್ಚಮಾಡಿಬಿಡಬಹುದು. ಇಂತಹ ರಿಂದ ಏನನ್ನೂ ಗಳಿಸಲಾಗುವುದಿಲ್ಲ. ಆದರೆ ಅವರು ಕೂಳುಗೇಡಿಗಳಾಗಿಯೂ

ಹೋಗಲಾರರು. ಏಕೆಂದರೆ, ನಮ್ಮ ಉತ್ಪಾದಕ ಶಕ್ತಿಯು ಉಪಜೀವಿಕೆಯ ಮಟ್ಟವನ್ನು ಮುಟ್ಟಿದೆ ಮಾತ್ರವಲ್ಲ, ಮೀರಿಯೂ ಬೆಳೆದಿದೆಯೆಂಬುದನ್ನು ನಾವು ನಂಬಿದ್ದೇವೆ.

ಈ ಸಮಾಜದಲ್ಲಿ ಕೆಲವರು ಮಿಗಿಲಾದ ಜಾಣ್ಮೆಯುಳ್ಳವರಿರಬಹುದು. ಸಹಜವಾಗಿಯೇ ಅವರು ಇತರರಿಗಿಂತಲೂ ಮಿಕ್ಕಿ ಗಳಿಸಬಹುದು. ಅಲ್ಲದೆ ಅವರು ಮಿತವ್ಯಯದ ಸ್ವಭಾವದವರಿದ್ದರೆ ಬೇರೆಯವರಿಗಿಂತ ಹೆಚ್ಚು ಸಂಗ್ರಹವನ್ನೂ ಮಾಡಬಹುದು. ಇತ್ತ ಬುದ್ಧಿ ಕಡಿಮೆಯಿದ್ದವರು, ಬೇರೆಯವರಿಗಿಂತ ಕಡಿಮೆ ಅಥವಾ ಒಮ್ಮೊಮ್ಮೆ ಏನನ್ನೂ ಉಳಿಸಲಿಕ್ಕಿಲ್ಲ. ಇಷ್ಟು ಮಾತ್ರ ನಿಜ-ಇಂತಹ ಸಮಾಜದಲ್ಲಿ ಸಶಕ್ತನಾದ ಪ್ರತಿಯೊಬ್ಬ ಮನುಷ್ಯನೂ ಧನಸಂಗ್ರಹ ಮಾಡಬಲ್ಲನು, ಅಥವಾ ಕೊನೆಗೆ ತನ್ನ ಬಾಳನ್ನಾದರೂ ನಡೆಸಬಲ್ಲನು. ಆದರೆ ಅವನಿಗೆ ಕಾರ್ಯಸ್ವಾತಂತ್ರ್ಯ, ಕೆಲಸದ ಸಲಕರಣೆಗಳ ಒಡೆತನ, ಸ್ವತಂತ್ರ ಭೂಮಿ ಇವುಗಳಿರಬೇಕಲ್ಲದೆ ತಾನು ಗಳಿಸಿದುದರ ಮೇಲೆ ಆತನ ಪೂರ್ಣ ಅಧಿಕಾರವಿರಬೇಕು.

ಉದಾಹರಣೆಗಾಗಿ ಇಟ್ಟುಕೊಂಡ ಈ ಸಮಾಜವನ್ನು ತೊರೆದು ನಾವಿರುವ ವಾಸ್ತವ ಸಮಾಜದತ್ತ ತಿರುಗೋಣ. ಉದ್ಯೋಗ ಮತ್ತು ಒಕ್ಕಲುತನ ಇವೆರಡೂ ಈಗ ಬಹಳ ಬೆಳವಣಿಗೆಯನ್ನು ಹೊಂದಿವೆ. ಮಾನವ ವರ್ಗದ ಮೂಲ ಸಮಾಜದ ಉಪಜೀವಿಕೆಯ ತರಗತಿಗಿಂತಲೂ ಹೆಚ್ಚಿನ ಅಂತಸ್ತಿನ ಉಪಜೀವನವನ್ನು ನಾವು ನಡೆಸುತ್ತಿದ್ದರೂ ನಮ್ಮ ಬಳಿಕೆಯನ್ನು ಸಹ ನುಂಗುವಷ್ಟು ಈಗಿನ ಉತ್ಪಾದಕ ಶಕ್ತಿಯ ಏಳ್ಗೆಯಾಗಿದೆ. ಹಿಂದುಸ್ಥಾನದ ಒಕ್ಕಲಿಗನ ಸಾಗುವಳಿಯ ವಿಧಾನವೂ ಕೃಷಿಸಾಧನಗಳೂ ಬೇರೆ ನಾಡುಗಳಲ್ಲಿಗಿಂತ ಹಳೆಯವುಗಳಾದರೂ ಆತನು ತನ್ನ ಜೀವನಕ್ಕೆ ಬೇಕಾಗುವುದಕ್ಕಿಂತ ಹೆಚ್ಚು ಕಾಳುಕಡಿಗಳನ್ನು ಹುಟ್ಟಿಸುತ್ತಿದ್ದಾನೆ. ಆದರೂ ಇಲ್ಲಿ ಲಕ್ಷೋಪಲಕ್ಷ ಜನರಿಗೆ ಒಳಿತಾದ ಒಂದು ಊಟವು ಕೂಡ ಸಿಕ್ಕುವುದಿಲ್ಲ. ಕೆಲವರು ಮಾತ್ರ ತಮಗೆ ಬೇಕಾದುದನ್ನು ಪಡೆಯುವುದಲ್ಲದೆ ಹೆಚ್ಚಿನ ಹಂತದ ( ತರಗತಿಯ ) ಸುಖವನ್ನೂ ಸವಿಯುತ್ತಿದ್ದಾರೆ. ಒಂದೆಡೆಯಲ್ಲಿ ಕೂಳಿನ ಕೊರತೆ; ಇನ್ನೊಂದೆಡೆಯಲ್ಲಿ ಸುಖಸಂತೋಷಗಳ ನಿರ್ಭರತೆ! ಈ ಪರಿಸ್ಥಿತಿ ಹೇಗೆ ಉಂಟಾಯಿತು ?

ಮೊದಲು ಬಡವರ ಪಾಡನ್ನು ನೋಡುವಾ. ನಮ್ಮ ಸಮಾಜದ ಸದ್ಯದ ಬೆಳೆದಿರುವ ಉತ್ಪಾದಕ ಶಕ್ತಿಯನ್ನು ಗಮನಕ್ಕೆ ತಂದರೆ ಪ್ರತಿಯೊಬ್ಬ ಭಾರತೀಯನು ಹೊಟ್ಟೆ ತುಂಬಿಕೊಳ್ಳುವುದಲ್ಲದೆ ಧನಸಂಗ್ರಹವನ್ನೂ ಮಾಡ ಬೇಕಾಗಿತ್ತೆಂದು ತೋರುವುದು. ನಿಜವಾಗಿ ನೋಡಿದರೆ ಎಷ್ಟೋ ಜನರು ತಮ್ಮ ಹೊಟ್ಟೆ ಹೊರೆಕೊಳ್ಳಲಾರರು. ಏಕೆಂಬುದನ್ನು ಕೇಳಬೇಕಾಗಿಲ್ಲ. ಮೇಲೆ ವಿವರಿಸಿದ ಧನಸಂಗ್ರಹದ ಮೂಲ ವಿಷಯಗಳು ನಮ್ಮಲ್ಲಿಂದ ಬಹುಶಃ ಸಂಪೂರ್ಣವಾಗಿ ಮಾಯವಾಗಿವೆ. ಜನರೆಲ್ಲರೂ ತಮಗಾಗಿ ತಾವು ಕೆಲಸ ಮಾಡುವುದಿಲ್ಲ. ಅವರಿಗೆ ತಮ್ಮ ಒಡೆತನದಲ್ಲಿರುವ ಭೂಮಿಯಿಲ್ಲ. ಎಷ್ಟೋ ಜನರಿಗೆ ಕೆಲಸ ಮಾಡಲು ಸ್ವತಂತ್ರವಾದ ಸಾಮುಗ್ರಿಗಳೂ ಇಲ್ಲ. ತಮ್ಮ ಉತ್ಪತ್ತಿಯ ಮೇಲೆ ತಮಗೆ ಅಧಿಕಾರವಿಲ್ಲ. ಈ ಅವಾಂತರವು ಹೇಗೆ ಉಂಟಾಯಿತೆಂಬುದೊಂದು ದೊಡ್ಡ ಪುರಾಣವೇ ಆಗಬಹುದು. ಆದರೆ ಈಗಿನ ಪರಿಸ್ಥಿತಿಯಂತೂ ಹೀಗಿದೆಯೆಂಬುದು ಎಲ್ಲರಿಗೂ ತಿಳಿದ ವಿಷಯ. ಪ್ರಜೆಗಳ ಸ್ವಾಧೀನದಲ್ಲಿ ಉತ್ಪತ್ತಿಸಾಧನಗಳಾದ ಭೂಮಿ, ಕೆಲಸದ ಸಾಮುಗ್ರಿ ಮುಂತಾ ದವುಗಳು ಇಲ್ಲದಿರುವುದೇ ನಮ್ಮ ನಾಡಿನ ಬಡತನಕ್ಕೆ ಮೂಲ ಕಾರಣ. ಉತ್ಪತ್ತಿಸಾಧನಗಳಿಗಾಗಿ ಜನರು ದುಡ್ಡು ಕೊಡಬೇಕಾಗುವುದು. ಅವರು ಅವುಗಳಿಗಾಗಿ ಹಣ ಕೊಡಬೇಕಾದ ಪ್ರಮಾಣದಲ್ಲಿ ಅವರಿಗೆ ದೊರಕುವ ಉತ್ಪತ್ತಿ ಯಲ್ಲಿಯ ಅಂಶವು ಕಡಿಮೆಯಾಗುವುದು. ಇದರಿಂದ ಅವರ ಬಡತನವೂ ಬೆಳೆಯುವದು. ಎಷ್ಟೋ ಜನರಿಗೆ ಈ ಉತ್ಪತ್ತಿಸಾಧನಗಳನ್ನು ಕೊಂಡು ಕೊಳ್ಳುವ ಶಕ್ತಿಯೂ ಇಲ್ಲ. ಹೀಗಾಗಿ ತಮ್ಮ ದುಡಿಮೆಯನ್ನಷ್ಟು ಬೇರೆ ಯವರಿಗೆ ಮಾರುವುದಲ್ಲದೆ ಅವರಿಂದ ಇನ್ನೇನೂ ಆಗುವುದಿಲ್ಲ. ಉತ್ಪತ್ತಿ ಸಾಧನಗಳು ಪ್ರತಿಯೊಬ್ಬನಿಗೆ ಪುಕ್ಕಟೆಯಾಗಿ ಸಿಕ್ಕುತ್ತಿದ್ದರೆ ನಾಡಿನಲ್ಲಿ ಬಡತನ ವಿರುತ್ತಿದ್ದಿಲ್ಲ. ಆದರೆ ಈಗಿನ ನಮ್ಮ ಉತ್ಪಾದಕ ಶಕ್ತಿ ಮತ್ತು ಉತ್ಪತ್ತಿ ಸಾಧನಗಳಿಂದ ಹುಟ್ಟುವ ಉತ್ಪತ್ತಿಯು ಜನತೆಗೆ ಸಾಕಾಗದಷ್ಟರ ಮಟ್ಟಿಗೆ ಜನಸಂಖ್ಯೆಯು ಬೆಳೆದಿದ್ದರೆ ಮಾತ್ರ ಬಡತನವು ತಪ್ಪುತ್ತಿರಲಿಲ್ಲ. ಭಾರತದ ಜನಸಂಖ್ಯೆ ಇಷ್ಟು ವಿಪುಲವಾಗಿದ್ದರೂ ಇಲ್ಲಿ ಇಂತಹ ಸ್ಥಿತಿ ಇನ್ನೂ ಪ್ರಾಪ್ತವಾಗಿಲ್ಲ.

ಇನ್ನು ಧನಿಕರ ಸಮಾಚಾರವೇನು? ಕೆಲವರಲ್ಲಿ ಬಡವರಿಗಿಂತಲೂ

ಸಾವಿರ ಪಾಲು ಹೆಚ್ಚು ಹಣವಿರಲು ಕಾರಣವೇನು? ಒಬ್ಬನು ಎಷ್ಟು ಜಾಣನಾದರೂ, ಅವೇ ಉತ್ಪತ್ತಿಸಾಧನಗಳಿಂದ ಯಾವ ತರಗತಿಯ ಉತ್ಪಾದಕ ಶಕ್ತಿಯ ಕಾಲದಲ್ಲಿಯೂ ಇನ್ನೊಬ್ಬನ ಸಾವಿರ ಪಡಿಯಷ್ಟು ಉತ್ಪತ್ತಿಯನ್ನು ಮಾಡಲಾರನು. ಒಂದೇ ಸಮಾಜದ ಏಕಕಾಲದ ವ್ಯಕ್ತಿಗಳ ಉತ್ಪಾದಕ ಶಕ್ತಿಗಳಲ್ಲಿ ಇಷ್ಟು ದೊಡ್ಡ ವ್ಯತ್ಯಾಸವಿರುವುದು ಸಾಧ್ಯವಿಲ್ಲ. ಪ್ರಕೃತಿಯ ಅಂಗಳದಲ್ಲಿ ದುಡಿಯದೆ ಗಳಿಕೆಯಾಗುವುದಿಲ್ಲವೆಂದೂ ಒಬ್ಬನು ತಾನು ಉಪಯೋಗಿಸುವುದಕ್ಕಿಂತಲೂ ಹೆಚ್ಚು ಉತ್ಪತ್ತಿ ಮಾಡದೆ ಉಳಿಸಲಾರನೆಂದೂ ಈ ಮುಂಚೆಯೇ ತಿಳಿಸಿರುವೆವು. ಆದರೆ ಉತ್ಪತ್ತಿಯ ಮೇರೆಯು, ಸಮಾಜದಲ್ಲಿ ಉತ್ಪತ್ತಿ ಕಲೆಗಳು ಪಡೆದ ಮುನ್ನಡೆಯನ್ನವಲಂಬಿಸಿರುತ್ತದೆ. ಉತ್ಪತ್ತಿಯು ಯಾಂತ್ರಿಕವಾಗಿ ನಡೆಯುವ, ತೊಡಕುಳ್ಳ ಪಾಶ್ಚಾತ್ಯ ಸಮಾಜಕ್ಕೂ ಈ ಮಾತು ಸರಿಹೋಗುವುದು. ಅಲ್ಲಿಯಂತೆ ಇಲ್ಲಿಯೂ ಉತ್ಪತ್ತಿಸಾಧನಗಳು—ವಿಶೇಷವಾಗಿ ಔದ್ಯೋಗಿಕ ಉತ್ಪತ್ತಿಯ ಸಾಧನಗಳು – ಬಹಳ ಬೆಳೆದಿರುತ್ತವೆ. ಆದರೆ ಅಲ್ಲಿಯಷ್ಟು ಇಲ್ಲ. ಬೇರೆಬೇರೆಯಾಗಿ ಕೆಲಸ ಮಾಡುವ ಯಾವ ವ್ಯಕ್ತಿಯಿಂದಲೂ ಅವುಗಳನ್ನು ಬೆಳೆಸಲಾಗುವುದಿಲ್ಲ. ಆದರೆ ಇದರಿಂದ ನಮ್ಮ ಪ್ರತಿಪಾದನೆಗೆ ಬಾಧೆಯಿಲ್ಲ. ಉತ್ಪತ್ತಿಯಲ್ಲಿ ಪಾಲುಗೊಂಡ ಎಲ್ಲ ಜನರೂ ತಮ್ಮ ತಮ್ಮ ಪಾಲು ಪಡೆದಿದ್ದರೆ, ನಮ್ಮ ಉದಾಹರಣೆಯ ಸಮಾಜದಲ್ಲಿದ್ದಂತೆಯೇ ಈಗಲೂ ಆಗುತ್ತಿತ್ತು. ಸಮಾಜದ ಪ್ರತಿಯೊಂದು ವ್ಯಕ್ತಿಯ ಕೈಯಲ್ಲಿಯೂ ಸಾಕಷ್ಟು ಉತ್ಪತ್ತಿಯು ಸೇರುತ್ತಿತ್ತು. ಬಡತನವು ಕಣ್ಣಿಗೆ ಬೀಳುತ್ತಿರಲಿಲ್ಲ. ಕೆಲವರ ಬಳಿಯಲ್ಲಿಯೇ ವಿಶೇಷ ಧನಸಂಗ್ರಹವಾಗುತ್ತಿದ್ದಿಲ್ಲ.

ಹಾಗಾದರೆ, ಈಗಿನ ಸಮಾಜದಲ್ಲಿರುವ ಈ ವಿಪುಲ ಸಂಪತ್ತೆಲ್ಲ ಎಲ್ಲಿಂದ ಬಂತು? ಉದ್ಯೋಗಿಗಳಾದ ಜನರು ಒಂದೇ ಸವನೆ ಶೇಖರಿಸಿಟ್ಟ ಗಳಿಕೆಯ ಫಲವಿದು. ಸಾಮಾನ್ಯವಾಗಿ ಒಂದು ಅಂಶವಲ್ಲಿ ಉದ್ಯೋಗಶೀಲತೆ ಮಿತವ್ಯಯಗಳು ಬಹಳ ತಲೆಮಾರುಗಳ ತನಕ ಇಳಿದು ಉಳಿಯುವದಿಲ್ಲ. ಉಳಿದರೂ ಅವು ತಮ್ಮಷ್ಟಕ್ಕೆ ತಾವೇ ವಿಶೇಷವಾದ ದ್ರವ್ಯಸಂಪಾದನೆಯನ್ನು ಮಾಡಿದ್ದು ತಿಳಿದು ಬಂದಿಲ್ಲ. ಇಂದಿನ ಯಾರ ಸಂಪತ್ತಿಗೂ, ಮುಖ್ಯವಾಗಿ ದೊಡ್ಡ ಉದ್ಯೋಗಗಳಿಂದ ಆದ ಸಂಪತ್ತಿಗೆ, ಬಹಳ ಹಿಂದಿನ ಪೂರ್ವಜರ ಸಂಬಂಧ

ವಿಲ್ಲ. ದುಡ್ಡಿನ ಗಳಿಕೆಯ ಗುಟ್ಟು ಶ್ರೀಮಂತರಕ್ತದಲ್ಲಿಯಾಗಲಿ ಒಂದು ವಿಶಿಷ್ಟ ತರದ ಜಾಣ್ಮೆಯಲ್ಲಾಗಲಿ ಇಲ್ಲ.

## ಸುಲಿಗೆಯೇ ಸಂಪತ್ತಿನ ಸೆಲೆ

ಧನಸಂಗ್ರಹವು ಹೇಗಾಗುವುದೆಂಬುದನ್ನು ತಿಳಿಸಿದುದರಲ್ಲಿಯೇ ಇದರ ರಹಸ್ಯವಿದೆ. ಉಪಜೀವಿಕೆಯ ಅಂತಸ್ತನ್ನು ದಾಟಿದ ಉತ್ಪತ್ತಿಶಕ್ತಿಯುಳ್ಳ ಒಬ್ಬ ಮನುಷ್ಯನು ತನಗಾಗಿ ಬೇರೆ ಎಂಟು ಜನರನ್ನು ದುಡಿತಕ್ಕೆ ಹಚ್ಚಿ ಅವರಿಗೆ ಬದುಕಲಿಕ್ಕೆ ಬೇಕಾದಷ್ಟನ್ನು ಮಾತ್ರ ಕೊಟ್ಟು ಮಿಕ್ಕುದನ್ನು ತಾನು ಇಟ್ಟುಕೊಂಡನೆಂದರೆ, ಆತನು ಒಬ್ಬಂಟಿಗನಾಗಿ ದುಡಿಯುವ ಬೇರೆ ಯಾವ ಮಾನವನಿಗಿಂತಲೂ ಎಂಟು ಮಡಿ ಹೆಚ್ಚು ಹಣವನ್ನು ಗಳಿಸುವನು. ಅಲ್ಲದೆ ಆತನು ಕೂಡಲೆ ದೊಡ್ಡ ಧನಿಕನಾಗುವನು. ಅಂದ ಬಳಿಕ ಆತನು ಎಷ್ಟು ವ್ಯಕ್ತಿಗಳನ್ನು ಕೆಲಸಕ್ಕೆ ಹಚ್ಚುವನೋ ಅಷ್ಟರ ಮಟ್ಟಿಗೆ ಆತನ ದ್ರವ್ಯನಿಧಿ ಬೆಳೆಯುವುದು. ಇಂತಹ ಸಮಾಜದಲ್ಲಿ ಇನ್ನೊಬ್ಬನು ಭೂಮಿಯ ಕೆಲವೊಂದು ಭಾಗವನ್ನೇ ತನ್ನ ವಶದಲ್ಲಿಟ್ಟುಕೊಂಡನೆಂದು ತಿಳಿಯುವಾ. ಆ ಸ್ಥಳದ ಮೇಲಿರುವ ತನ್ನ ವಿಶೇಷಾಧಿಕಾರದಿಂದ ಆತನು ಅಲ್ಲಿ ಆಗುವ ಬೇರೆಯವರ ದುಡಿಮೆಯ ಹುಟ್ಟಿನಲ್ಲಿ ತನಗೊಂದು ಪಾಲು ಸಿಕ್ಕದಿದ್ದರೆ ಇತರರಿಗೆ ಕೆಲಸ ಮಾಡಲು ಬಿಡುವುದಿಲ್ಲ. ಅವನೂ ಬೇರೆಯವರಿಗಿಂತ ಹೆಚ್ಚು ಹಣಗಾರ ನಾಗುವನು. ಆತನ ಒಡೆತನದಲ್ಲಿದ್ದ ಹೊಲದ ಅಳತೆ ಮತ್ತು ಅಲ್ಲಿ ದುಡಿಯುವ ಆಳುಗಳಿಂದ ಆತನು ಸೆಳೆಯುವ ಗೇಣಿಯ (Lease) ಅಂಶ ಇವುಗಳ ಪ್ರಮಾಣಕ್ಕನುಸರಿಸಿ ಆತನ ಬಂಡವಾಳವು ಬೆಳೆಯುವುದು. ಇದರಂತೆಯೇ ನಿಸರ್ಗದ ಇತರ ಅನುಕೂಲತೆಗಳ ವಿಷಯ. ಇದುವೆ ಹಣದ ಹೆಚ್ಚುಕಡಿಮೆಯ ಮತ್ತು ಸುಲಿಗೆಯ ಯಥಾರ್ಥದ ನಿಜವಾದ ರಹಸ್ಯ. ಒಬ್ಬನು ಇನ್ನೊಬ್ಬನಿಗಾಗಿ ಏಕೆ ದುಡಿಯಬೇಕು ? ಹೀಗೆ ಮೋಸಕ್ಕೊಳಗಾಗಿ ತನ್ನ ದುಡಿಮೆಯ ಕೆಲವು ಪಾಲನ್ನು ಕಳಕೊಳ್ಳುವುದಕ್ಕಿಂತ ತನ್ನ ದುಡಿತದಿಂದ ಬಂದುದನ್ನೆಲ್ಲ ತಾನೇ ಇಟ್ಟುಕೊಳ್ಳುವುದು ಹೆಚ್ಚು ಲೇಸಲ್ಲವೇ, ಎಂದು ಮುಂತಾಗಿ ಯಾರಾದರೂ ಕೇಳಬಹುದು. ಈ ಪ್ರಶ್ನೆಯನ್ನು ಪೂರ್ಣವಾಗಿ ನಿವೇದಿಸಲು ಮಾನವ ಜಾತಿಯ ಸಾಮಾಜಿಕ ರಾಜಕೀಯ ಇತಿಹಾಸವನ್ನೆಲ್ಲ

ನಿರೀಕ್ಷಿಸಬೇಕಾಗುವುದು. ಸಂಕ್ಷೇಪದಲ್ಲಿ ಉತ್ತರವನ್ನು ಕೊಡುವುದೆಂದರೆ, ಇತಿಹಾಸದಲ್ಲಿ ಬಲಾತ್ಕಾರಕ್ಕೆ ಒಳಪಟ್ಟಲ್ಲದೆ, ಯಾವನೂ ಇನ್ನೊಬ್ಬನಿಗಾಗಿ ಶ್ರಮಪಟ್ಟಿಲ್ಲ. ಇದಲ್ಲದೆ, ಹೀಗೇಕೆ ಮಾಡಬೇಕೆಂಬುದು ತಿಳಿಯುವುದೂ ಇಲ್ಲ. ಸ್ಥಳನಿರ್ಬಂಧವಿಲ್ಲದಾಗಿನ ಸಮಾಜಗಳಲ್ಲಿ ಮಾನವನು ಕಾಡನ್ನು ಕಡಿದು ತನ್ನ ಹೊಲವನ್ನು ಮಾಡಿಕೊಂಡು ಅದನ್ನು ತಾನೆ ಹರಗಿ ಸಾಗುವಳಿ ಮಾಡುತ್ತಿದ್ದನು. ಆಗ ಲಾಭಕ್ಕಾಗಿ ಅಲ್ಲದೆ ಯಾರೂ ಬೇರೆಯವರಿಗಾಗಿ ಕೃಷಿ ಮಾಡುತ್ತಿದ್ದಿಲ್ಲ. ಕೆಲವರ ವಿಶೇಷಾಧಿಕಾರಕ್ಕೊಳಗಾದ ಸಂಗತಿಗಳಲ್ಲಿ ಮಾತ್ರ ಪ್ರಕೃತಿದೇವಿಯ ಪ್ರಸಾದವೇ—ಭೂಮಿಯೇ—ನೊದಲನೆಯದು. ಈ ವಿಶೇಷಾಧಿಕಾರವು ಕೇವಲ ನಗ್ನಹಿಂಸೆಯಿಂದಲೇ ಬಂದುದು. ಪ್ರತಿಯೊಂದು ಕಡೆಯಲ್ಲಿಯೂ ಪ್ರಕೃತಿದೇವಿಯ ಸಂಪತ್ತಿನ ಮೇಲೆ—ವಿಶೇಷವಾಗಿ ಭೂಮಿಯ ಮೇಲೆ—ಹೆಚ್ಚಿನ ಒಡೆತನವನ್ನು ಇಟ್ಟುಕೊಂಡ ಒಂದೊಂದು ಪಂಗಡವುಂಟಾಯಿತು. ಅವರ ಕೈಕೆಳಗೆ ಇತರರು ದಾಸರಾದರು, ಅಥವಾ ಬರೀ ಬಾಡಿಗೆಯನ್ನಾಗಲಿ ಗೇಣಿಯನ್ನಾಗಲಿ ತೆರುವ ಒಕ್ಕಲುಗಳಾದರು.

ಮುಂದೆ ಔದ್ಯೋಗಿಕ ಯುಗದಲ್ಲಿಯೂ ಮಾನವನು ಒಬ್ಬೊಬ್ಬನೇ ಪ್ರತ್ಯೇಕವಾಗಿ ದುಡಿದು ಉತ್ಪತ್ತಿ ಮಾಡಬಲ್ಲ ಕಾಲದ ವರೆಗೆ, ಔದ್ಯೋಗಿಕ ಅಪಹಾರವೂ ಅದರಿಂದುಂಟಾದ ಔದ್ಯೋಗಿಕ ಸಂಪಾದನೆಗಳ ಭೇದಗಳೂ ಮೆಲ್ಲಗೆ ತಲೆಯೆತ್ತತೊಡಗಿದುವು. ಆದರೆ ಬರಬರುತ್ತ ಹುಟ್ಟುವಳಿಯು ಬೆಳೆದು ಪಟ್ಟಣಗಳು ತಲೆದೋರಿದ ಬಳಿಕ ಒಬ್ಬ ಒಡೆಯನ ಸಲುವಾಗಿ ಕೂಡಿ ದುಡಿಯುವ ಔದ್ಯೋಗಿಕ ಕೂಲಿಕಾರರೂ ಜೀತದಾಳುಗಳೂ ಹೆಚ್ಚಾದರು. ಇದರಿಂದ ಔದ್ಯೋಗಿಕ ವರಮಾನಗಳಲ್ಲಿ ( Income ) ಸಹ ಭೇದಗಳುಂಟಾದುವು. ಆದರೆ ಔದ್ಯೋಗಿಕ ಸಂಪನ್ನು ವಾಸ್ತವವಾಗಿಯೂ ವೇಗದಿಂದ ಬೆಳೆಯಲಾರಂಭವಾದುದು ಉಗಿಯ ಬಲವನ್ನು ಕಂಡುಹಿಡಿದ ಬಳಿಕ, ಔದ್ಯೋಗಿಕ ಕ್ರಾಂತಿಯಾದ ನಂತರ. ಇದರಿಂದ ದುಡಿತದಾಳುಗಳನ್ನು ಧಾರಾಳವಾದ ಪ್ರಮಾಣದಲ್ಲಿ ಕೆಲಸಕ್ಕೆ ಹಚ್ಚುವಂತಾಗಿ ಶ್ರಮಜೀವಿಗಳ ಸುಲಿಗೆಗೆ ಮತ್ತಷ್ಟು ಪುಟ ಸಿಕ್ಕಿತು.

ಸಮಾಜದಲ್ಲಿ ಇತರರನ್ನು ದುಡಿಯಲಿಕ್ಕಿಟ್ಟುಕೊಳ್ಳದೆ, ಇತರರಿಂದ ಬಾಡಿಗೆ ಲಾವಣಿ ಕಪ್ಪಕಾಣಿಕೆಗಳನ್ನು ಪಡೆಯದೆ ಇದ್ದರೂ ಒಳ್ಳೇ ಶ್ರೀಮಂತ

ರಾಗಿ, ಉಳಿದ ಎರಡು ವರ್ಗದವರಿಗಿಂತಲೂ ಹೆಚ್ಚು ಹಣಗಾರರಾಗಿರುವವರಿದ್ದಾರೆ. ವರ್ತಕರು, ಕುಸೀದ ವೃತ್ತಿ (Bankers) ಯವರು, ಜೂಜುಗಾರರು ಮುಂತಾದವರೆಲ್ಲ ಈ ವರ್ಗಕ್ಕೆ ಸೇರಿದವರು. ಇವರು ತಾವಾಗಿ ಉತ್ಪತ್ತಿಯನ್ನೂ ಮಾಡುವುದಿಲ್ಲ; ಧನೋತ್ಪತ್ತಿಯಲ್ಲಿ ತೊಡಗಿದವರ ದುಡಿಮೆಯನ್ನೂ ಅಪಹರಿಸುವುದಿಲ್ಲ. ಈ ವರ್ಗದವರ ಹಣಗಾರಿಕೆಗೆ ಸದ್ಯದ ಸೆಲೆಯು ಯಾವುದೇ ಇರಲಿ, ಅದೆಲ್ಲವೂ ಸಮಾಜದ ಒಟ್ಟು ಸಂಪತ್ತಿನಿಂದಲೇ ಹುಟ್ಟುವುದೆಂಬ ಮಾತನ್ನು ಅಲ್ಲಗಳೆಯಲಾಗದು.

ಧನವು ದುಡಿತದಿಂದ ಹುಟ್ಟುವುದು. ಶ್ರಮಪಟ್ಟವರ ಪಾಲಿಗೆ ಸಿಕ್ಕುವುದನ್ನಷ್ಟು ಕಳೆದರೆ ಮಿಕ್ಕುದೆಲ್ಲವೂ ಆಳುಗಳನ್ನು ದುಡಿಸಿ ಸುಲಿಯುವವರ ಬಳಗದ ಸೊತ್ತಾಗುವುದು. ಆದರೆ ಕೂಲಿಗಳ ಕೃಷಿಯಿಂದಾದ ಸರಕುಗಳನ್ನೆಲ್ಲ ಈ ಕುಬೇರರು ಬಳಿಸಲಾರರೆಂಬುದು ಸಹಜದಾಗಿದೆ. ಅವುಗಳನ್ನು ಮಾರಿ ಅವರು ಬೇರೆ ಒಡವೆಗಳನ್ನು ಕೊಳ್ಳಲೇಬೇಕಾಯಿತು. ಈ ಮೇರೆಗೆ ವರ್ತಕರೂ ವಸ್ತುಗಳ ವಿಕ್ರಯದ ಜೂಜುಗಾರರೂ ತಲೆದೋರುವರು. ಹೊಸ ಹುಟ್ಟುವಳಿಗಳಿಗಾಗಿ ಸರಕುಗಳನ್ನು ಕೊಳ್ಳಲು ತಮ್ಮ ಸಿದ್ಧ ಸರಕುಗಳನ್ನು ಮಾರಬೇಕಾಗುವುದರಿಂದ, ಇವರು ಕ್ರಯವಿಕ್ರಯಕಾರರಾಗಿ ನೆರವಾಗುವರು. ಈ ಬಗೆಯಲ್ಲಿ ತಮ್ಮ ಕೈಗೆ ಬರುವ ಹಣದ ಕೆಲವು ಭಾಗವನ್ನು ವರ್ತಕವರ್ಗಕ್ಕೆ ಕೊಡುವರು. ಕುಸೀದ ವೃತ್ತಿಯವರ ( Bankers ) ಸಮಾಚಾರವೂ ಇದೇ ರೀತಿ. ತಾವು ಕೊಡುವ ಹಣಕ್ಕೆ ಅವರು ಬಡ್ಡಿಯನ್ನು ತೆಗೆದುಕೊಳ್ಳುವರು. ಸರಕುಗಳ ಸೃಷ್ಟಿಯ ಪ್ರಯತ್ನದಲ್ಲಿ ಬಡ್ಡಿಯು ಹುಟ್ಟುವುದು. ಕೊಡುಕೊಳ್ಳುವ ಏರ್ಪಾಟಿನಲ್ಲಿ ಹುಟ್ಟುವ ವಿಶೇಷ ಸಂಪತ್ತಿನಿಂದಲೆ ಬಡ್ಡಿಯನ್ನು ಕೊಡಲಾಗುವುದು. ಆದಾಯ, ಬಡ್ಡಿ, ವಲ್ಲಾಲಿಗಳ ವರಮಾನ ಇವುಗಳೆಲ್ಲ ಆ ಸಾಮಾನ್ಯ ಸ್ಥಿತಿಯಿಂದಲೆ ಪ್ರಾಪ್ತವಾಗುವುವು. ಕಾರಖಾನೆದಾರರು ಮತ್ತು ಉತ್ಪತ್ತಿಸಾಧನಗಳ ಒಡೆಯರು ಸೆಳೆಯುವ ಹೆಚ್ಚಿನ ಹಣವೇ (Surplus wealth) ಈ ಸಾಮಾನ್ಯ ಸ್ಥಿತಿಯೆನ್ನಬಹುದು. ಹಣವೇ ಹಣವನ್ನು ಹುಟ್ಟಿಸಲರಿಯದು. ಸಂಪತ್ತಿನ ಘತ್ತು ವಾಣಿಜ್ಯದ ಯಾವ ವಿಧದ ತಂತ್ರದಿಂದಲೂ ಆದಾಗದು. ಬಂಡವಾಳಗಾರರ ವ್ಯವಹಾರದ ಬಳಗವೆಲ್ಲ ಒಂದೇ. ಈ ಶೇಷಧನದಿಂದ ( Surplus wealth ) ಪ್ರತಿಯೊಬ್ಬನೂ ತನ್ನ ಕೈಲಾದಷ್ಟು ಹೆಚ್ಚಿನ

ಪಾಲನ್ನು ಸೆಳೆಯಬೇಕೆನ್ನುವನು. ಇವರಲ್ಲಿಯೇ ಬಂಡವಾಳಗಾರಿಕೆಯ ಸೆಣಸಾಟದ ಗುಟ್ಟೆಲ್ಲ ಅಡಗಿದೆ. ವಿಶ್ವವಿದ್ಯಾಲಯಗಳಲ್ಲಿ ಈಗ ಕಲಿಸುವ ಎಲ್ಲ ಸೂಕ್ಷ್ಮ ಮತ್ತು ಕುಟಿಲ ವ್ಯವಹಾರವಿಧಾನಗಳ ರಹಸ್ಯವೂ ಇದರಲ್ಲಿದೆ.

ಮೇಲೆ ವಿವೇಚಿಸಿದುದನ್ನೆಲ್ಲ ಮತ್ತೊಮ್ಮೆ ಇಲ್ಲಿ ಹೇಳುವುದು ಯೋಗ್ಯವಾಗಿದೆ. ಪರರ ಶ್ರಮದ ಲಾಭವನ್ನು ದೋಚಿ ತಮ್ಮ ಉತ್ಪತ್ತಿಸಾಧನಗಳ ಮೂಲಕ ಕೆಲವರು ಕೂಡಿಹಾಕುವ ಹಣವೇ ಸಾಮಾನ್ಯ ನಿಧಿಯಾಗುವುದು. ಆರ್ಥಿಕ ಸಂಘಟನೆಯು ನಡೆವುದರ ಫಲವಾಗಿ ಬೇರೆ ಪಂಗಡಗಳೂ ಈ ನಿಧಿಯಿಂದಲೇ ತಮ್ಮ ಪಾಲುಗಳನ್ನು ಪಡೆಯುವುವು. ಈ ನಡುವಿನ ದಲ್ಲಾಳಿಗಳು ಯಾವ ರೀತಿಯಲ್ಲಿಯೂ ಧನೋತ್ಪಾದನವನ್ನು ಮಾಡುವರೆಂಬುದು ನಂಬತಕ್ಕ ಸಂಗತಿಯಲ್ಲ. ಒಟ್ಟು ಸಂಗ್ರಹವಾದ ಧನದಲ್ಲಿ ಆದಷ್ಟು ದೊಡ್ಡ ಪಾಲನ್ನು ತಮ್ಮ ಕಡೆಗೆ ಎಳೆಯುವುದರಲ್ಲಿಯೇ ಅವರ ಉತ್ಪತ್ತಿಕ್ರಿಯೆಯಿದೆ. ವೈದ್ಯರು ವಕೀಲರು ಮುಂತಾದ ಇತರ ಹಲವು ವೃತ್ತಿಗಳ ಜನರು ಸಹ ಈ ಸಾಮಾನ್ಯ ನಿಧಿಯಿಂದಲೆ ತಮ್ಮ ಚೀಲವನ್ನು ತುಂಬಿಕೊಳ್ಳುವರು. ಆದರೆ ಒಟ್ಟು ಧನಸಂಗ್ರಹದಿಂದ ಧನೋತ್ಪತ್ತಿಯಲ್ಲಿ ತೊಡಗಿದ ಕೆಲಸಗಾರರಿಗೆ ನೇರವಾಗಿ ಸಲ್ಲುವ ಪಾಲಿನಿಂದಲೂ ಇವರು ಕೆಲವು ಭಾಗವನ್ನು ಪಡೆಯುವರು.

ಒಟ್ಟಿನಲ್ಲಿ ಇಷ್ಟು ಹೇಳಬಹುದು. ಧನೋತ್ಪತ್ತಿ ಸಾಧನಗಳನ್ನು ಮತ್ತು ಪ್ರಕೃತಿದೇವಿಯ ಸಂಪತ್ತನ್ನು ಜನರು ತಮ್ಮ ಸೊತ್ತಾಗಿ ಮಾಡಿಕೊಂಡು ಅವುಗಳನ್ನು ತಮ್ಮ ಆದಾಯಕ್ಕಾಗಿ ಉಪಯೋಗಿಸುವುದೇ ಸಮಾಜದಲ್ಲಿಯ ಆರ್ಥಿಕ ಅಸಮತೆಯ ಮೂಲ ಕಾರಣವಾಗಿದೆ. ಇದರಿಂದಲೇ ಆರ್ಥಿಕ ಅಪಹಾರವು ತಲೆದೋರುವುದು. ಅಂದರೆ ಧನಿಕರು ತಾವು ಗೊತ್ತುಮಾಡಿದ ಒಂದು ಮಾದರಿಯ ಬಾಳನ್ನು ನಡೆಸಲು, ಆಳುಗಳ ದುಡಿಮೆಯ ಒಂದು ಅಂಶವನ್ನು ಮಾತ್ರ ಅವರಿಗೆ ಕೊಟ್ಟು ಉಳಿದುದೆಲ್ಲವನ್ನೂ ತಾವೇ ಇಟ್ಟುಕೊಳ್ಳುವರು. ಕಾರಖಾನೆಯ ಒಡೆಯನು ತನಗಾಗಿ ದುಡಿತದಾಳುಗಳನ್ನು ಕೆಲಸಕ್ಕೆ ಹಚ್ಚಿದಾಗ ಈ ಸುಲಿಗೆಯು ಪ್ರತ್ಯಕ್ಷವಾಗಿಯೂ ಭೂಮಿಯನ್ನಾಗಲಿ ನಿಸರ್ಗದ ಇತರ ವಸ್ತುಗಳನ್ನಾಗಲಿ ತನ್ನ ಉಪಜೀವನಕ್ಕಾಗಿ ಬಾಡಿಗೆ ಗೇಣಿಗಳಿಗೆ ಕೊಟ್ಟಾಗ ಪರ್ಯಾಯವಾಗಿಯೂ ನಡೆಯುವುದು.

ಈ ಉತ್ಪತ್ತಿಯ ಉಗಮಸಾಧನಗಳು ಕೆಲವು ಜನರ ವಶಕ್ಕೆ ತೀರ ಮೊದಲು ಹೋದುದು ಕೇವಲ ಬಲಾತ್ಕಾರದಿಂದ. ಇದಕ್ಕೆ ಅರ್ಥಶಾಸ್ತ್ರದಲ್ಲಿ ಮೂಲಸಂಗ್ರಹವೆಂದು ( Primitive accumulation ) ಹೇಳುವರು. ಮುಂಗೈಕಸುವಿನಿಂದ ಕೂಡಿಸಿದ ಶೇಷಧನದ ಈ ಸಂಗ್ರಹವು ದಾಸರ ಮತ್ತು ಜೀತದಾಳುಗಳ ಸಂಸ್ಥೆಯ ಬಲದಿಂದ ಬೆಳೆಯುತ್ತ ಹೋಯಿತು. ಇಷ್ಟರಲ್ಲಿ ಕೆಲವು ಜರ್ಮನ್ ಮತ್ತು ಇಂಗ್ಲಿಷ್ ಜನರ ನೂತನ ವಿಜ್ಞಾನಶೋಧಗಳಾದುವು. ಇತ್ತ ಭಾರತ ದೇಶದಿಂದ ಹೇರಳವಾದ ಸಂಪತ್ತಿನ ಸುಲಿಗೆಯಿಂದಲೂ ಯುರೋಪಿನ ಧನಸಂಗ್ರಹವು ವಿಪುಲವಾಗಿ ಹೆಚ್ಚಾಯಿತು. ಇವುಗಳ ಪರಿಣಾಮದಿಂದ ಯುರೋಪಿನಲ್ಲಿ ಔದ್ಯೋಗಿಕ ಕ್ರಾಂತಿಯಾಯಿತು. ಇದರಿಂದ ಸರಳವಾದ ಅಪಹಾರಯುಗವೇ ತಲೆದೋರಿತು. ಏಕೆಂದರೆ, ಒಂದೇ ಕಾರಖಾನೆಯಲ್ಲಿ ಲೆಕ್ಕವಿಲ್ಲದಷ್ಟು ಕೂಲಿಕಾರರನ್ನು ದುಡಿಸುವುದು ಹಗುರಾಯಿತು.

ಈಗಿನ ಆರ್ಥಿಕ ವಿಷಮತೆಗೆ ಇವೆಲ್ಲ ಕಾರಣಗಳಿವೆಯೆಂದ ಬಳಿಕ ಸಾಮ್ಯವಾದವು ಈ ಸಮಸ್ಯಾಪರಿಹಾರವನ್ನು ಯಾವ ಬಗೆಯಲ್ಲಿ ಕೈಕೊಳ್ಳಬೇಕೆಂಬುದನ್ನು ಕಲ್ಪಿಸಲು ಕಠಿಣವಾಗದು.

## ಅಸಮತೆಯ ನಿರ್ಮೂಲನ

ಈ ಅಸಮತೆಯನ್ನು ಹೋಗಲಾಡಿಸಲು ಎರಡು ಉಪಾಯಗಳಿವೆ. ಒಂದೊಂದೂ ವ್ಯವಹಾರ್ಯವಾದರೆ ನ್ಯಾಯ, ಸಮತೆ, ಸೌಖ್ಯಗಳಿಂದ ಕೂಡಿದ ಸಮಾಜವೊಂದು ಸಿದ್ಧವಾಗುವುದು. ಪ್ರತಿಯೊಬ್ಬ ಮನುಷ್ಯನೂ ತನಗಾಗಿ ತಾನು ಸ್ವತಂತ್ರವಾಗಿ ದುಡಿಯಲು ಬರುವಂತೆ ಸಮಾಜದ ಪುನರ್ಘಟನೆಯನ್ನು ಮಾಡುವುದು ಮೊದಲನೆಯ ತರಹ. ಆತನು ಯಾರಿಗೂ ಬಾಡಿಗೆ ಕಪ್ಪ ಮುಂತಾದವುಗಳನ್ನು ಕೊಡದೆ ತನ್ನ ಭೂಮಿಯನ್ನು ತಾನೇ ಸಾಗುಮಾಡಬಹುದು ಅಥವಾ ತನ್ನ ಕರ್ಮಶಾಲೆಯಲ್ಲಿ ( Workshop ) ತನ್ನ ಕೆಲಸದ ಸಾಧನಗಳಿಂದಲೇ ಕೆಲಸ ಮಾಡಬಹುದು. ಸ್ವತಃ ತನ್ನ ಕೈಗಳಿಂದ ಉಪಯೋಗಿಸುವಷ್ಟಕ್ಕಿಂತ ಹೆಚ್ಚು ಉತ್ಪತ್ತಿಸಾಧನಗಳನ್ನು ಯಾರ ಸ್ವಾಧೀನದಲ್ಲಿಯೂ ಕೊಡಲಾಗದು.

ಈಗಿದ್ದ ವ್ಯವಸ್ಥೆಯನ್ನು ಪಲ್ಲಟಿಸಿ ಮೇಲೆ ವರ್ಣಿಸಿದ ಪದ್ಧತಿಯನ್ನು ನೆಲೆಗೊಳಿಸಲು ಹಲವು ಮೂಲ ವ್ಯತ್ಯಾಸಗಳನ್ನೇ ಮಾಡಬೇಕಾಗುವುದಲ್ಲದೆ ದೊಡ್ಡ ನಿರ್ಬಂಧಗಳನ್ನೂ ಇಡಬೇಕಾಗುವುದು. ಆದರೆ ಸಾಕಷ್ಟು ಸಾಮಾಜಿಕ ನಿಯಂತ್ರಣವೂ ಶಿಸ್ತೂ ಇಲ್ಲದೆ ಮೇಲ್ಕಾಣಿಸಿದಂತಹ ಸಮಾಜವು ಸುಸೂತ್ರವಾಗಿ ನಡೆಯಲಾರದು. ಆದರೆ ತೀರ ಪ್ರಾಥಮಿಕ ವರ್ಗದ ಆರ್ಥಿಕ ಸಂಘಟನವುಳ್ಳ ಸಮಾಜದಲ್ಲಿ ಇಂತಹ ಓರಣವಾಗಲಿ ದಬಾಯಿಸುವ ಶಕ್ತಿಯಾಗಲಿ ಇರುವುದು ವಿರಳ. ಇದಲ್ಲದೆ ಇಂತಹ ಸಮಾಜದಿಂದ ರೈಲು ಟೆಲಿಗ್ರಾಫುಗಳನ್ನು ನಡೆಸುವುದಾಗದು; ಅದೇಕೆ, ತೀರ ಪ್ರಾಥಮಿಕ ನಮೂನೆಯ ವಾಹನಗಳನ್ನೂ ಸಂದೇಶಗಳನ್ನು ತರುಕಳುಹುವ ಏರ್ಪಾಟನ್ನೂ ಮೀರುವಂತಹದು ಅಲ್ಲಿರುವುದಿಲ್ಲ. ಸೈನಿಕತಂತ್ರದ ದೃಷ್ಟಿಯಿಂದ ನೋಡಿದರೆ ಇಂತಹ ಸಮಾಜವು, ವಿಶೇಷ ಔದ್ಯೋಗಿಕೋನ್ನತಿಯನ್ನು ಪಡೆದ ದೇಶಗಳ ಕೈಗೆ ಸುಲಭವಾಗಿ ಸಿಕ್ಕುವುದು. ಇನ್ನು ಸ್ವಸಂರಕ್ಷಣೆಯ ದೃಷ್ಟಿಯಿಂದ ನೋಡಿದರೆ ಅಂತಹ ಸಮಾಜದ ಜನರು—ಹಿಂದುಸ್ಥಾನದಲ್ಲಿ ಇಂತಹ ಜನಸಂಖ್ಯೆಯು ಬಹು ದೊಡ್ಡದಾಗಿದೆ—ತೀರ ಕೆಳಗಿನ ತರಗತಿಯ ಉಪಜೀವಿಕೆಯನ್ನು ನಡೆಸುವರು. ಏಕೆಂದರೆ, ಒಬ್ಬೊಬ್ಬನ ಉತ್ಪಾದಕ ಶಕ್ತಿಯೂ ಅಷ್ಟು ಕನಿಷ್ಠವಾಗಿರುವುದು.

ಆದುದರಿಂದ ಸದ್ಯದ ಸಂಕಟಗಳೊಳಗಿಂದ ಪಾರಾಗಲು ಈ ಪ್ರಥಮೋಪಾಯವನ್ನು ಅಂಗೀಕರಿಸುವುದು ಒಂದು ವೇಳೆ ಸಾಧ್ಯವಿದ್ದರೂ ಅನೇಕ ಕಾರಣಗಳ ಮೂಲಕ ಇದು ಸಂಪೂರ್ಣ ಅನುಚಿತವಾದುದೆಂದು ಹೇಳಬಹುದು.

ಅದಲ್ಲದೆ ಈ ಉಪಾಯವನ್ನು ಕೈಕೊಳ್ಳುವುದು ಶಕ್ಯವಿಲ್ಲ. ಸರ್ವಾಧಿಕಾರ (Dictatorship) ವಿಲ್ಲದೆ ಈ ಯೋಜನೆಯನ್ನು ನೆರವೇರಿಸಲಾಗದು. ಹಲವರ ಬೇರೂರಿದ ಹಿತಸಂಬಂಧಗಳನ್ನು ನಿರ್ಮೂಲಿಸಿ ಸಮಾಜದ ರೂಪವನ್ನೇ ಪೂರ್ಣ ಪಲ್ಲಟಿಸುವ ಇಂತಹ ಯೋಜನೆಯನ್ನು ಕೈಕೊಳ್ಳುವುದು ಬೇರೆ ವಿಧದಿಂದ ಸಾಧ್ಯವಿಲ್ಲ. ಕನಿಷ್ಠ ಉತ್ಪತ್ತಿಶಕ್ತಿಯುಳ್ಳವರು ಸರ್ವಾಧಿಕಾರ ನಡೆಸಲು ಅನುಕೂಲವಾದ ಸಾಮಾಜಿಕ ಪರಿಸ್ಥಿತಿಯು ಈಗ ಇಲ್ಲ.

## ಸಾಮ್ಯವಾದಿಗಳ ಪರಿಹಾರ

ಇನ್ನೊಂದು ಉಪಾಯವೆಂದರೆ, ಸಾಮ್ಯವಾದ. ಆ ಉಪಾಯದ ಸೂಚನೆಯು, ಧನಸಂಗ್ರಹದ ರೀತಿಯ ವಿವೇಚನೆಯಲ್ಲಿಯೆ ಅಡಗಿದೆ. ಉತ್ಪತ್ತಿ ಸಾಧನಗಳ ವ್ಯಕ್ತಿಗತ ಒಡೆತನವನ್ನು ಕಿತ್ತು ಅವುಗಳ ಮೇಲೆ ಅಖಿಲ ಸಮಾಜದ ಒಡೆತನವನ್ನಿರಿಸುವುದೇ ಈ ಉಪಾಯದ ಮೊದಲ ಮೆಟ್ಟಿಲು.

ಧನೋತ್ಪತ್ತಿಯ ಸಾಮಗ್ರಿಗಳ ಒಡೆತನವನ್ನು ವ್ಯಕ್ತಿಗಳ ಕೈಗಳಿಂದ ಕಸಿದು ಸಮಾಜದ ಕೈಯಲ್ಲಿರಿಸುವುದರಿಂದ ಸಾಂಪತ್ತಿಕ ಸುಲಿಗೆಯ ನಿರ್ಮೂಲನವಾಗುವುದು; ಆರ್ಥಿಕ ಭೇದಗಳು ಅಡಗುವುವು. ಅಂದರೆ ಈಗಿನ ಸಮಾಜದ ಶಾಪವಿಮೋಚನೆಯಾಗುವುದು. ಆಳುಗಳ ದುಡಿಮೆಯನ್ನು ದೋಚುವುದರಿಂದಲೇ ಒಬ್ಬೊಬ್ಬರ ಕೈಯಲ್ಲಿ ಮಾತ್ರ ಧನಸಂಗ್ರಹವಾಗುವುದೆಂಬುದನ್ನು ನಾವು ಈ ಮೊದಲೇ ಅರಿತಿರುವೆವು. ಸಂಪದುತ್ಪತ್ತಿಯ ಮೇಲೆ ಇಡೀ ಸಮಾಜದ ಪ್ರಭುತ್ವವಾದ ಬಳಿಕ ಯಾವನೂ ಇನ್ನೊಬ್ಬನಿಗಾಗಿ ಕಷ್ಟಪಡುವುದಿಲ್ಲ. ನಾವು ತಮಗೋಸ್ಕರವೇ ಕೆಲಸ ಮಾಡುವರು. ಆದರೆ ಪ್ರತ್ಯೇಕವಾಗಿ ದುಡಿಯುವುದಿಲ್ಲ, ಕೂಡಿ ದುಡಿಯುವರು. ಇವರ ಶ್ರಮದ ಫಲವು ಮಾತ್ರ ಕಾರಖಾನೆದಾರನ ಲಾಭಕ್ಕೆ ಹೋಗುವುದಿಲ್ಲ, ಇವರೆಲ್ಲರ ಖರ್ಚಿಗಾಗಿ ಉಪಯೋಗಿಸಲ್ಪಡುವುದು. ಸಮಾಜದ ಒಡೆತನದ ಅರ್ಥವಿಷ್ಟೇ. ಹುಟ್ಟುವಳಿಯ ಮೇಲೆ ಎಲ್ಲರ ಅಧಿಕಾರವಿದೆ. ಅದನ್ನೆಲ್ಲರೂ ಸಮನಾಗಿ ಹಂಚಿಕೊಳ್ಳಬೇಕು. ಮುಖ್ಯವಾಗಿ ವ್ಯಕ್ತಿಯ ಕೆಲಸದ ಗುಣಪ್ರಮಾಣಗಳನ್ನೂ ನಂತರ ಆತನ ಉಪಜೀವನದ ಅಗತ್ಯಗಳನ್ನೂ ನೋಡಿಕೊಂಡು ಪಾಲುಗಾರಿಕೆಯು ನಡೆಯುವುದು. ಆದರೆ ಈ ಒಟ್ಟು ಹುಟ್ಟುವಳಿಯಲ್ಲಿ ಒಂದು ಭಾಗವು ಮೀಸಲಾಗಿರುವುದು. ಅದನ್ನು ದೇಶದ ಸಂರಕ್ಷಣೆ, ಆರ್ಥಿಕ ಸಂವರ್ಧನೆ, ಪ್ರಭುತ್ವ ನಿರ್ವಹಣ, ವಿದ್ಯಾಲಯಗಳ ಹಾಗೂ ಔಷಧಾಲಯಗಳ ಸ್ಥಾಪನೆ ಮತ್ತು ಇತರ ಉದ್ದೇಶಗಳಿಗಾಗಿ ವಿನಿಯೋಗಿಸಲಾಗುವುದು. ಧನೋತ್ಪತ್ತಿಯ ಸಾಧನಗಳನ್ನೆಲ್ಲ ಸಮಾಜದ ಕೈಯಲ್ಲಿರಿಸುವುದೇ ಸಾಮ್ಯವಾದದ ಮೂಲಭೂತವಾದ ತತ್ತ್ವ.

ಸಾಮ್ಯವಾದದ ಮೇರೆಗೆ ದೇಶದ ಪುನರ್ಘಟನೆಯನ್ನು ಸಾಧಿಸಬೇಕೆನ್ನುವವರು ಎಲ್ಲಕ್ಕೂ ಮೊದಲು ಹುಟ್ಟುವಳಿಯ ಸಾಮಗ್ರಿಗಳ ಮೇಲಿನ ವ್ಯಕ್ತಿಗತ

ಒಡೆತನವನ್ನು ತೆಗೆದುಹಾಕಬೇಕು. ಸಾಮ್ಯವಾದದ ಆಳಿಕೆಯನ್ನು ಆಗ ಮಾತ್ರ ಕೈಕೊಳ್ಳುವ ಒಂದು ರಾಷ್ಟ್ರವು ಇದನ್ನೆಲ್ಲ ಕೂಡಲೆ ಮಾಡುವುದು ಸಾಧ್ಯವಾಗಲಿಕ್ಕಿಲ್ಲ. ಆದರೆ ತನ್ನ ಉದ್ದೇಶವನ್ನು ಕೈಗೂಡಿಸಿಕೊಳ್ಳಬೇಕಾದರೆ, ದೇಶದ ಆರ್ಥಿಕ ಜೀವನವನ್ನು ಅಂಕಿತದಲ್ಲಿಟ್ಟುಕೊಂಡು ಆಯಕಟ್ಟಿನ ಸ್ಥಳಗಳನ್ನೆಲ್ಲ ಆಕ್ರಮಿಸಿಕೊಂಡಿರುವ ದೊಡ್ಡ ಪ್ರಮಾಣದ ಉತ್ಪತ್ತಿಕ್ಷೇತ್ರವನ್ನೆಲ್ಲ ಅದು ತನಗೆ ಅನುಕೂಲವಾಗುವಂತೆ ಮಾರ್ಪಡಿಸಬೇಕು.

ಪ್ರಗತಿ ಪಡೆದ ನಾಡುಗಳಲ್ಲಿ ಹುಟ್ಟುವಳಿಯ ಆಯುಧಗಳೊಂದಿಗೆ ವಿನಿಮಯ ವಿತರಣ ( Distribution ) ಗಳ ಸಾಧನಗಳಾದ ಕುಸೀದಗಳು ( Banks ), ವಾಣಿಜ್ಯ ಸಂಸ್ಥೆಗಳು, ವಾಹನ ಮುಂತಾದವುಗಳೆಲ್ಲವೂ ಉದಯವಾಗುವುವು. ಇವುಗಳೆಲ್ಲ ಹುಟ್ಟುವಳಿಯಿಂದ ಹುಟ್ಟಿ ಅದನ್ನೇ ಆಧರಿಸುತ್ತವೆ. ಉತ್ಪತ್ತಿಚಕ್ರವು ಸರಿಯಾಗಿ ಸಾಗುವಂತೆ ಮಾಡುವುದೇ ಇವುಗಳ ಉದ್ದೇಶ. ಆದುದರಿಂದ ಹುಟ್ಟುವಳಿಯ ಮೇಲೆ ಸಮಾಜದ ಪ್ರಭುತ್ವವನ್ನು ಸ್ಥಾಪಿಸುವುದರ ಜೊತೆಗೆ ಇವುಗಳ ಒಡೆತನವನ್ನೂ ಸಮಾಜಕ್ಕೆ ಬಿಡಬೇಕು.

ಈಗ ಪಂಡಿತ ಜವಾಹರಲಾಲರ ಹಸ್ತದಲ್ಲಿ ಅಧಿಕಾರಸೂತ್ರಗಳು ಬಂದರೆ ಅವರು ಏನು ಮಾಡುವರೆಂಬುದನ್ನು ನಾವು ಹೇಳಬಹುದು.

ಕಾಂಗ್ರೆಸ್ ಸಮತಾವಾದಿ ಪಕ್ಷವು ಈ ಸಾಮ್ಯವಾದದ ತತ್ತ್ವಗಳ ಅನುಸಂಧಾನವನ್ನು ಭಾರತ ದೇಶದಲ್ಲಿ ಹೇಗೆ ಮಾಡುವುದು, ಅದರ ಸ್ಪಷ್ಟವಾದ ಯೋಜನೆಗಳಾವುವು ಎಂಬುದನ್ನು ಮುಂದಿನ ಅಧ್ಯಾಯದಲ್ಲಿ ವಿವೇಚಿಸೋಣ.

---

# ೨ ಕಾಂಗ್ರೆಸ್ ಸಾಮ್ಯವಾದಿಗಳ ಆದರ್ಶಗಳು

**ವಿದೇಶೀಯ ಪ್ರಭುತ್ವವನ್ನು ತಳ್ಳಿ ದೇಶೀಯ ಪ್ರಭುತ್ವವನ್ನು ನೆಲೆಗೊಳಿಸಿ ಇಲ್ಲಿಯ ಧನಿಕರ ಬೇರೂರಿದ ಹಿತಸಂಬಂಧಗಳನ್ನು (Vested Interests) ಹಾಗೆಯೇ ಇರಗೊಟ್ಟರೆ ನಮಗೆ ಸ್ವಾತಂತ್ರ್ಯದ ನೆರಳು ಸಹ ಸಿಕ್ಕಂತಾಗಲಿಲ್ಲ.**

**—ಜವಾಹರಲಾಲ ನೆಹರು**

## ಹಿಂದುಸ್ಥಾನ ಮತ್ತು ಸಾಮ್ಯವಾದ

ಬ್ರಿಟಿಶ್ ಸಾಮ್ರಾಜ್ಯದಿಂದ ಹೊರಗಾಗಿ ಸಂಪೂರ್ಣ ಸ್ವಾತಂತ್ರ್ಯವನ್ನು ಸಂಪಾದಿಸಿ ಸಾಮ್ಯವಾದದ ಮೇರೆಗೆ ರಾಷ್ಟ್ರರಚನೆಯನ್ನು ಮಾಡುವುದೇ ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ಅಂತಿಮ ಆದರ್ಶವೆಂಬುದು ಅದರ ಘಟನೆಯಿಂದ ತಿಳಿದುಬರುತ್ತದೆ.

ಇದು ನೇರವಾಗಿಯೂ ಸರಳವಾಗಿಯೂ ಇದೆ. ಈ ಪಕ್ಷದವರ ಉದ್ದೇಶಗಳು ಎರಡು. ಮೊದಲನೆಯ ಉದ್ದೇಶವು ಕಾಂಗ್ರೆಸಿನಂತೆಯೆ ಇರುವುದು. ಆದರೆ ಸಂಪೂರ್ಣ ಸ್ವಾತಂತ್ರ್ಯದಲ್ಲಿ, ಬ್ರಿಟಿಶ್ ಸಾಮ್ರಾಜ್ಯದಿಂದ ಬೇರೆಯಾಗುವ ನಿರ್ಣಯವೂ ಒಳಗೊಂಡಿದೆಯೆಂಬುದನ್ನು ಸ್ಪಷ್ಟಪಡಿಸಬೇಕೆಂದು ಅವರ ಅಭಿಪ್ರಾಯ. ಸ್ವತಂತ್ರವಾದ ಭಾರತದ ಪುನರ್ಘಟನೆ ಸಾಮ್ಯವಾದದ ತತ್ತ್ವಗಳ ತಳಹದಿಯ ಮೇಲೆಯೇ ಆಗಬೇಕೆಂಬುದು ಎರಡನೆಯ ಉದ್ದೇಶ.

ಏತಕ್ಕೆ? ಈ ಪ್ರಶ್ನೆಯ ಸಿರಿಗುರಿ ನೆಲೆಬೆಲೆಗಳನ್ನು ನಿರ್ಣಯಿಸುವುದೊಂದೇ ತಡ. ಮಿಕ್ಕುದೆಲ್ಲ ತನ್ನಿಂದ ತಾನೆ ಸು-ಸೂತ್ರವಾಗಿ ನೆರವೇರುವುದು.

ಜನಸಾಮಾನ್ಯರನ್ನೆಲ್ಲ ರಾಜಕೀಯ ಮತ್ತು ಆರ್ಥಿಕ ಸಂಗತಿಗಳಲ್ಲಿ ಸ್ವತಂತ್ರರನ್ನಾಗಿ ಮಾಡುವುದು, ಅವರ ಅಭ್ಯುದಯ ಸುಖಗಳನ್ನು ಸಾಧಿಸುವುದು, ಎಲ್ಲ ಬಗೆಯ ಸುಲಿಗೆಯಿಂದ ಅವರ ಬಿಡುಗಡೆ ಮಾಡುವುದು, ಅವರ ವಿಕಾಸಕ್ಕೆ ನಿರ್ಬಂಧವಿಲ್ಲದ ಅವಕಾಶವನ್ನು ಕಲ್ಪಿಸುವುದು, ಇವುಗಳೇ ಅಂತಿಮ ಉದ್ದೇಶಗಳಾದರೆ ರಾಷ್ಟ್ರವು ತೊಂದರೆಯಿಲ್ಲದೆ ತನ್ನಿಂದ ತಾನೆ ಸಾಮ್ಯವಾದದ ಧ್ಯೇಯವನ್ನು ತಲಪುವುದು. ಅದೇಕೆ ? ದೇಶದ ಅವ್ಯವಸ್ಥಿತವಾದ ಮತ್ತು

ಪರಸ್ಪರ ವಿರೋಧವುಳ್ಳ ಶಕ್ತಿಗಳನ್ನೆಲ್ಲ ಅಂಕಿತದಲ್ಲಿರಿಸಿ ಎಲ್ಲರಿಗೂ ಅತ್ಯಂತ ಹೆಚ್ಚಿನ ಹಿತವಾಗುವ ಬಗೆಯಲ್ಲಿ ಅವುಗಳನ್ನು ಬಳಸಿ, ಮಾನವನ ಬುದ್ಧಿಯನ್ನು ಗೋಚರವಾಗಿ ಪ್ರಚೋದಿಸುವ ಸನ್ನಾಹವನ್ನೆಲ್ಲ ಸಾರ್ವಜನಿಕ ಸುಖಕ್ಕಾಗಿ ವಿನಿಯೋಗಿಸುವುದೇ ಕೊನೆಯ ಗುರಿಯಾದರೂ ಸಾಮ್ಯವಾದದ ಆದರ್ಶವು ತಪ್ಪಿದ್ದಲ್ಲ.

ಇದಕ್ಕಿಂತ ಭಿನ್ನವಾದ ಉದ್ದೇಶಗಳನ್ನೂ ಆದರ್ಶಗಳನ್ನೂ ಇಟ್ಟುಕೊಂಡವರು ಈ ಪುಸ್ತಕವನ್ನು ಮುಂದೆ ಓದುವ ತೊಂದರೆ ತೆಗೆದುಕೊಳ್ಳಬೇಕೆಂದಿಲ್ಲ.

ಆದರೆ ಇವೇ ನಮ್ಮ ಉದ್ದೇಶಗಳಾದರೆ, ಕಳೆದ ಅಧ್ಯಾಯದಲ್ಲಿ ನಾವು ವಿವರಿಸಿದಂತೆ, ಬೇರೆ ನಾಡುಗಳಂತೆ ಹಿಂದುಸ್ಥಾನದಲ್ಲಿಯೂ ಸಾಮ್ಯವಾದವೇ ಅನುಕೂಲವಾಮದೆಂಬುದನ್ನು ಸೂಚಿಸುವುದು ಬಹು ಸುಲಭ. ಭಾರತದಲ್ಲಿಯೂ ಬಡತನವಿದೆ, ಕೂಳುಗೇಡಿತನವಿದೆ. ಒಂದು ಕಡೆ ಈ ಅವಸ್ಥೆಯಾದರೆ ಇನ್ನೊಂದೆಡೆಯಲ್ಲಿ ಸಂಪದ್ವಿಲಾಸದ ಸಡಗರವಿದೆ. ಹಿಂದುಸ್ಥಾನದಲ್ಲಿ ಸುಲಿಗೆಯ ದಬ್ಬಾಳಿಕೆಯಿದೆ. ಇಲ್ಲಿಯೂ ಉತ್ಪತ್ತಿಸಾಧನಗಳು ವ್ಯಕ್ತಿಗಳ ಸ್ವಂತ ಒಡೆತನದಲ್ಲಿವೆ. ಆರ್ಥಿಕ ಮತ್ತು ಸಾಮಾಜಿಕ ಅಸಮತೆಯೇ ಆಧುನಿಕ ರಾಷ್ಟ್ರಗಳ ಮೂಲರೋಗ. ಹಲವರ ಸುಲಿಗೆಯಿಂದ ಕೆಲವರು ಕೊಬ್ಬುವುದೇ ಇದಕ್ಕೆ ಕಾರಣ.

ಆದರೆ ಇದೆಲ್ಲ ಬ್ರಿಟಿಶ್ ಆಳಿಕೆಯ ಪ್ರತಿಫಲವಲ್ಲ. ಇದಕ್ಕೆ ಕಾರಣವು ಬೇರೆಯಾಗಿದ್ದು ಇವರ ಆಳಿಕೆಯ ಕೊನೆಯಾದರೂ ಈ ರೋಗವು ಗುಣವಾಗುವುದಿಲ್ಲ. ವಿದೇಶೀಯ ಪ್ರಭುತ್ವದ ನಿರ್ಮೂಲನವಾದರೂ ಅದರ ಸಂಗಡ ಭಾರತದ ಬಡತನದ ಸಮಸ್ಯೆಯ ಪರಿಹಾರವಾಗಲಾರದು. ಬಹು ಜನರ ಸುಲಿಗೆ ನಿಲ್ಲುವುದಿಲ್ಲ. ನಾವು ನಿರೂಪಿಸಿದ ಯಾವ ಉದ್ದೇಶಗಳೂ ನೆರವೇರಲಾರವು.

## ಭಾರತೀಯ ಸಂಸ್ಕೃತಿ ಸಾಮ್ಯವಾದದ ವಿರೋಧಿಯಲ್ಲ

ಹಿಂದುಸ್ಥಾನದ ಪರಿಸ್ಥಿತಿ ವಿಚಿತ್ರವಾಗಿದೆ, ಪರಂಪರೆ ಭಿನ್ನವಾಗಿದೆ; ಇದು ಔದ್ಯೋಗಿಕ ದೃಷ್ಟಿಯಿಂದ ಹಿಂದುಳಿದ ದೇಶ; ಆದುದರಿಂದ ಸಾಮ್ಯವಾದಕ್ಕೆ ಇದು ಅನುಕೂಲವಲ್ಲ ಎಂದು ಆಗಾಗ ಹೇಳುವರು.

ಸಾಮ್ಯವಾದದ ಮೂಲ ತತ್ತ್ವಗಳಿಗೇ ಇಲ್ಲಿ ಅವಕಾಶವಿಲ್ಲವೆಂದು ಯಾರಾದರೂ ಅಭಿಪ್ರಾಯಪಡುವುದಾದರೆ ಅದಕ್ಕಿಂತಲೂ ಹೆಚ್ಚಿನ ಮೂರ್ಖ ಸಿದ್ಧಾಂತವಿನ್ನೊಂದಿಲ್ಲ. ಧನಸಂಗ್ರಹದ ನಿಯಮಗಳು ಬೇರೆ ನಾಡುಗಳಂತೆ ಭಾರತಕ್ಕೂ ಸಮನ್ವಯಿಸುತ್ತವೆ. ಮತ್ತು ಸಂಗ್ರಹವನ್ನು ತಡೆಯುವ ರೀತಿಯೂ ಎಲ್ಲ ಕಡೆಯಲ್ಲಿ ಒಂದೇ. ಹಿಂದುಸ್ಥಾನದ ಪರಿಸ್ಥಿತಿಯ ವಿಶಿಷ್ಟತೆಯು ಇಲ್ಲಿ ಸಾಮ್ಯವಾದದ ತತ್ತ್ವಗಳ ಅನುಸಂಧಾನದ ಗತಿ-ರೀತಿಗಳನ್ನು ನಿರ್ಣಯಿಸುವುದರಲ್ಲಿ ನೆರವಾಗಬಹುದು. ಆದರೆ ಆ ತತ್ತ್ವಗಳನ್ನು ಬದಲಿಸಬಾರದು. ಧನೋತ್ಪತ್ತಿ ಸಾಧನಗಳ ಒಡೆತನವು, ಸುಲಿಗೆಯನ್ನು ಮತ್ತು ಹಣದ ಹಂಚುವಿಕೆಯ ಭೇದವನ್ನು ಹೋಗಲಾಡಿಸಲು ಜಗದ ಬೇರೆ ಭಾಗಗಳಂತೆ ಹಿಂದು-ಸ್ಥಾನದಲ್ಲಿಯೂ ಅವಶ್ಯವಾಗಿದೆ.

ನಮಗೆ ತಿಳಿದ ಮಟ್ಟಿಗೆ ಭಾರತೀಯ ಸಂಸ್ಕಾರಗಳು, ಉಪಜೀವನದ ಸಾಧನ ಮತ್ತು ವಿಶೇಷ ಸೌಕರ್ಯಗಳನ್ನು ಎಲ್ಲರಿಗೂ ಸಮನಾಗಿ ಹಂಚುವ ಬಗೆಗೆ ವಿರುದ್ಧವಾಗಿಲ್ಲ. ವ್ಯಷ್ಟಿವಾದವೇ ಮುಖ್ಯಾಂಗವಾಗಿರುವ ಭಾರತೀಯ ನಾಗರಿಕತೆಯು ಸಾಮ್ಯವಾದವನ್ನು ಖಂಡಿತವಾಗಿ ವಿರೋಧಿಸುವುದು ಎಂದು ಹೇಳಲಾಗಿದೆ. ಸಮಸ್ಯೆಯನ್ನು ಈ ಬಗೆಯಲ್ಲಿ ಮುಂಡಿಸುವುದೆಂದರೆ ಎರಡೂ ಧ್ಯೇಯಗಳನ್ನು ತಿಳಿಯದಿರುವುದು, ಶಬ್ದಜಾಲದಲ್ಲಿ ಸಿಲುಕುವುದು. ವ್ಯಷ್ಟಿವಾದವು ನಮ್ಮ ಸಂಸ್ಕೃತಿಯ ಹೇತುವಾಗಿದೆಯೆಂಬುದರ ಅರ್ಥವಿಷ್ಟೇ. ವ್ಯಕ್ತಿಯ ಪೂರ್ಣತೆಯೇ ಅದರ ಆದರ್ಶವಾಗಿದೆ. ಅದು ಸಂಪದಾರೂಢವಾದ ಸಮಾಜದ ಸ್ವಾರ್ಥೈಕ ದೃಷ್ಟಿಯ ಕ್ಷುದ್ರಹೇತುವಿನ ವ್ಯಕ್ತಿವಾದವಲ್ಲ. ಆದರೆ ವ್ಯಕ್ತಿಯ ಪೂರ್ಣತೆಯೇ ಗುರಿಯಾಗಿರುವುದಾದರೆ ಸಾಮ್ಯವಾದಿಗೆ ಸಂತೋಷವೇ. ಏಕೆಂದರೆ, ಆತ್ಯಂತಿಕವಾದ ಸಾರ್ವಜನಿಕ ಹಿತದ ಸಾಧನೆಯಿಂದಲೆ ಅದು ಕೈಗೂಡುವುದೆಂದು ಆತನ ನೆರೆನಂಬುಗೆ. ಸಾಮ್ಯವಾದೀ ಸಮಾಜದಲ್ಲಿಯೇ ಸಾಮಾನ್ಯ ಮಾನವ ವರ್ಗವೆಲ್ಲ ಪ್ಲೇಟೋಮಾರ್ಕ್ಸರ ಯೋಗ್ಯತೆಗೆ ತಲುಪುವುದೆಂದು ಟ್ರಾಟ್‌ಸ್ಕಿಯು ಒಂದೆಡೆಯಲ್ಲಿ ಪ್ರತಿಪಾದಿಸಿಲ್ಲವೇ ?

ಕೊನೆಯ ಮಾತೆಂದರೆ, ಹಿಂದುಸ್ಥಾನವು ಉದ್ಯಮ . ದೃಷ್ಟಿಯಿಂದ ಹಿಂದುಳಿದಿರುವುದೆಂಬ ಮಾತು ನಮ್ಮನ್ನು ಎದೆಗೆಡಿಸಲಾರದು. ಔದ್ಯೋಗಿಕ ವಿಕಾಸವು ಸಾಕಷ್ಟಿಲ್ಲದಿರುವುದೂ ಒಂದು ಅನುಕೂಲವೇ. ವಿರೋಧ ಪಕ್ಷವು

ಇಲ್ಲಿ ತೀರ ನಿರ್ಬಲವಾಗಿರುವುದೆಂದು ಅದರ ಅರ್ಥ. ಉದ್ಯಮೋನ್ನತಿಯಲ್ಲಿ ಹಿಂದುಳಿದಿರುವ ಪ್ರದೇಶದಲ್ಲಿ ಸಾಮ್ಯವಾದವನ್ನು ಕೈಕೊಳ್ಳುವುದು ಯೋಗ್ಯವೋ ಎಂಬುದನ್ನು ಆಲೋಚಿಸಲು ವಾಚಕರು, ಪ್ರಪಂಚದಲ್ಲಿ ಬಹಳ ಹಿಂದುಳಿದ ಕೆಲವು ಭಾಗಗಳಲ್ಲಿ ರಶಿಯಾ ದೇಶದವರು ಏನು ಮಾಡುತ್ತಿರುವರೆಂಬುದನ್ನು ನೆನಪಿಗೆ ತಂದುಕೊಂಡರೆ ಸಾಕು. ಮಾಸ್ಕೋದಂತೆ ಉಜ್ಬೆಕಿಸ್ತಾನದಲ್ಲಿಯೂ ಅವರು ಸಾಮ್ಯವಾದವನ್ನು ಕಾರ್ಯರಂಗಕ್ಕಿಳಿಸಿದ್ದಾರೆ. ಅಧಿಕಾರಾರೂಢರಾದ ಒಂದು ಪಕ್ಷದವರು, ಆಧುನಿಕ ವಿಜ್ಞಾನದ ನೆರವಿನಿಂದಲೂ ಅಗತ್ಯವುಳ್ಳ ಕಾರ್ಯನಿರ್ವಾಹಕ ಶಕ್ತಿಯಿಂದಲೂ ಜಗತ್ತಿನ ಯಾವ ಭಾಗದಲ್ಲಿಯೂ ಸಾಮ್ಯವಾದವನ್ನು ನೆಲೆಗೊಳಿಸಬಹುದು.

ಆದುದರಿಂದಲೇ ಕಾಂಗ್ರೆಸ್ ಸಾಮ್ಯವಾದೀ ಪಕ್ಷದವರು, ಸ್ವಾತಂತ್ರ್ಯ ಸಿದ್ಧಿಯಾದ ಬಳಿಕ ಹಿಂದುಸ್ಥಾನದಲ್ಲಿ ಸಾಮ್ಯವಾದೀ ಸಮಾಜವನ್ನು ಸ್ಥಾಪಿಸಬೇಕೆಂಬ ಧ್ಯೇಯವನ್ನಿಟ್ಟುಕೊಂಡಿದ್ದಾರೆ.

## ಕಾಂಗ್ರೆಸ್ ಮತ್ತು ಸಾಮ್ಯವಾದ

ಈಗ ಈ ವಿಷಯದಲ್ಲಿ ಭಾರತದ ರಾಷ್ಟ್ರೀಯ ಮಹಾಸಭೆಯ ಅಭಿಪ್ರಾಯವೇನಿದೆ ?

ನಾವು ಈ ವರೆಗೆ ಚರ್ಚಿಸಿದ ಸಮಸ್ಯೆಗಳನ್ನು ಅದು ಎಂದಿಗೂ ಮನಸ್ಸಿಗೆ ತಂದುಕೊಂಡಿಲ್ಲ, ಸ್ವಾತಂತ್ರ್ಯಸಂಪಾದನೆಯನ್ನುಳಿದು ಅದಕ್ಕೆ ಹೆಚ್ಚಿನ ಉದ್ದೇಶಗಳಿಲ್ಲ ಎಂದು ತಿಳಿಯುವುದು ತೀರ ತಪ್ಪು. ತನಗೆದುರಿಸುವ ಈ ಇಬ್ಬಗೆಯ ಸಮಸ್ಯೆಯನ್ನು ಕಾಂಗ್ರೆಸು ಗುರುತಿಸಿದೆ. ಎಷ್ಟೇ ಅಸ್ಪಷ್ಟವಾಗಿ ಮತ್ತು ಅಸಮಾಧಾನದಿಂದಲೇ ಆಗಲಿ, ನಮ್ಮವರ ಸುಲಿಗೆಯಿಂದಲೂ ಬ್ರಿಟಿಶ್ ಸಾಮ್ರಾಜ್ಯದಿಂದಲೂ ಹಿಂದೀ ಜನತೆಯು ಬಿಡುಗಡೆಯಾಗಲೇಬೇಕೆಂಬುದನ್ನು ಅದು ಒಪ್ಪಿಕೊಂಡಿದೆ.

೧೯೨೯ರಲ್ಲಿ ಆಲ್ ಇಂಡಿಯಾ ಕಾಂಗ್ರೆಸ್ ಕಮಿಟಿಯು ಈಗ ನೆನಪಿಲ್ಲದಂತಿರುವ ತನ್ನ ನಿರ್ಣಯದಲ್ಲಿ—

**“ ಭಾರತೀಯರ ದಾರುಣವಾದ ದುಃಖದಾರಿದ್ರ್ಯಗಳಿಗೆ ವಿದೇಶೀಯರ ಸುಲಿಗೆಯೊಂದೇ ಅಲ್ಲದೆ ಸಮಾಜದ ಆರ್ಥಿಕ ಘಟನೆಯೂ**

**ಕಾರಣವಾಗಿದೆ. ತನ್ನ ಸುಲಿಗೆಯು ತಡೆಯಿಲ್ಲದೆ ನಡೆಯಲೆಂದು ವಿದೇಶೀಯ ಪ್ರಭುತ್ವವು ಈ ಆರ್ಥಿಕ ಘಟನೆಯ ಸಮರ್ಥನೆಯನ್ನು ಮಾಡುತ್ತಿದೆಯೆಂದು ಈ ಸಮಿತಿಯ ಅಭಿಪ್ರಾಯವಿದೆ. ಈ ದುಃಖ ದಾರಿದ್ರ್ಯಗಳನ್ನು ಪರಿಹರಿಸಿ ಹಿಂದೀ ಜನತೆಯ ಸ್ಥಿತಿಯನ್ನು ಸುಧಾರಿಸಬೇಕಾದರೆ, ಭಾರತೀಯ ಜನಾಂಗದ ಸದ್ಯದ ಆರ್ಥಿಕ ಮತ್ತು ಸಾಮಾಜಿಕ ಘಟನೆಯಲ್ಲಿಯೇ ಮೂಲಭೂತವಾದ ಮಾರ್ಪಾಟುಗಳನ್ನು ಮಾಡಿ ಮಹತ್ತರವಾದ ಅಸಮತೆಗಳನ್ನೆಲ್ಲ ನಿರ್ಮೂಲಿಸಬೇಕು."** ಎಂಬುದಾಗಿ ಸಾರಿದರು.

ನಮ್ಮ ಸಮಾಜದ ಅರ್ಥವ್ಯವಸ್ಥೆಯಲ್ಲಿ ಕ್ರಾಂತಿಕಾರಕವಾದ ಮಾರ್ಪಾಟುಗಳಾಗಬೇಕೆಂದು ಈ ನಿರ್ಣಯವು ಘೋಷಿಸುವುದು. ಈ ಬೇಡಿಕೆಯ ಕಾರಣಗಳನ್ನು ಒಬ್ಬ ಸಾಮ್ಯವಾದಿಯು ಹೇಳುವಷ್ಟು ಸ್ಪಷ್ಟವಾಗಿ ಇಲ್ಲಿ ತಿಳಿಸಲಾಗಿದೆ. ಹಾಗಾದರೆ ತೊಂದರೆಯೆಲ್ಲಿದೆ ? ಈ ಬಗೆಗೆ ಕಾಂಗ್ರೆಸಿಗೂ ನಮಗೂ ಎಲ್ಲಿ ಬಿಡುವುದು ? ಕ್ರಾಂತಿಕಾರಕ ಬದಲುಗಳಾಗಬೇಕೆಂದು ಬಾಯಿಂದ ಸಾರಿ, ಕಾಂಗ್ರೆಸ್ಸು ತೆಪ್ಪಗೆ ಮೇಲೆ ಮೇಲೆಯೇ ಕೆದರುವುದು. ಇಂದು ಮುಳಿದು ನಮ್ಮನ್ನು ಹಳಿಯುವ ಕಾಂಗ್ರೆಸಿನ ಸದಸ್ಯರಿಗೆ ನಾನು ಖಂಡಿತವಾದ ಒಂದೆರಡು ಪ್ರಶ್ನೆಗಳನ್ನು ಕೇಳುವೆ. ಮರಣ ಕಂದಾಯ (Death Duty), ವರಮಾನ ತೆರಿಗೆ, ಪ್ರಮುಖ ಉದ್ಯಮಗಳ ರಾಷ್ಟ್ರೀಕರಣ (Nationalization), ಲಾವಣಿ (ಗೇಣಿ), ಬಾಡಿಗೆಗಳನ್ನು ಕಡಿಮೆ ಮಾಡುವುದು, ಅನುತ್ಪಾದಕ ಆಸ್ತಿಗೆ ಕರ ಹೇರದಿರುವುದು,---ಇವುಗಳೇ ಆ ಅರ್ಥವ್ಯವಸ್ಥೆಯ ಕ್ರಾಂತಿಕಾರಕ ಮಾರ್ಪಾಟುಗಳೋ ? ಇವುಗಳೇ ಮೇಲಿನ ಕಾಂಗ್ರೆಸ್ ನಿರ್ಣಯವು ಖಂಡಿತವಾಗಿ ಸೂಚಿಸುವ ಬಂಡವಾಳಗಾರಿಕೆಯ ಸುಲಿಗೆಯನ್ನು ಸದೆಬಡೆಯುವ ಹಂಚಿಕೆಗಳೋ ? ಕರಾಚಿಯ ಕಾಂಗ್ರೆಸಿನ ತೀರ್ಮಾನವು ಗೊತ್ತುಪಡಿಸಿದ ಮೂಲ ಆರ್ಥಿಕ ನೀತಿಯುಂತೂ ಇಷ್ಟರಲ್ಲಿಯೇ ಇದೆ.

ಎ. ಐ. ಸಿ. ಸಿ. ಯೆಂದರೆ ಕಾಂಗ್ರೆಸ್ ಅಲ್ಲವೆಂದು ಯಾರಾದರೂ ನನಗೆ ಎಚ್ಚರ ಕೊಡಬಹುದು. ಏನಾದರೂ ಹೇಳಿ ಜಾರಿಕೊಳ್ಳಲು ಇದು ಅನುಕೂಲವಾದ ಹಂಚಿಕೆಯಾಗಬಹುದಷ್ಟೇ ಅಲ್ಲದೆ, ನಾನೆತ್ತಿದ ಮಾತಿಗೆ ಸರಿಯಾದ ಉತ್ತರವೆಂದೂ ಆಗಲಾರದು. ಆದರೆ ಕರಾಚಿಯ ಗೊತ್ತುವಳಿಯನ್ನೇ

ನೋಡಿದರೆ ಏನು ತೋರುವುದು? ನಿಜವಾದ ಸ್ವರಾಜ್ಯದಲ್ಲಿ ದೇಶದ ರಾಜಕೀಯ ಸ್ವಾತಂತ್ರ್ಯವಿಷ್ಟೇ ಅಲ್ಲ, ಜನಸಾಮಾನ್ಯರ ಆರ್ಥಿಕ ಸ್ವಾತಂತ್ರ್ಯವೂ ಒಳ-ಗೊಂಡಿರಬೇಕೆಂಬುದೇ ಸ್ಪಷ್ಟವಾಗಿ ತೀರ್ಮಾನದ ಪೂರ್ವಭಾಗವಾಗಿದೆ.

ಆರ್ಥಿಕ ಸ್ವಾತಂತ್ರ್ಯವೆಂದರೇನು? ನಮ್ಮನ್ನು ವಿರೋಧಿಸುವ ನನ್ನ ಗೆಳೆಯರೂ ಮುಂದಾಳುಗಳೂ ಈ ಪ್ರಶ್ನೆಗೆ ಉತ್ತರ ಕೊಡಲು ಸಿದ್ಧರಿರುವರೋ? ಕರಾಚಿಯ ಗೊತ್ತುವಳಿಯು ಅಂಜಿ ಅಳುಕಿ ಹೇಳುವ ಜೊಳ್ಳು, ಹಂಚಿಕೆಗಳಿಂದ ಆರ್ಥಿಕ ಸ್ವಾತಂತ್ರ್ಯವು ದೊರೆಯಬಹುದೆಂದು ಪ್ರಾಮಾಣಿಕವಾಗಿಯೂ ಅವರು ನಂಬುವರೋ? ಸಾವಿನ ತೆರಿಗೆ, ಪ್ರಮುಖ ಉದ್ಯಮಗಳನ್ನು ಜನಾಂಗದ ಅಧೀನದಲ್ಲಿರಿಸುವುದು, ಇವುಗಳೇ ಆರ್ಥಿಕ ಸ್ವಾತಂತ್ರ್ಯದ ಅರ್ಥವೆಂದು ಕಾಂಗ್ರೆಸ್ಸಿನವರು ತಿಳಿದುಕೊಂಡಿದ್ದರೆ ಮಾತೇ ಮುಗಿಯಿತು. ಈ ನಿರ್ಭಾಗ್ಯ ದೇಶಕ್ಕೆ ಕಾಂಗ್ರೆಸ್ಸಿನವರಿಂದ ಸಿಕ್ಕುವ ಸ್ವಾತಂತ್ರ್ಯವು ಬಲು ಸೊಗಸಾಗಿದೆ ಯೆಂದು ಹೇಳಬಹುದು! ಬಹುಕಾಲದ ವರೆಗೆ ಪಾರತಂತ್ರ್ಯದಲ್ಲಿ ಪೇಚಾಡುತ್ತಿದ್ದ ನಾವು ಸ್ವಾತಂತ್ರ್ಯದ ಗುರುತನ್ನು ಮರೆತುಬಿಟ್ಟಿದ್ದೇವೆ!

ಕರಾಚಿಯಲ್ಲಿ ಕಾಂಗ್ರೆಸ್ಸು ಸಾಮ್ಯವಾದದ ಪರಿಪೂರ್ಣ ಕಾರ್ಯಕ್ರಮವೊಂದನ್ನು ನಿರ್ಣಯಿಸಬೇಕಿತ್ತೆಂದು ನಾನು ಹೇಳುತ್ತಿಲ್ಲ. ಈಗ ಸಹ ಕಾಂಗ್ರೆಸು ಹಾಗೆ ಮಾಡಿಬಿಡಬೇಕೆಂದು ನಮ್ಮ ಹಟವಿಲ್ಲ. ಕಾಂಗ್ರೆಸ್ಸಿನವರು ಈಗ ಕನಿಷ್ಠವಾದ ಆರ್ಥಿಕ ಕಾರ್ಯಕ್ರಮವೊಂದನ್ನು ಅಂಗೀಕರಿಸಬೇಕು. ಅದನ್ನು ನೆರವೇರಿಸುವುದರಿಂದ ಜನತೆಯ ಧನಾಪಹಾರವು ನಿಂತು ರಾಜಕೀಯ ಮತ್ತು ಆರ್ಥಿಕ ವ್ಯವಸ್ಥೆಯ ಅಧಿಕಾರವೆಲ್ಲವೂ ಅವರ ಕೈಗೆ ಸೇರಬೇಕು. ನಾವು ಕೇಳುವುದಿಷ್ಟೇ. ಕಾಂಗ್ರೆಸಿನ ಸಾಮ್ಯವಾದೀ ಪಕ್ಷವೂ ಇಂಥಹ ಕಾರ್ಯಕ್ರಮವನ್ನೇ ಪ್ರತಿಪಾದಿಸುತ್ತಿದೆ. ಕಾಂಗ್ರೆಸ್ಸಿನ ಸದ್ಯದ ಕಾರ್ಯಕ್ರಮವು ಈ ಸಾಮ್ಯವಾದೀಯ ಆದರ್ಶಗಳಿಗೆ ಬಹಳ ದೂರದಲ್ಲಿದೆ. ಜನಸಾಮಾನ್ಯರ ಸ್ಥಿತಿಯನ್ನು ಅದು ಕೆಲಮಟ್ಟಿಗೆ ಸುಧಾರಿಸಬಹುದು. ಆದರೆ ಅದರಿಂದ ಅವರು ಆರ್ಥಿಕ ಅಪಹಾರದಿಂದ ಬಿಡುಗಡೆಯನ್ನಾಗಲಿ ರಾಷ್ಟ್ರದ ಅಧಿಕಾರವನ್ನಾಗಲಿ ಪಡೆಯರು. ಎ. ಐ. ಸಿ. ಸಿ. ಯವರು ಮುಂಬಯಿಯಲ್ಲಿ ಹಂಬಲಿಸಿದಂತೆ ಅದರಿಂದ ನಮ್ಮ ಅರ್ಥವ್ಯವಸ್ಥೆಯಲ್ಲಿ ಮಹಾವ್ಯತ್ಯಾಸಗಳಾಗುವುವಂತೂ ಇಲ್ಲವೇ ಇಲ್ಲ. ಆದರೆ ನಮ್ಮ ಆರ್ಥಿಕ ಘಟನೆಯು ಮಾತ್ರ ಅಚ್ಚಳಿ

ಯದೆ ಉಳಿಯುವುದು. ಅದು ಒಂದು ಕಡೆಗೆ ಬಂಡವಾಳಗಾರರು, ಜಾಗೀರದಾರರು, ರಾಜರು ಇವರುಗಳನ್ನೂ ಇನ್ನೊಂದು ಕಡೆಗೆ ಬಾಡಿಗೆಗಾರರು, ಕೆಲಸಗಾರರು, ಆಳುಗಳು ಇವರನ್ನೂ ಇದ್ದಂತೆಯೇ ಇರಗೊಡುವುದು. ಪ್ರಮುಖ ಉದ್ಯಮಗಳನ್ನುಳಿದು ಮಿಕ್ಕ ಉತ್ಪತ್ತಿ ಸಾಧನಗಳನ್ನೆಲ್ಲ ಅದು ವ್ಯಕ್ತಿಗತ ಒಡೆತನದಲ್ಲಿಯೇ ಬಿಡುವುದು. ಬಡವರ ಮತ್ತು ನಡುವಿನ ವರ್ಗದವರ ಸುಲಿಗೆಯ ಬಲದಿಂದ ಬಾಳುವ ಸದ್ಯದ ಆರ್ಥಿಕ ಸಂಘಟನೆಯು ಹಾಗೆಯೇ ಉಳಿದಿದೆ. ಇದು ಆರ್ಥಿಕ ಸ್ವಾತಂತ್ರ್ಯವಲ್ಲ. ಕರಾಚಿಯ ನಿರ್ಣಯದ ಪೀಠಿಕೆಗೂ ಅದರ ಸಾರಕ್ಕೂ ಒಂದಕ್ಕೊಂದು ಹೊಂದಿಕೆಯೇ ಇಲ್ಲ. ಈ ವಿಸಂಗತತೆಯನ್ನು ಹೋಗಲಾಡಿಸಿ ಅವುಗಳು ಒಂದಕ್ಕೊಂದು ಕೂಡಿಕೊಂಡು ಹೋಗುವಂತೆ ಮಾಡುವುದೇ ನಮ್ಮ ಪ್ರಯತ್ನ. ಜನತೆಯ ಆರ್ಥಿಕ ಸ್ವಾತಂತ್ರ್ಯವೇ ತನ್ನ ಧ್ಯೇಯವೆಂದು ಸಾರುವ ಕಾಂಗ್ರೆಸ್ಸು ಆ ಸ್ವಾತಂತ್ರ್ಯದ ನಿಚ್ಚಳವಾದ ಕಲ್ಪನೆಯನ್ನು ಕೊಡಲಿ.

ನಾವು ಹೇಳುವ ಇಂತಹ ಕನಿಷ್ಠ ಕಾರ್ಯಕ್ರಮವನ್ನು ಕೈಕೊಳ್ಳಲು ಕಾಂಗ್ರೆಸ್ಸು ಒಂದು ವೇಳೆ ಒಪ್ಪಲಿಕ್ಕಿಲ್ಲ. ಈ ವಿಚಾರದ ನಿಲುವಿಗೇರಲು ಅದಕ್ಕೆ ಕೆಲವು ಕಾಲ ಬೇಕಾದೀತು. ತಮ್ಮ ಧ್ಯೇಯದ ವ್ಯಾಖ್ಯೆಯನ್ನು ಇನ್ನೂ ಹೆಚ್ಚು ಸ್ಪಷ್ಟಪಡಿಸಲು ತಾವು ಸಿದ್ಧರಿಲ್ಲೆಂದು ಕಾಂಗ್ರೆಸ್ಸಿನವರು ಹೇಳುವುದು ಒಂದು ಮಾರ್ಗ. ಇದೂ ಸಮಂಜಸವಲ್ಲೆಂದು ವಾದಿಸುವವರಿದ್ದಾರೆ. ಆದರೆ ಸಾಮ್ಯವಾದವು ಒಂದು ಭ್ರಾಂತಿಯೆಂಬುದಾಗಿ ಹಗಲಿರುಳು ಬೇಸರ ಬರುವಂತೆ ಹೇಳುತ್ತ ಹೋಗುವುದು, ಹಿಂದುಸ್ಥಾನದ ಪರಿಸ್ಥಿತಿಗೆ ಅದು ಸಲ್ಲದೆನ್ನುವುದು, ಭಾರತೀಯ ಸಾಮ್ಯವಾದಿಗಳು ಕೇವಲ ತತ್ತ್ವಪ್ರಪಂಚದ ಸಾಹಸಿಗಳೆನ್ನುವುದು, ಬರೀ ಕಾರ್ಲ್‌ಹೆನ್ರಿಕ್ ಮಾರ್ಕ್ಸ್‌ನೆಂಬ ಒಬ್ಬ ಜರ್ಮನ್ ಯಹೂದಿಯ ಅಭಿಪ್ರಾಯಗಳನ್ನು ಪಾಠಮಾಡಿ ಒಪ್ಪಿಸುತ್ತಿರುವರೆಂದು ಹೇಳುವುದು ಮುಂತಾದ ಇಂತಹ ಮನಬಂದಂತಹ ಮರುಳು ಮಾತುಗಳನ್ನು ಕೊಚ್ಚುವುದು ಇನ್ನೊಂದು ಮಾರ್ಗ.

ಕಾಂಗ್ರೆಸ್ಸಿಗೆ ಈ ಬಗೆಯ ತಿಳಿಗೇಡಿತನದಿಂದ ತಣಿಯಬೇಕೆಂದು ಮನಸ್ಸಿದ್ದರೆ ಅದು ಜನತೆಗೆ ಆರ್ಥಿಕ ಸ್ವಾತಂತ್ರ್ಯವೆಂದರೆ ಏನೆಂಬುದನ್ನು ವಿವರಿಸಬೇಕು. ‘ ಜನತೆಯ ದುಃಖದಾರಿದ್ರ್ಯಗಳಿಗೆ ಸಮಾನ ಕಾರಣಗಳಾದ

ಸಾಮ್ರಾಜ್ಯ ಪ್ರಭುತ್ವ ಮತ್ತು ದೇಶೀಯ ಪದ್ಧತಿಯ ಸುಲಿಗೆ ಇವುಗಳಿಂದ ಪ್ರಜೆಗಳ ಬಿಡುಗಡೆ' ಎಂಬ ವಾಕ್ಯದ ಯಥಾರ್ಥ ವಿಚಾರವನ್ನು ಅವರಿಗೆ ತಿಳಿಸಬೇಕು.

ಸಾಮ್ಯವಾದಿಗಳ ಮಟ್ಟಿಗೆ ಆರ್ಥಿಕ ಸ್ವಾತಂತ್ರ್ಯವೆಂದರೆ ಸಾಮ್ಯವಾದದ ಸಿದ್ಧಿಯೆಂದರ್ಥ. ಕಾಂಗ್ರೆಸ್ ಸಾಮ್ಯವಾದಿಗಳೂ ಮತ್ತು ಹಿಂದುಸ್ಥಾನದಲ್ಲಿ ಸಾಮ್ಯವಾದೀಯ ಮತ್ತು ಸಂಘವಾದೀಯ ಪಕ್ಷಕ್ಕೆ ಸೇರಿದವರೆಲ್ಲರೂ ಇದೇ ವಿಚಾರದವರು. ಸಾಮ್ಯವಾದಿತ್ವವಿಲ್ಲದ ಆರ್ಥಿಕ ಸ್ವಾತಂತ್ರ್ಯವೆಂಬುದು ಬರೀ ಭ್ರಮೆ, ಹುಚ್ಚು ಹಂಬಲು.

ಹಾಗಾದರೆ, ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ಏನು ಮಾಡಬೇಕೆಂದಿದೆ? ಜನತೆಯ ಆರ್ಥಿಕ ಸ್ವಾತಂತ್ರ್ಯವನ್ನು ಸಂಪಾದಿಸುವ ಸರಕಾರವು ಪ್ರಮುಖ ಉದ್ಯಮಗಳನ್ನು ಜನಾಂಗದ ಆಡಳಿತಕ್ಕೊಳಪಡಿಸುವುದಲ್ಲದೆ ಇನ್ನೇನನ್ನು ಮಾಡಬೇಕು ? ಪ್ರಜೆಗಳನ್ನು ಅಪಹಾರ, ಅನ್ಯಾಯ, ಅಜ್ಞಾನ, ದುಃಖ, ದಾರಿದ್ರ್ಯಗಳಿಂದ ಬಿಡುಗಡೆ ಮಾಡಲು ಮಾಡಬೇಕಾದುದೇನು ?

ಇದನ್ನೆಲ್ಲ ಕೈಗೂಡಿಸಲು ಅಗತ್ಯವಾದ ಯೋಜನೆಗಳನ್ನೆಲ್ಲ ಅಖಿಲ ಭಾರತ ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ತನ್ನ ಕಾರ್ಯಕ್ರಮದಲ್ಲಿ ತೋರುವ 'ಉದ್ದೇಶಗಳು' ಎಂಬ ಭಾಗದಲ್ಲಿ ಸ್ಪಷ್ಟವಾಗಿ ಕಾಣಿಸಿದೆ. ಅದನ್ನು ಇಲ್ಲಿ ಕೊಡುವೆನು.

೧. **ಎಲ್ಲ ಅಧಿಕಾರವೂ ಧನೋತ್ಪತ್ತಿಯಲ್ಲಿ ತೊಡಗಿದ ಜನತೆಯ ಕೈಗೆ ಹೋಗಬೇಕು.**

೨. **ದೇಶದ ಆರ್ಥಿಕ ಜೀವನದ ವಿಕಾಸವೆಲ್ಲ ರಾಷ್ಟ್ರದ ನಿಯಂತ್ರಣ ಯೋಜನೆಗಳಿಗೆ ಒಳಪಡಬೇಕು.**

೩. **ಕಾಲಕ್ರಮದಲ್ಲಿ ದೇಶದ ಉತ್ಪತ್ತಿ ವಿನಿಮಯ ವಿತರಣಗಳ ಸಾಧನಗಳನ್ನೆಲ್ಲ ಜನಾಂಗದ ಒಡೆತನದಲ್ಲಿರಿಸುವ ಉದ್ದೇಶದಿಂದ ಉಕ್ಕು, ಹತ್ತಿ, ನಾರು, ರೇಷ್ಮೆ, ಹಡಗ, ಖನಿಗಳು ಮುಂತಾದ ಪ್ರಮುಖ ಮತ್ತು ಜೀವಾಳದ(Key) ಉದ್ಯಮಗಳನ್ನೂ ಕುಸೀದಗಳು, ವಿಮಾಸಂಘಗಳು, ಸಾರ್ವಜನಿಕ**

ಪ್ರಯೋಜನದ ಸಂಸ್ಥೆಗಳೇ ಮೊದಲಾದವುಗಳನ್ನೂ ಜನಾಂಗದ ಒಡೆತನಕ್ಕೊಪ್ಪಿಸುವುದು.

೪. ವಿದೇಶ ವ್ಯಾಪಾರವು ರಾಷ್ಟ್ರದ ವಿಶಿಷ್ಟ ಅಧಿಕಾರಕ್ಕೆ ಸೇರಿದುದು.

೫. ಸಾಮ್ಯವಾದದ ಆಡಳಿತಕ್ಕೆ ಇನ್ನೂ ಒಳಪಡದ ದೇಶದ ಅರ್ಥವ್ಯವಸ್ಥೆಯ ಭಾಗದ ಉತ್ಪತ್ತಿ, ವಿತರಣ ಮತ್ತು ಸಾಲ ಇವುಗಳನ್ನು ಸಹಕಾರದ ಸಂಘಟನೆಯಿಂದ ನಡೆಸುವುದು.

೬. ರಾಜರು, ಜಾಗೀರದಾರರು ಮತ್ತು ಬೇರೆ ಎಲ್ಲ ತರಹದ ಸುಲಿಗೆಗಾರರು ಮುಂತಾದವರನ್ನೆಲ್ಲ ಪ್ರತಿಫಲ ಕೊಡದೆ ಅವರ ಗದ್ದುಗೆಗಳಿಂದ ತಳ್ಳಿಹಾಕುವುದು.

೭. ಹೊಲ ಗದ್ದೆಗಳನ್ನೆಲ್ಲ ಮತ್ತೊಮ್ಮೆ ಒಕ್ಕಲಿಗರಲ್ಲಿ ಹಂಚುವುದು.

೮. ಸಹಕಾರದ ಮತ್ತು ಸಾಂಘಿಕವಾದ ಒಕ್ಕಲುತನಕ್ಕೆ ರಾಷ್ಟ್ರದ ಸಹಾಯ ಮತ್ತು ಪ್ರೋತ್ಸಾಹ.

೯. ದುಡಿತದಾಳುಗಳ ಮತ್ತು ಒಕ್ಕಲಿಗರ ಸಾಲಗಳನ್ನೆಲ್ಲ ಸಲ್ಲಿಸುವುದು.

೧೦. ಪ್ರತಿಯೊಂದು ವ್ಯಕ್ತಿಗೆ ದುಡಿತವನ್ನು ಕೊಡುವುದು ಅಥವಾ ಉಪಜೀವಿಕೆಯನ್ನೊದಗಿಸುವುದು ತನ್ನ ಕರ್ತವ್ಯವೆಂದು ರಾಷ್ಟ್ರವು ಒಪ್ಪುವುದು.

೧೧. ಪ್ರತಿಯೊಂದು ವ್ಯಕ್ತಿಯ ಕಾರ್ಯಕ್ಷಮತೆಯಂತೆ ದುಡಿತವನ್ನು ತೆಗೆದುಕೊಂಡು ಅವರವರ ಅಗತ್ಯಗಳಂತೆ ಜೀವನ ಸಾಮಗ್ರಿಗಳನ್ನೊದಗಿಸುವುದೇ ಆರ್ಥಿಕ ಸರಕುಗಳ ಉತ್ಪತ್ತಿ ವಿತರಣಗಳನ್ನು ಸಾಗಿಸುವ ಕ್ರಮದ ಮೂಲಾಧಾರವಾಗಬೇಕು.

**೧೨. ದುಡಿತದ ತಳಹದಿಯ ಮೇಲೆ ಪ್ರಾಯಪ್ರಬುದ್ಧರಾದವರಿಗೆಲ್ಲ ಮತಾಧಿಕಾರ.**

**೧೩. ರಾಷ್ಟ್ರವು ಧಾರ್ಮಿಕ ಮತಮತಗಳಲ್ಲಿ ಪಕ್ಷಪಾತವನ್ನು ಮಾಡುವುದಾಗಲಿ ವಿಶಿಷ್ಟವಾದ ಒಂದು ಮತಕ್ಕೆ ಬೆಂಬಲವನ್ನು ಕೊಡುವುದಾಗಲಿ ಸಲ್ಲದು. ಜಾತಿ ವರ್ಣಗಳಲ್ಲಿ ಕೀಳು ಮೇಲೆಂಬ ಭೇದವನ್ನೂ ಮಾಡಕೂಡದು.**

**೧೪. ರಾಷ್ಟ್ರಕ್ಕೆ ಲಿಂಗಭೇದವಿರಲಾಗದು.**

**೧೫. ಭಾರತದ ಸಾರ್ವಜನಿಕ (ಸರಕಾರದ) ಸಾಲವೆಂಬುದನ್ನು ಅಲ್ಲಗಳೆಯುವುದು.**

ಹೀಗೆ ಮೇಲ್ಕಂಡ ೧೫ ಯೋಜನೆಗಳಿವೆ. ಇವುಗಳು ಬೇಡವೆಂದು ತೋರುವಂಥವು, ಈಗಿನ ಸಮಾಜವನ್ನು ಬುಡಮೇಲು ಮಾಡುವಂಥವು, ಬಹಳ ಉಗ್ರವಾದವು, ನಮಗೆ ಪರಕೀಯವೆಂದು ಕಾಣುವಂಥವು. ನಿಜವಾಗಿ ನೋಡಿದರೆ ಇವು ಅದಷ್ಟು ಸರಳವಾಗಿ ವಿವೇಕಯುಕ್ತವಾಗಿ ನ್ಯಾಯವಾಗಿ ಮತ್ತು ವ್ಯವಹಾರ್ಯವಾಗಿವೆ. ಆದರೆ ಘಟನಾಸಮಿತಿ (Constituent Assembly), ನ್ಯಾಯಮಂಡಲ, ಸುಂಕದ ಸಮಿತಿ, ಹತ್ತಿಯ ಗಿರಣಿಗಳ ಕೂಗು ಇವುಗಳಲ್ಲಿರುವಷ್ಟು ವಿದೇಶೀಯತೆಯು ಮಾತ್ರ ಇಲ್ಲಿ ತೋರುವುದಿಲ್ಲ. ನಾವು ಮೊದಲನೆಯ ಅಧ್ಯಾಯದಲ್ಲಿ ಚರ್ಚಿಸಿದ, ಉತ್ಪಾದಕ ಆಸ್ತಿಯ ವ್ಯಕ್ತಿಗತ ಒಡೆತನವನ್ನು ನಾಶಪಡಿಸುವ, ಸರಲವಾದ ತತ್ತ್ವದ ಸಿದ್ಧಿಗಾಗಿಯೇ ಇವೆಲ್ಲ ಯೋಜನೆಗಳನ್ನು ಕಲ್ಪಿಸಲಾಗಿದೆ. ಈ ವ್ಯಕ್ತಿಗತ ಒಡೆತನವೇ ನಮ್ಮ ಎಲ್ಲ ಅಥವಾ ಹಲವು ಕಷ್ಟಗಳ ಮುಖ್ಯ ಕಾರಣವೆಂಬುವನ್ನು ನಾವು ಕಂಡುಕೊಂಡಿರುವೆವು. ಸಮಾಜ ಜೀವನದ ಅತ್ಯಂತ ವಿವೇಕಯುಕ್ತವಾದ ವಿಚಾರಗಳಲ್ಲೊಂದಾದ ಸಮಾಜದ ಆರ್ಥಿಕ ಯೋಜನೆಯ ವಿಷಯವನ್ನು ಪ್ರಸ್ಥಾಪಿಸುವುದೂ ಇವುಗಳ ಉದ್ದೇಶವಾಗಿದೆ.

ಈ ೧೫ರಲ್ಲಿ ೧, ೨, ೩, ೪, ೫, ೬, ೭, ೧೦, ೧೧ ಮತ್ತು ೧೨ನೆಯ ಯೋಜನೆಗಳನ್ನು ಮಾತ್ರ ಇಲ್ಲಿ ವಿವೇಚಿಸುತ್ತೇನೆ. ಮಿಕ್ಕವುಗಳೆಲ್ಲ ತಮ್ಮಿಂದ ತಾವೇ ತಿಳಿದುಬರುತ್ತವೆ.

## ೧. ಅಧಿಕಾರವೆಲ್ಲ ಧನೋತ್ಪತ್ತಿಗಾಗಿ ದುಡಿಯುವವರಿಗೆ

ರಾಜಕೀಯ ಮತ್ತು ಆರ್ಥಿಕ ಅಧಿಕಾರವೆಂಬುದೆಲ್ಲ ಧನಾರ್ಜನೆಗಾಗಿ ದುಡಿಯುವವರಿಗೆ ಸಲ್ಲಬೇಕೆಂಬುದೇ ಈ ಯೋಜನೆಯ ಸಂಕಲ್ಪ. ಸರಕುಗಳ ನಿರ್ಮಾಣದಲ್ಲಿ ತೊಡಗಿವವರೂ ಕೈ ದುಡುಳುಗಳ ಶ್ರಮದಿಂದ ಅದಕ್ಕೆ ನೆರವಾಗುವವರೂ ಇವರಲ್ಲಿ ಸಮಾವಿಷ್ಟರಾಗುವರು. ದುಡಿಯುವವರಿಗೆ ರಾಷ್ಟ್ರದ ಅಧಿಕಾರವು ಹೋಗುವುದೆಂದ ಬಳಿಕ, ದುಡಿಯದಿದ್ದವರಿಗೆ ಅಧಿಕಾರ ವಿಲ್ಲವೆಂಬುದು ತಾನೇ ಸಿದ್ಧವಾಗುವುದು.

ಇದರಲ್ಲಿ ಮೂಲಭೂತವಾದ ತತ್ತ್ವವೊಂದು ಅಡಗಿದೆ. ಈವರೆಗೆ ಮಾನವನಿಗೆ ಗೊತ್ತಿದ್ದ ಸಮಾಜ ಸಂಘಟನೆಗಳಲ್ಲೆಲ್ಲ ಮುಖ್ಯಾಧಿಕಾರವು ಪ್ರತಿಯೊಂದು ಸಮಾಜದಲ್ಲಿ ಅಧಿಕ ಸಂಖ್ಯಾಕರಾಗಿರುವ ದುಡಿಯುವ ವರ್ಗದವರ ಕೈಯಲ್ಲಿರದೆ ಬಂಡವಾಳಗಾರರ ಬಳಗದಲ್ಲಿಯೇ ಉಳಿಯುತ್ತ ಬಂದಿದೆ. ಆಧುನಿಕ ಪ್ರಜಾಸತ್ತಾವಾದದ ಉದಯಕ್ಕಿಂತ ಮುಂಚಿನ ಎಲ್ಲ ರಾಜ್ಯಾಂಗ ರಚನೆಗಳಲ್ಲಿಯೂ ಹೀಗೆಯೇ ಇದ್ದಿತೆಂಬುದು ಸ್ಪಷ್ಟವಿದೆ. ರಾಷ್ಟ್ರವು ಸಂಪೂರ್ಣವಾಗಿ ಆಳುವ ವರ್ಗದ ವಶದಲ್ಲಿತ್ತು. ಅದು ವರ್ಗ ವರ್ಗಗಳ ದಬ್ಬಾಳಿಕೆಯ ಅನುಕೂಲ ಆಯುಧವಾಗಿತ್ತು. ಗ್ರೀಸ್ ದೇಶದ ಪ್ರಜಾಸತ್ತಾತ್ಮಕ ರಾಜ್ಯಗಳಲ್ಲಿಯೂ ಹೀಗೆಯೇ ಇದ್ದಿತು. ಅಲ್ಲಿಯೂ ಒಂದು ಹಿಡಿ ಪಟ್ಟಣಿಗರು ತಮಗಾಗಿ ದುಡಿಯುವ ಅನೇಕ ದಾಸರನ್ನು ದಬ್ಬಾಳಿಕೆ ಯಿಂದ ಆಳುತ್ತಿದ್ದರು.

ಪ್ರಜಾಸತ್ತಾತ್ಮಕ ಪದ್ಧತಿ ಮತದಾನದ ಪೆಟ್ಟಿಗೆಯು ಹುಟ್ಟಿ ಪಕ್ಷಪ್ರಧಾನ ವಾದ ಸರಕಾರದ ರೀತಿಯು ತಲೆದೋರಿದಂತೇ ಉದಯವಾಯಿತು. ಇವೆರಡ ರಿಂದ ಉಚ್ಚ ನೀಚ ಭೇದಗಳಿಲ್ಲದೆ ಎಲ್ಲ ಪ್ರಜೆಗಳಿಗೂ ಸಮಾನಾಧಿಕಾರ ಪ್ರಾಪ್ತವಾಯಿತೆಂದು ನಂಬಲಾಯಿತು. ಆದರೆ ದೇಶಗಳ ಸಮಾಜದ ಅರ್ಥ ವ್ಯವಸ್ಥೆಯು ಸೊತ್ತುಳ್ಳವರಿಗೆ ಅನುಕೂಲವಾಗಿದ್ದುದರಿಂದ ಸಕಲ ಪ್ರಜೆಗಳ ಅಧಿಕಾರವೆಂಬ ಕಲ್ಪನೆಯು ಅಪಹಾಸ್ಯಕ್ಕೀಡಾಯಿತು. ಧನಿಕರಿಗೆ ವಿಪುಲ ವಾದ ಪ್ರಸಾರಸಾಧನಗಳಿವೆ, ಆಯ್ಕೆಗಾಗಿ ಏರ್ಪಡಿಸಿದ ದೊಡ್ಡ ನಿಧಿಯಿದೆ. ಅವರ ತಂತ್ರಕ್ಕೊಳಪಟ್ಟ ಪತ್ರಿಕೆಗಳಿವೆ, ಶಾಲೆ ಕಾಲೇಜುಗಳಿವೆ. ಆದರೆ ಬಡವರ

ಪಾಡೇನು ? ಚಿಕ್ಕಬೇಡಿ ಬಂದ ಹಿಡಿ ಹಿಟ್ಟಿನಿಂದ ಅರೆಹೊಟ್ಟೆಯುಂಡು ಬಾಳಬೇಕು. ಇಲ್ಲವೇ ಕೂಳುಗೇಡಿಗಳಾಗಿ ಚಡಪಡಿಸಬೇಕು. ಇಂತಹ ಪರಿಸ್ಥಿತಿಯಲ್ಲಿ ಅವರಿಗೆ ತಮ್ಮ ಮತಾಧಿಕಾರದ ಮಹತ್ತ್ವವು ತಿಳಿದು ಬರುವುದಿಲ್ಲ.

ತೀರ ತೊಂದರೆಗಳಿದ್ದರೂ ಬಡ ಕೆಲಸಗಾರರು ಒಮ್ಮೊಮ್ಮೆ ರಾಷ್ಟ್ರದ ಅರ್ಥವ್ಯವಸ್ಥೆಯನ್ನು ತಮಗೆ ಅನುಕೂಲವಾಗುವಂತೆ ನಸುವಾದರೂ ಮಣಿಸುವ ರೆಂದು ತಿಳಿದುಬಂದರೆ, ಈ ನಗೆಗೀಡಾದ ಹುರುಳಿಲ್ಲದ ಪ್ರಜಾಸತ್ತಾತ್ಮಕ ಪದ್ಧತಿಯೆಂಬುದು ಸಹ ಅವರ ವಿರುದ್ಧ ನಿಲ್ಲುವುದು. ಆಗ "ಕ್ರಾಂತಿ, ಕ್ರಾಂತಿ" ಎಂಬ ಗುಲ್ಲು ಎಲ್ಲೆಲ್ಲಿಯೂ ಕೇಳಿಬರುವುದು ಈ ಪ್ರಜಾಸತ್ತಾತ್ಮಕ ಪದ್ಧತಿಯು ಮಂಜಿನಂತೆ ಮಾಯವಾಗುವುದು. ಕೆಲಸಗಾರರ ಕೈಗಳಿಂದ ಮತದಾನದ ಪೆಟ್ಟಿಗೆಯನ್ನು ಕಸಿದುಕೊಳ್ಳುವುದು. ಪಕ್ಷಪ್ರಧಾನವಾದ ಸರಕಾರವು ತಿಪ್ಪೆಗೆ ತೂರಲ್ಪಡುವುದು. ಫ್ಯಾಸಿಜಮ್ ಪಟ್ಟಭದ್ರವಾಗುವುದು. ಆರ್ಥಿಕ ಘಟನೆಯನ್ನು ಮರಳಿ ಸಿರಿವಂತರಿಗೆ ಅನುಕೂಲವಾಗುವಂತೆ ಸರಿಪಡಿಸ ಲಾಗುವುದು.

ಇಂತಹ ಹಿಂದಿನ ಅನುಭವವನ್ನುಂಡು ಇಂದು ನಾವು "ಅಧಿಕಾರವೆಲ್ಲ ಮಡಿಯುವವರಿಗೆ" ಎಂದು ಸಾರುತ್ತಲಿದ್ದೇವೆ.

ನಾವು ಬರಿಯ ಜಂಬ ಕೊಚ್ಚುತ್ತಿದ್ದೇವೆಂದು ಯಾರಾದರೂ ಹೀಯಾ ಳಿಸಬಹುದು. ಇಲ್ಲ. ಅದೆಂದಿಗೂ ಸಾಧ್ಯವಿಲ್ಲ.

ಇದು ನಿಜವೆಂದು ನಾವು ಗಟ್ಟಿಯಾಗಿ ಹೇಳುತ್ತೇವೆ. ಆರ್ಥಿಕ ಬಲವೇ ಅಧಿಕಾರದ ಮೂಲವೆಂಬುದು ನಮಗೆ ಮನದಟ್ಟಾಗಿರುವುದರಿಂದಲೇ ನಾವು ಹೀಗೆ ಹೇಳುತ್ತೇವೆ. ಅರ್ಥೋತ್ಪತ್ತಿಗಾಗಿ ಮೈಮುರಿದು ದುಡಿಯುವವರೇ ಅರ್ಥವ್ಯವಸ್ಥೆಯ ಒಡೆಯರಾಗುವರೆಂದ ಬಳಿಕ ನಾವು ಬಯಸಿದುದೆಲ್ಲವೂ ಸಹಜವಾಗಿಯೂ ಖಂಡಿತವಾಗಿಯೂ ನೆರವೇರುವುದು. ನಾವು ಇದೊಂದೇ ವಿಷಯದಿಂದ ಸಂತೃಪ್ತರಾಗಿ ಮಿಕ್ಕ ಯೋಜನೆಗಳನ್ನು ಹಾಗೆಯೇ ಬಿಟ್ಟ ಪಕ್ಷಕ್ಕೆ ಬರಿಯ ಜಂಬದ, ಅಷ್ಟೇ ಅಲ್ಲ, ಮೋಸದ ತಪ್ಪಿಗೂ ಗುರಿ ಯಾಗುವೆವು.

## ೨. ರಾಷ್ಟ್ರವು ಆರ್ಥಿಕಜೀವನದ ವಿಕಾಸವನ್ನು ಸ್ವಾಧೀನದಲ್ಲಿಟ್ಟುಕೊಂಡು ತನ್ನ ಯೋಜನೆಗಳಿಂದಲೇ ಸಾಗಿಸತಕ್ಕದು

ಸಾಮ್ಯವಾದವು ಮಾನವ ಕುಲಕ್ಕೆ ಮಾಡುವ ಮಹದುಪಕಾರವೆಂದರೆ ಅದು ಮಾನವನಿಗೆ ಗೋಚರವಾಗುವ ಬಗೆಯಲ್ಲಿ ಅವನ ಮೇಲ್ವಿಚಾರದಿಂದಲೆ ಸಾಮಾಜಿಕ ಪ್ರಗತಿಯನ್ನು ಸಾಧಿಸುವುದು. ಈವರೆಗೆ ಸಮಾಜದ ಮುನ್ನಡೆ ಸ್ವಾರ್ಥ ಮತ್ತು ವ್ಯಷ್ಟಿವಾದ ಇವುಗಳ ಅಪ್ಪುಗೆಗೆ ಸಿಲುಕಿ ಕುರುಡುಕುರುಡಾಗಿಯೇ ಸಾಗಿದೆ. ಧ್ಯೇಯಗಳ ಮತ್ತು ಹಿತಸಂಬಂಧಗಳ ವಿರೋಧದ ಘರ್ಷಣೆಯೇ ಅದರ ಉದ್ಧಾರದ ಮುಖ್ಯವಾದ ಗಡಗಡೆ. ನಾವು ಯಾವುದೊಂದು ಯೋಜನೆಗಾಗಲಿ ಸಾಮಾಜಿಕ ಉದ್ದೇಶಕ್ಕಾಗಲಿ ಈವರೆಗೆ ತಿಳಿದು ಎಲ್ಲರೂ ಕೂಡಿ ಪ್ರಯತ್ನಪಟ್ಟುದಿಲ್ಲ. "ತನಗಾಗಿ ತಾನು" ಎಂಬುದೇ ನಮ್ಮ ಸಾಮಾಜಿಕ ನಡವಳಿಕೆಯ ಬಗೆಯಾಗಿದೆ.

ಸಮಾನ ಉದ್ದೇಶ ಮತ್ತು ಸಾಂಘಿಕ ಪ್ರಯತ್ನದಲ್ಲಿಯೇ ಮಾನವ ಪ್ರಪಂಚದ ಉನ್ನತವಾದ ಭಾವೀ ಕಲ್ಯಾಣವಿದೆಯೆಂದು ಸಾಮ್ಯವಾದವು ಸಾರುತ್ತದೆ. ಭಾವೀ ಸಮಾಜದ ಸಾಮೂಹಿಕ ಆರ್ಥಿಕ ಯೋಜನೆ ಈಗಿನ ಅವ್ಯವಸ್ಥಿತವಾದ ಸಮಾಜದ ವ್ಯವಸ್ಥೆಗಿಂತ ನಿರ್ವಿವಾದವಾಗಿ ಶ್ರೇಷ್ಠವಾಗುವುದು. ಮಾನವನ ಸ್ವತಂತ್ರ ಕಾರ್ಯಶಕ್ತಿ ಮತ್ತು ನಿರ್ಮಾಣಶಕ್ತಿಗಳ ಗುಪ್ತ ಸೆಲೆಗಳನ್ನು ಅದು ತೆರೆಯುವುದು. ಮಾನವಲೋಕಕ್ಕೆ ತನ್ನ ಅಭಿವೃದ್ಧಿಯನ್ನು ರೂಪುಗೊಳಿಸಲು ನೆರವಾಗುವುದು. ಸಾಮ್ಯವಾದವು ಬಾಳಿಗೆ ಹೊಸ ಬೆಳಕನ್ನೇ ನೀಡಿದೆ. ಅದು ಭೌತಿಕ ಪ್ರಗತಿಯ ದೃಷ್ಟಿಯಿಂದಲೂ ಹೊಸದು; ಬುದ್ಧಿ ನೀತಿಗಳ ಉನ್ನತಿಯ ದೃಷ್ಟಿಯಿಂದಲೂ ಹೊಸದು. ಇಂತು 'ತನಗಾಗಿ' ಎಂಬುದರ ಸ್ಥಾನದಲ್ಲಿ 'ಎಲ್ಲರಿಗಾಗಿ'—ಸಮಾಜಕ್ಕಾಗಿ—ಎಂಬುದು ನೆಲೆಯಾಗಿದೆ.

ಇದರಿಂದ ಜನಜಂಗುಳಿಗಾಗುವ ಹಿತವೇನು. ಎಂಬ ಪ್ರಶ್ನೆಗೆ ರಶಿಯಾ ದೇಶದ ದೃಷ್ಟಾಂತವೇ ಉತ್ತರವಾಗಿ ಸಿಗುವುದು. ಅಲ್ಲಿ ಒಂದು ಶಕ್ತಿ, ಒಂದು ನಿಷ್ಠೆ ಇವುಗಳು ಜಾಗೃತವಾಗಿವೆ. ಅವಕ್ಕೆ ಸೋಲೆಂಬುದಿಲ್ಲ. ಭೂಮಿ ವಾಯು

ನದಿ ನಭಗಳಾವುವೂ ಅವುಗಳಿಗೆದುರಿಲ್ಲ. ಮೊನ್ನೆಮೊನ್ನೆಯ ವರೆಗೆ ಪೌರ್ವಾತ್ಯ ಆಲಸ್ಯದಲ್ಲಿ ಹಾಗೂ ಆಸೆಯಿಲ್ಲದ ಅಂಧಂತಮಸ್ಸಿನಲ್ಲಿ ತಂಗಿದ ರಶಿಯಾ ದೇಶದಲ್ಲಿ ಇಷ್ಟೆಲ್ಲ ನಡೆದಿದೆಯೆಂದರೆ ನಂಬಲಿಕ್ಕಾಗದಲ್ಲವೇ ?

ಸಮಾಜವಿಕಾಸದ ಯೋಜನೆಗಳಲ್ಲಿ ಅರ್ಥವಿಚಾರವೇ ಮುಖ್ಯವಾದುದು. ಒಂದು ದೇಶದ ಆರ್ಥಿಕ ಸಂಘಟನೆಯೇ ಅಲ್ಲಿಯ ಸಮಗ್ರ ಜೀವನದ ಜೀವಾಳ. ಆದುದರಿಂದ ಆರ್ಥಿಕ ಸಂಘಟನೆಯನ್ನು ಅಂಕಿತದಲ್ಲಿಟ್ಟು ಜನತೆಯ ಹಿತಕ್ಕಾಗಿ ಅದನ್ನು ಮನಸವರಿತು ಉಪಯೋಗಿಸುವುದೇ ತೀರ ಅಗತ್ಯವಾದುದು.

ಆರ್ಥಿಕ ಯೋಜನೆಯೆಂದರೇನು ? ಪೂರ್ಣ ವಿವರಗಳ ಉತ್ತರಕ್ಕಾಗಿ ನಾವು ಮುಂದೆ ರಶಿಯಾ ದೇಶದ ಸಾಮ್ಯವಾದೀಯ ಆರ್ಥಿಕ ಯೋಜನೆಯನ್ನು ಲಕ್ಷ್ಯಪೂರ್ವಕವಾಗಿ ಅಭ್ಯಸಿಸಬೇಕು. ಇಂದು ಅದರ ಬಗೆಗೆ ಜನರ ಮನಸ್ಸಿನಲ್ಲಿ ಹಲವು ತರದ ಪೂರ್ವಗ್ರಹಗಳು ಬಿತ್ತಲ್ಪಟ್ಟಿವೆ. ಅದು ನಿರಂಕುಶವಾದುದು, ದುಷ್ಟವಾದುದು, ಅದು ಸ್ವತಂತ್ರ ಕ್ರಿಯಾಶಕ್ತಿಯನ್ನು ಸಂಹರಿಸಿದೆ ಎಂದು ಮುಂತಾಗಿ ಕೂಗುವುದಲ್ಲದೆ, ಅದಕ್ಕೆ ಸಂಪೂರ್ಣ ಸೋಲು ಬಂದಿದೆಯೆಂದೂ ಸಾರಲಾಗಿದೆ.

ಈ ಪೂರ್ವಗ್ರಹಗಳನ್ನು ಖಂಡಿಸಲು ಯತ್ನಿಸಿದರೆ ನಾನು ನನ್ನ ವಿಷಯವನ್ನು ಬಿಟ್ಟು ಬಲು ದೂರ ಹೋಗಬೇಕಾಗುವುದು. ಬಂಡವಾಳಗಾರಿಕೆಯಿಂದ ಪ್ರಾಪ್ತವಾದ ಮುಗ್ಗಟ್ಟಿನಿಂದ ಪಾರಾಗಲು ಮಾಡಿದ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಪ್ರಯತ್ನಗಳೆಲ್ಲ ಪೂರ್ಣ ಪರಾಜಯ ಹೊಂದಿರಲು, ರಶಿಯಾ ಒಂದೇ ಕತ್ತೆತ್ತಿ ನಿಂತಿದೆ. ನಿಧಾನವಾಗಿ ಹುಟ್ಟುವಳಿಯನ್ನು ಹೆಚ್ಚಿಸಿದೆ, ಉಪಜೀವನದ ತರಗತಿಯನ್ನು ಉನ್ನತವಾಗಿ ಮಾಡಿದೆ. ನಾಲ್ಕು ದಿಕ್ಕಿನಲ್ಲಿ ನಿರುದ್ಯೋಗ ಸಮಸ್ಯೆಯ ಕೂಗು ಕೇಳುತ್ತಿರಲು ರಶಿಯಾದಲ್ಲಿ ಮಾತ್ರ ಕೆಲಸದ ಕೈಗಳು ಸಾಲವು ಎಂಬುವಾಗಿ ತಿಳಿಯಬಂದಿದೆ.

ಹುಟ್ಟುವಳಿ, ಹಂಚುವಿಕೆ ಮತ್ತು ಉಳಿಕೆ ( Savings ) ಗಳನ್ನು ಒಂದು ಹಿಡಿತದಲ್ಲಿರಿಸುವುದೇ ಆರ್ಥಿಕ ಯೋಜನೆಯ ಮುಖ್ಯ ವಿಚಾರ. ರಾಷ್ಟ್ರವು ಬೇರೆ ಬೇರೆ ಯೋಜನೆಗಳಲ್ಲಿ ತೊಡಗಿಸಿದ ಹಣವೇ ಉಳಿಕೆಯೆಂದು ಗ್ರಹಿಸಬೇಕು. ಮತ್ತೆ ಈ ಮೂರನ್ನೂ ದೇಶದ ಆವಶ್ಯಕತೆ, ಸ್ಥಿತಿ, ನಿಸರ್ಗ

ಸಂಪತ್ತುಗಳಿಗನುಸರಿಸಿ ಲಕ್ಷ್ಯಪೂರ್ವಕವಾಗಿ ಕಾಲಕ್ರಮೇಣ ಬೆಳೆಸಬೇಕು. ತೀರ ಮುಖ್ಯವಾದ ವಿಷಯವೆಂದರೆ ದೇಶದಲ್ಲಿ ಸಾಮಾಜಿಕ ಸಂಬಂಧವನ್ನುಳಿದ, ವ್ಯಕ್ತಿಗತವಾದ ವಿಶೇಷ ಆರ್ಥಿಕ ಹಿತಸಂಬಂಧಗಳಿರಕೂಡದು. ಇದ್ದರೆ ಇವೆರಡರಲ್ಲಿಯೂ ತಿಕ್ಕಾಟವಾಗಬಹುದು. ರಶಿಯಾದ ಆರ್ಥಿಕ ಯೋಜನೆಯು "ಪಂಚವಾರ್ಷಿಕ ಪ್ರಯೋಗ"ವನ್ನು ಕುರಿತು ಗ್ರಿಂಕೊ ಎಂಬಾತನು ಒಂದು ಪ್ರಮಾಣ ಗ್ರಂಥವನ್ನು (Authoritative) ಬರೆದಿದ್ದಾನೆ. ಅಂಕೆಅಂಶಗಳ ಕೆಲವು ನಿಪುಣರು ಒಂದು ಕೇಂದ್ರದಲ್ಲಿ ಕುಳಿತು ಸಮಗ್ರ ಆರ್ಥಿಕ ಸಂಘಟನೆಯನ್ನು ಸರ್ವಾಧಿಕಾರದಿಂದ ತಮ್ಮ ಇಷ್ಟದ ಮೇರೆಗೆ ನಡೆಯುವಂತೆ ಮಾಡಿ ಆರ್ಥಿಕ ಯೋಜನೆಯನ್ನು ಮಾಡುವರೆಂದು ತಿಳಿಯುವುದು ತೀರ ತಪ್ಪು. ನಿಜವಾದ ಯೋಜನೆಯ ಕ್ರಮದಲ್ಲಿ ಉತ್ಪತ್ತಿಯ ಪ್ರತಿಯೊಂದು ಘಟಕ—ಅಂದರೆ ಕಾರಖಾನೆ ಮತ್ತು ಸಾಮೂಹಿಕ ಭೂಕ್ಷೇತ್ರ.— ಹಾಗೂ ಹಂಚುವ ಪ್ರತಿಯೊಂದು ಘಟಕ—ಅಂದರೆ ಸಹಕಾರದ ಮತ್ತು ರಾಷ್ಟ್ರದ ಉಗ್ರಾಣ—ಇವುಗಳು ಭಾಗವಹಿಸಬೇಕು. ಇದಲ್ಲದೆ ಎಲ್ಲ ಸಂಗತಿಗಳನ್ನು ಅಣಿಮಾಡಿ ಹೊಂದಿಸಿಕೊಂಡು ಮಾರ್ಗದರ್ಶಕರಾಗಿ ಮೇಲ್ವಿಚಾರ ಮಾಡುವವರೂ ಇರುವರು. ಆರ್ಥಿಕ ಆಡಳಿತದ ಕೇಂದ್ರೀಕರಣವನ್ನು ತಪ್ಪಿಸಬೇಕೆಂದು ರಶಿಯಾಕ್ಕೆ ಬಹಳ ಆತುರವಿದೆ. ಅವರು ಈಗಾಗಲೆ ತಮ್ಮ ದೇಶದಲ್ಲಿ ಉತ್ಪತ್ತಿಯ ಸ್ವಾಯತ್ತವಾದ ಪ್ರಾದೇಶಿಕ ಘಟಕಗಳನ್ನು ಮಾಡಿ ಅವುಗಳಿಗೆ ಆಡಳಿತದ ಸ್ವಾತಂತ್ರ್ಯವನ್ನೂ ತಮಗೆ ಸಮ್ಮತವಾದ ಸರಕುಗಳನ್ನು ಸೊಗಸೆನಿಸಿದ ಬಗೆಯಲ್ಲಿ ಸಿದ್ಧಪಡಿಸುವ ಪೂರ್ಣ ಅನುಕೂಲತೆಯನ್ನೂ ಕೊಟ್ಟಿದ್ದಾರೆ.

ಪ್ರತಿಯೊಬ್ಬನೂ ಮೇಲಿನವರ ಅಪ್ಪಣೆಯ ಮೇರೆಗೆ ಬಟ್ಟೆಗಳನ್ನು ತೊಡಬೇಕಾಗುತ್ತದೆಂದೂ ಅವರು ಕೊಡುವ ಆಹಾರವನ್ನು ಉಣ್ಣಬೇಕಾಗುತ್ತದೆಂದೂ ಅವರ ಹೇಳಿಕೆಯಂತೆ ಜೀವನಕ್ರಮವನ್ನು ಇಡಬೇಕಾಗುತ್ತದೆಂದೂ ಈ ತರದ ಆರ್ಥಿಕ ಯೋಜನೆಗಳ ಬಗ್ಗೆ ಒಂದು ಸಾಮಾನ್ಯವಾದ ಪೂರ್ವಗ್ರಹವುಂಟು. ನಿಜವಾಗಿ ನೋಡಿದರೆ ಇದು ಬಂಡವಾಳಗಾರಿಕೆಯ ಆಳಿಕೆಯಲ್ಲಿ ನಡೆಯುವ ವಿಷಯವೇ ಹೊರತು ಸಾಮ್ಯವಾದೀಯ ಆರ್ಥಿಕ ಯೋಜನೆಯಲ್ಲಲ್ಲ. ಬಂಡವಾಳಗಾರಿಕೆಯ ಅಂಕಿತದಲ್ಲಿಲ್ಲದ ಅಸ್ತವ್ಯಸ್ತವಾದ ಆರ್ಥಿಕ ಸಂವಿಧಾನದ ನಿಯಮಗಳೇ ಇಂತಹ ಪರಿಸ್ಥಿತಿಗೆ ಕಾರಣ. ಸಾಮ್ಯವಾದಿಗಳು ಈ ಅಸ್ತವ್ಯಸ್ತ

ಪರಿಸ್ಥಿತಿಯನ್ನು ಮಾರ್ಪಡಿಸಿ ಅದಕ್ಕೊಂದು ಗೊತ್ತುಗುರಿಯನ್ನುಂಟುಮಾಡುವರು. ಅದಲ್ಲದೆ ಕಾರಖಾನೆ, ಹೊಲ, ಸಹಕಾರ ಸಂಘಗಳನ್ನು ನಡೆಸುವ ಒಬ್ಬೊಬ್ಬ ವ್ಯಕ್ತಿಯನ್ನೂ ತಮ್ಮೊಳಗೆ ತೆಗೆದುಕೊಂಡು ದೇಶಕ್ಕೆ ಬೇಕಾದುದೇನು, ಅವನ ಅಗತ್ಯಗಳೇನು ಎಂಬ ಬಗೆಗೆ ಅವನ ಸ್ವಂತ ಅಭಿಪ್ರಾಯಗಳನ್ನು ಕೇಳುವರು.

ಆರ್ಥಿಕ ಯೋಜನೆಯ ಮೂಲತತ್ತ್ವವಿಷ್ಟೇ. ಸಮಾಜಕ್ಕೆ ಅಥವಾ ಸಮುದಾಯಕ್ಕೆ ವಿರುದ್ಧವಾದ, ಮತ್ತು ಅದರಿಂದ ಬೇರೆಯಾದ ವ್ಯಕ್ತಿಗತ ಹಿತಸಂಬಂಧಗಳಿರಕೂಡದು. ಅಮೇರಿಕೆಯ ಸಂಯುಕ್ತ ರಾಷ್ಟ್ರಗಳು, ಜರ್ಮನಿ, ಇಟಲಿಗಳು ಪೂರ್ಣವಾಗಿ ವ್ಯಕ್ತಿಗತ ಹಿತಸಂಬಂಧಗಳಿಂದ ಕೂಡಿದ್ದರೂ ಅಲ್ಲಿ ಆರ್ಥಿಕ ಜೀವನದ ಅಭಿವೃದ್ಧಿಗೆ ಉಪಾಯಗಳನ್ನು ಕೈಕೊಳ್ಳುವುದಿಲ್ಲವೇ ಎಂದು ಯಾರಾದರೂ ಕೇಳಬಹುದು.

ನಿಜ. ಬಂಡವಾಳಗಾರಿಕೆಯ ಪ್ರಾಬಲ್ಯವುಳ್ಳ ದೇಶಗಳು ಸಹ ಆರ್ಥಿಕ ಯೋಜನೆಗಳನ್ನು ಕೈಕೊಳ್ಳತೊಡಗಿವೆ. ಈಗ ಐದಾರು ವರ್ಷಗಳಿಂದಲೂ ಆರ್ಥಿಕ ಮುಗ್ಗಟ್ಟು ಕಾಡುತ್ತಿದೆ. ಅದರಿಂದ ಪಾರಾಗಲು ಹಲವು ಪ್ರಯತ್ನಗಳಾದುವು. ಅನಿರುದ್ಧವಾದ ಅವ್ಯವಸ್ಥಿತವಾದ ಪುರಾತನ ಬಂಡವಾಳಗಾರಿಕೆಯ ಪದ್ಧತಿಯೇ ದೋಷಯುಕ್ತವಾದುದು ಎಂದು ಬಂಡವಾಳಗಾರರಿಗೂ ಈಗ ಮನದಟ್ಟಾಗಿದೆ. ಈ ಪದ್ಧತಿಯಲ್ಲಿರುವ ಕುಂದುಗಳಿಂದ ಉತ್ಪತ್ತಿ ವ್ಯಾಪಾರ ಮುಂತಾದವುಗಳ ಸಮಗ್ರ ವ್ಯವಸ್ಥೆಯೇ ತಲೆಕೆಳಗಾಗಿದೆ. ಆದುದರಿಂದ ಕೆಲವು ಸೊನ್ನೆಗಳಿಂದ ತಡೆದು ಹಲವು ಹಿಡಿತಗಳಿಂದ ಆರ್ಥಿಕ ರಥವನ್ನು ಕಾರ್ಯಕ್ಷಮವಾಗುವಂತೆ ಮಾಡಲೆಳಸಿದರು. ಇದಕ್ಕಾಗಿ ರೂಸ್‌ವೆಲ್ಟನ ಕಟ್ಟಳೆಗಳು ಕಷ್ಟಪಟ್ಟವು. ಫ್ಯಾಸಿಜಮ್ಮಿನ ಸಂಘಗಳು ದುಡಿದವು.

ಆದರೂ ನಾಯಿಯ ಬಾಲದ ಡೊಂಕು ಸರಿಯಾಗಲಿಲ್ಲ. ಬಂಡವಾಳಗಾರಿಕೆಯ ಯೋಜನೆಗಳೆಲ್ಲ ಮಣ್ಣುಮುಕ್ಕಿದವು. ಇವುಗಳ ಫಲಪರೀಕ್ಷೆಗೆ, ಇಟಲಿಯ ಫ್ಯಾಸಿಜಮ್ಮಿನಂತೆ ಸಾಕಷ್ಟು ದೀರ್ಘ ಕಾಲವೂ ಕೊಡಲ್ಪಟ್ಟಿತು. ಆದರೂ ಅದೆಲ್ಲ ಒಂದೇ. ಇದರಿಂದ ನಮ್ಮ ನಿರ್ಣಯವು ಮತ್ತಷ್ಟು ಗಟ್ಟಿಯಾಗುತ್ತದೆ. ವ್ಯಕ್ತಿಗತ ಹಿತಸಂಬಂಧಗಳ ಹುಟ್ಟಡಗದ ಹೊರತು ಗತ್ಯಂತರವಿಲ್ಲ. ರೂಸ್‌ವೆಲ್ಟನು N. R A. ಮತ್ತು A. A. A. ಯೋಜನೆಗಳನ್ನು ಆರಂಭಿಸಿದಾಗ ಎಲ್ಲೆಲ್ಲಿಯೂ ಉತ್ಸಾಹದ ಉಬ್ಬು ಇತ್ತು. ಈ ಹುರುಪೆಲ್ಲ

ಹಾಗಾಗಿ ಈಗ ನಿರಾಶೆಯ ಕಗ್ಗತ್ತಲೆಯು ಕಾರ್ಮೋಡಗಳು ಹಬ್ಬಿವೆ. ಅಮೇರಿಕೆಯ ವಿಶ್ವವಿದ್ಯಾಲಯಗಳ ಹೆಮ್ಮೆಯ ಮಕ್ಕಳೆಲ್ಲ ರೂಸ್‌ವೆಲ್ಟನು ತಮ್ಮ ಕೈವಾರಿಯೆಂದು ಮೊದಲು ಕೂಗಿದರು. ಈಗ ಅವರೇ ವಿರುದ್ಧ ಕಾರ್ಯವನ್ನು ಕೈಕೊಂಡ ಕಡುಹಗೆಗಳಾಗಿರದಿದ್ದರೂ ಕಟುತಮ ನಿಂದಕರಾಗಿದ್ದಾರೆ. N. R. A. ದ ಬಗೆಗಿರುವ ಆಸೆಯ ಕಿಡಿಗಳೆಲ್ಲ ನೊಂದಿ ತಣ್ಣಗಾಗಿವೆ.

ಬಂಡವಾಳಗಾರಿಕೆಯ ಹಂಚಿಕೆಗಳೆಲ್ಲ ಬಿದ್ದುಹೋಗುವುದಕ್ಕೂ ಸಾಮ್ಯವಾದಿಗಳ ಯೋಜನೆಗಳು ಯಶಸ್ವಿಯಾಗುವುದಕ್ಕೂ ಅವೆರಡರಲ್ಲಿರುವ ಮಹಾವ್ಯತ್ಯಾಸಗಳೇ ಕಾರಣ. ಇಡಿಯ ಸಮಾಜದ ಹಿತದ ದೃಷ್ಟಿಯಿಂದ ಅರ್ಥವ್ಯವಸ್ಥೆಯನ್ನು ಮತ್ತೊಮ್ಮೆ ಸರಿಗೊಳಿಸುವುದು ಬಂಡವಾಳಗಾರಿಕೆಯ ಯೋಜನೆಗಳ ಉದ್ದೇಶವಲ್ಲ. ಲಾಭದ ಮೊತ್ತವೆಲ್ಲ ಬಂಡವಾಳಗಾರರ ಬೊಕ್ಕಣಕ್ಕೆ ನೇರವಾಗಿ ತೊಂದರೆಯಿಲ್ಲದೆ ಹೋಗಬೇಕೆಂಬುದೆ ಅವುಗಳ ಹಂಬಲು. ಆದರೆ ಲಾಭವು ಬಂಡವಾಳಗಾರಿಕೆಯ ಜೀವವಿದ್ದಂತೆ ಅದರ ಮಹಾರೋಗವೂ ಆಗಿದೆ. ಲಾಭಲಾಲಸೆಯಿರುವ ವರೆಗೆ ಅದಕ್ಕೆ ಮೋಕ್ಷವಿಲ್ಲ. ರೋಗದ ಲಕ್ಷಣಗಳು ಕ್ಷಣಕ್ಷಣಕ್ಕೂ ತೋರಿಬರುವವು. ಲಾಭವೃತ್ತಿಯು ಹೊರಟು ಹೋದಂದೇ- ಹಣಗಾರಿಕೆ ನೆಲಕ್ಕುರುಳುವುದು. ಅಂತೂ ಇದೊಂದು ವಿಷವರ್ತುಲ. ಸಾಮ್ಯವಾದವೇ ಇದರಿಂದ ಬಿಡುಗಡೆ ಮಾಡಬಲ್ಲುದು.

## ೩. ಜೀವಾಳದ ಮತ್ತು ಪ್ರಮುಖ ಉದ್ಯಮಗಳ ಸಮಾಜೀಕರಣ

ಇದುವೆ ಸಮಗ್ರ ಯೋಜನೆಯ ಅಡಿಗಲ್ಲು. ಆರ್ಥಿಕ ಭಾಗದ ಮೇಲಿನ ಉಚ್ಚ ವರ್ಗದವರ ಒಡೆತನವಳಿಯಬೇಕು. ಆಗ ತಾನೇ ಜನತೆಯ ರಾಷ್ಟ್ರನಿರ್ಮಾಣಕ್ಕೆ ಅನುಕೂಲವಾಗುವುದು. ಹುಟ್ಟುವಳಿಯನ್ನು ಕೊಡುವ ಸೊತ್ತುಗಳ ವ್ಯಕ್ತಿಗತ ಒಡೆತನವೇ ಆರ್ಥಿಕ ಸುಲಿಗೆಯ ಮೂಲ. ಅದರ ಅಳಿಗಾಲದಿಂದಲೇ ಜನತೆಯ ಆರ್ಥಿಕ ಸ್ವಾತಂತ್ರ್ಯದ ಮೊದಲು. ಸಾಮ್ಯವಾದಿಗಳ ಆರ್ಥಿಕೋಪಾಯಗಳು ಮುಂಚೆ ವ್ಯಕ್ತಿಗಳ ಬೇರೂರಿದ ಹಿತಸಂಬಂಧಗಳನ್ನು ( Vested interests ) ಕೀಳಬೇಕು. ಉತ್ಪತ್ತಿಸಾಧನ, ವಿತರಣ, ವಿನಿಮಯಗಳನ್ನು ರಾಷ್ಟ್ರದ ಒಡೆತನದಲ್ಲಿ ಮತ್ತು ಆಡಳಿತದಲ್ಲಿರಿಸುವುದೇ—ಸಾಮಾಜೀಕರಣವೇ—ಆತ್ಯಂತಿಕ ಆದರ್ಶ, ಇದರ ಅರ್ಥವಿಷ್ಟೇ. ಕೊನೆಗೆ

ಕಾರಖಾನೆಗಳು, ಕರ್ಮಶಾಲೆಗಳು, ಹಸಿ ಸರಕುಗಳು, ವ್ಯಾಪಾರ, ಕುಸೀದ-ವೃತ್ತಿ, ಮಧ್ಯಸ ವ್ಯವಹಾರ ಇವೆಲ್ಲವುಗಳೂ ಸಾಮೂಹಿಕ ಅಧಿಕಾರಕ್ಕೆ ಒಳಪಡುತ್ತವೆ. ಈ ವಿಷಯಗಳಲ್ಲಿ ವ್ಯಕ್ತಿಗಳಿಗೆ ಪ್ರತ್ಯೇಕವಾದ ಒಡೆತನವೇ ಉಳಿಯುವುದಿಲ್ಲ.

ಎಂದರೆ ಮುಂದೆ ವ್ಯಕ್ತಿಗಳಿಗೆ ಸ್ವಂತ ಸೊತ್ತೇ ಇರುವುದಿಲ್ಲವೆಂದಲ್ಲ. ಕೇವಲ ತನ್ನ ಬಳಕೆಗೆ ಬೇಕಾಗುವ ಸೊತ್ತಿನ ಅಧಿಕಾರವಿದ್ದೇ ಇದೆ. ಆದರೆ ಹೊಸ ಹುಟ್ಟನ್ನುಂಟುಮಾಡಬಲ್ಲ ಸೊತ್ತುಗಳು ಮಾತ್ರ ಕೈಬಿಡುವುವು.

ರಶಿಯಾ ದೇಶದ ಸಂಘವಾದಿಗಳು ಇನ್ನೂ ತಮ್ಮ ಕೊನೆಯ ಧ್ಯೇಯವನ್ನು ದೊರಕಿಸಿಕೊಂಡಿಲ್ಲ. ಇವರ ಉದ್ದೇಶವನ್ನು ಕುರಿತು ಡಾಕ್ಟರ್ ಶರ್‌ವುಡ್ ಎಡಿಯು "ಎಲ್ಲ ಅಸಂಪಾದಿತ ಧನವನ್ನೂ ಉತ್ಪಾದಕ ಸೊತ್ತುಗಳನ್ನೂ ಸ್ವಾಧೀನಪಡಿಸಬೇಕೆಂದು ಸಂಘವಾದಿಗಳ ಬಯಕೆ. ಒಬ್ಬನಿಗೆ ಸ್ವಂತ ಸೊತ್ತೆಂದು ಮನೆಯಿರಬಹುದು. ಬಟ್ಟೆಬರೆಗಳಿರಬಹುದು. ಕಲಾವಸ್ತುಗಳನ್ನು ಇಟ್ಟುಕೊಳ್ಳಬಹುದು. ಬೈಸಿಕಲ್ ಮೋಟರ್ ಮುಂತಾದ ವಾಹನಗಳಿರಬಹುದು. ರೇಡಿಯೊ ಇರಬಹುದು. ಬ್ಯಾಂಕಿನ ಲೆಕ್ಕವನ್ನೂ ಗವರ್ನಮೆಂಟ್ ಬಾಂಡುಗಳನ್ನೂ ಇಟ್ಟುಕೊಳ್ಳಬಹುದು. ಆತನು ಹಣವನ್ನು ಸಂಗ್ರಹಿಸಬಹುದು. ಆದರೆ ಈಗ ಅಲ್ಲಿ ಇದಕ್ಕೆ ಸ್ಫೂರ್ತಿಯಾಗಲಿ ಸಂದರ್ಭವಾಗಲಿ ತೀರ ವಿರಳ. ಮುಂಚೆ ತನ್ನ ಕುಟುಂಬದ ಮತ್ತು ತನ್ನ ಸೌಕರ್ಯ ಸುರಕ್ಷಿತತೆಗಳಿಗಾಗಿ ಹಣವನ್ನು ಹೂಡುತ್ತಿದ್ದನು, ಸಂಗ್ರಹಿಸುತ್ತಿದ್ದನು. ಈಗ ಅವುಗಳೆಲ್ಲ ದುಡಿಯುವವನಿಗೆ ಸಮಾಜದಿಂದಲೇ ಸಿಕ್ಕುತ್ತಿರುವುವು" ಎಂಬದಾಗಿ ಹೇಳಿರುವನು.

ಸಮಗ್ರ ಜೀವನವೇ ಸಾಮುದಾಯಿಕ ಆಡಳಿತದಿಂದ ಸಾಗಬೇಕೆಂಬುದು ಇವರ ಅಂತಿಮ ಆದರ್ಶ. ಆದರೆ ಮೊದಮೊದಲು ಕೆಲವು ಅಗತ್ಯವಾದ ಯೋಜನೆಗಳನ್ನು ಕೈಕೊಳ್ಳಬೇಕೆಂದು ಸಾಮ್ಯವಾದಿ ಪಕ್ಷದ ನಿರ್ಧಾರ. ಜೀವಾಳದ ಮತ್ತು ಪ್ರಮುಖವಾದ ಉದ್ಯಮಗಳು ( ಹತ್ತಿ, ನಾರುಗಳು ಜೀವಾಳವಲ್ಲವಾದರೂ ಪ್ರಮುಖವಾದವುಗಳು ), ಕುಸೀದಗಳು, ಖನಿಗಳು, ಸಾರ್ವಜನಿಕ ಪ್ರಯೋಜನದ ಸಂಸ್ಥೆಗಳು, ವಿಮಾಸಂಘಗಳು, ಚಹಾ ಕಾಫಿಯ

ತೋಟಗಳು, ವಾಹನವ್ಯವಸ್ಥೆ ಮುಂತಾದವುಗಳಲ್ಲದೆ ಸಾಮಾಜಿಕ ಜೀವನದ ಮೇಲೆ ಪ್ರಭಾವ ನಡೆಸುವ ಎಲ್ಲ ಕಾರ್ಯಕಲಾಪಗಳು ಸಹ ಸಮಾಜಸತ್ತೆಗೊಳಗಾಗಬೇಕೆಂಬುದು ಅವರ ಗುರಿ.

ಹತ್ತಿಯ ಉದ್ಯೋಗದಂತಹ ಒಂದೇ ಉದ್ಯೋಗವನ್ನು ಉದಾಹರಣೆಗೆ ತೆಗೆದುಕೊಳ್ಳೋಣ. ಮುಂಬಯಿಯ ಸುಮಾರು ೮೦ ಗಿರಣಿಗಳ ಒಡೆತನವು ಭಾರತೀಯ ಪ್ರಜೆಗಳಿಗೆ ಸಂಬಂಧಪಟ್ಟುದೆಂದು ಸರಕಾರದ ಅಪ್ಪಣೆಯಾಗಬೇಕು. ಸರಕಾರದ ಆದೇಶದಲ್ಲಿ ಹತ್ತಿಯ ಉದ್ಯೋಗದ ವ್ಯವಸ್ಥೆಯ ಶಾಖೆಯೊಂದನ್ನು ತೆಗೆಯಬೇಕು. ಈ ಶಾಖೆಯವರು ಗಿರಣಿಗಳ ಕೆಲಸಗಾರರ ಪ್ರತಿನಿಧಿಗಳೊಂದಿಗೆ ರಾಷ್ಟ್ರದ ಆರ್ಥಿಕ ಯೋಜನೆಗನುಗುಣವಾಗಿ ಇದ್ದ ಅನುಕೂಲತೆಯಿಂದ ದೇಶದ ಅಗತ್ಯಗಳಿಗಾಗಿ ಶಾಖೆಯವರು, ತಾವು ಎಷ್ಟು ಹುಟ್ಟಿಸಬೇಕು ಎಂಬುದನ್ನು ನಿರ್ಣಯಿಸುವರು.

ಬಟ್ಟೆಯು ಸಾಕಾಗದಿದ್ದರೆ, ಪ್ರಜೆಗಳಲ್ಲಿ ಒಬ್ಬೊಬ್ಬನಿಗೆ ಇಂತಿಷ್ಟೇ ಗಜ ಬಟ್ಟೆಯನ್ನು ಹಂಚಬೇಕೆಂದು ಗೊತ್ತು ಮಾಡಲಾಗುವುದು. ಅಥವಾ ಸಾಕಷ್ಟು ಬಟ್ಟೆಯಿದ್ದರೆ ಕ್ರಯಕ್ಕೆ ಪೇಟೆಯಲ್ಲಿ ಮಾರಾಟಕ್ಕಿಡಲಾಗುವುದು.

ಬಟ್ಟೆಯನ್ನು ಮಿತವಾಗಿ ಕೊಡುವ ನಿಯಮವು, ಬೇಕಾದಷ್ಟು ಕೊಳ್ಳುವ ಅನುಕೂಲವಿದ್ದವರಿಗೆ ಸರಿಬರಲಿಕ್ಕಿಲ್ಲ. ಆದರೆ ಮರ್ಯಾದೆಯನ್ನು ಮುಚ್ಚಿಕೊಳ್ಳಲು ಸೊಂಟಕ್ಕೆ ಸುತ್ತುವಷ್ಟು ಬಟ್ಟೆಗೂ ಗತಿಯಿಲ್ಲದ ಬಡವರು ಇದರಿಂದ ಆನಂದಭರಿತರಾಗುವರು. ಒಂದು ಕುಟುಂಬದ ಆರೇಳು ಹೆಂಗಸರಿಗೆ ಒಂದೇ ಸೀರೆ. ಒಬ್ಬಳು ಅದನ್ನುಟ್ಟು ಹೊರಕ್ಕೆ ಹೋದರೆ ಮಿಕ್ಕವರು ಬಾಗಿಲ ಮರೆಯಲ್ಲಿ ಅರೆಬತ್ತಲೆಯರಾಗಿ ಉಳಿಯಬೇಕು. ಹೀಗೆ ಒಂದೇ ಒಂದು ಸೀರೆಯುಳ್ಳ ಸಾವಿರಾರು ಕುಟುಂಬಗಳು ನಮ್ಮ ನಾಡಿನಲ್ಲಿವೆ. ಅವರಿಗೆಲ್ಲ ಎಷ್ಟು ಕಡಿಮೆ ಬಟ್ಟೆ ಸಿಕ್ಕರೂ ಸಂತೋಷದ ಸುಗ್ಗಿಯೇ ಅಲ್ಲವೇ ?

ಇನ್ನು ಸಮಗ್ರ ರಾಷ್ಟ್ರದ ಒಡೆತನಕ್ಕೊಳಪಟ್ಟ ಗಿರಣಿಗಳ ಕೆಲಸಗಾರರ ಗತಿಯೇನು ? ಕೂಲಿಯ ಗುಲಾಮರಾಗಿದ್ದ ಅವರು ಇನ್ನು ಮೇಲೆ ನಾಡಿನ ಇತರ ಜನರಂತೆ ತಾವು ಬೆವರು ಸುರಿಸಿ ಶ್ರಮದಿಂದ ದುಡಿಯುತ್ತಿದ್ದ ಆ ಗಿರಣಿಗಳ ಒಡೆಯರಾಗುವರು. ಅವರ ಸಂಘಗಳ ಮತ್ತು ಪ್ರತಿನಿಧಿಗಳ

ಮತಪ್ರಾಬಲ್ಯದಿಂದಲೇ ಗಿರಣಿಗಳನ್ನು ನಡೆಸಲಾಗುವುದು. ಅವರ ಸಂಬಳವು ಬೆಳೆಯುವುದು. ಅವರಿಗಾಗಿ ಚೆನ್ನಾದ ಮನೆಗಳನ್ನು ಕಟ್ಟಲಾಗುವುದು. ದುಡಿತದ ಕಾಲವು ಕಡಿಮೆಯಾಗುವುದು. ಮಕ್ಕಳ ಶಾಲೆ, ಸೂತಿಕಾಗೃಹ, ಮುಂತಾದ ಸೌಕರ್ಯಗಳು ಅವರಿಗೆ ದೊರಕುವುವು. ಅವರು ಒಂದು ನವಸೃಷ್ಟಿಯಲ್ಲಿಯೇ ನೆಲೆಯಾಗುವರು. ಸ್ವಬುದ್ಧಿಯನ್ನು ಉಪಯೋಗಿಸುವ ಸಂದರ್ಭ, ಸ್ವಾತಂತ್ರ್ಯ, ಶಕ್ತಿ, ಸಾಂಸ್ಕೃತಿಕ ಅಭಿವೃದ್ಧಿಯ ಅವಕಾಶ ಇವುಗಳಿರುವ ಒಂದು ಹೊಸ ಜಗದಲ್ಲಿಯೇ ಅವರು ಜೀವಿಸುವರು.

ಗಿರಣಿಗಳ ಒಡೆಯರ ಪಾಡೇನು ? ಕೆಲಸಗಾರರ ಕೂಟದಲ್ಲಿ ಅವರೂ ಕೆಲಸಗಾರರಾಗಬೇಕಾಗುವುದು. ಯೋಗ್ಯತೆಯಿದ್ದರೆ ಗಿರಣಿಗಳಲ್ಲಿ ತಜ್ಞರಾಗಿಯೂ ವ್ಯವಸ್ಥಾಪಕರಾಗಿಯೂ ಉಳಿದು ದುಡಿದು ಸಮಾಜಸೇವೆಯನ್ನು ಮಾಡುವ ಸಂದರ್ಭಗಳು ಅವರಿಗೆ ಸಿಕ್ಕುತ್ತವೆ.

ಗಿರಣಿಗಳನ್ನು ಪಡೆದುಕೊಂಡುದಕ್ಕೆ ಅವರಿಗೆ ಪ್ರತಿಫಲವನ್ನು ಕೊಡಲಾಗದು. ಇದಕ್ಕೆ ತಕ್ಕ ಕಾರಣಗಳುಂಟು. ಸಾಮಾಜಿಕ ಸಮತೆಯ ಆದರ್ಶವನ್ನಿಟ್ಟುಕೊಂಡ ಸಮಾಜವು ಆರ್ಥಿಕ ವಿಷಮತೆಯನ್ನುಂಟುಮಾಡುವ ಮೊದಲ ಹೆಜ್ಜೆಯನ್ನಿಡಲಾರದು. ಉತ್ಪಾದಕ ಆಸ್ತಿಯ ಒಡೆತನವು ಸುಲಿಗೆಯ ಕಾರಣ, ಲಾಭವೆಂದರೆ ಶ್ರಮಶಕ್ತಿಯ ಸುಲಿಗೆ ಎಂಬ ಖಂಡಿತವಾದ ಸಿದ್ಧಾಂತಗಳನ್ನಿಟ್ಟುಕೊಂಡ ಸಂಘವು ಇಂತಹ ಸ್ವಂತ ಆಸ್ತಿಯುಳ್ಳವರ ಹಕ್ಕುಗಳನ್ನು ಮನ್ನಿಸುವುದಿಲ್ಲ. ಅನ್ಯಾಯವಾದುದೆಂಬ ಅಂಶಗಳನ್ನು, ಪ್ರತಿಫಲಗಳನ್ನು ಕೊಟ್ಟು ಪರ್ಯಾಯವಾಗಿ ಉಳಿಯಲು ಬಿಡುವುದು ಸಲ್ಲದು. ಇದಲ್ಲದೆ ಇಂತಹ ಒಡೆಯರೆಲ್ಲ ತಮ್ಮ ದಿನದ ಬಳಕೆಗೆಂದು ಹಲವು ಬಗೆಯ ಸ್ವಂತ ಸೊತ್ತುಗಳನ್ನು ಮಾಡಿಟ್ಟುಕೊಂಡಿರಬಹುದು. ಹೀಗಾಗಿ ಅವರಿಗೆ ಹೆಚ್ಚಿನ ಕೊರತೆಯೂ ಆಗಲಿಕ್ಕಿಲ್ಲ. ಎಲ್ಲರಂತೆ ದುಡಿಯುವ ಇವರಿಗೂ ಎಲ್ಲ ಬಗೆಯ ಸರಕುಗಳನ್ನು ರಾಷ್ಟ್ರವು ಪೂರೈಸುತ್ತಿದ್ದರೆ ಇವರಿಗೆ ಹೆಚ್ಚಿನ ಧನದ ಹಂಬಲೇಕೆ ? ಸ್ವಲ್ಪವಾದರೂ ಉದಾರ ಮನೋಭಾವವಿರುವ ಯಜಮಾನರು ಈ ಅಭಿನವ ವ್ಯವಸ್ಥೆಯಲ್ಲಿ ಭಾಗಿಗಳಾಗಿ ಒಂದು ನೂತನ ಮತ್ತು ಘನವಾದ ಸಮಾಜ ನಿರ್ಮಾಣದಲ್ಲಿ ಸಹಕಾರಿಗಳಾಗುವರು.

ಆದರೆ ಒಡೆಯರೆಂಬುವರು ಹಟಸಾಧಿಸುವ ತುಂಟತನವನ್ನು ತೋರಿಸಿದರೆ ಮಾತ್ರ ಎಲ್ಲವೂ ಒಂದಕ್ಕೊಂದಾಗುವುದು. ಅವರು ಹೊಸ ಏರ್ಪಾಟುಗಳಿಗೆ ಎದುರು ನಿಂತರೆ, ನೂತನ ಉಪಕ್ರಮಗಳನ್ನು ತಿರಸ್ಕರಿಸಿದರೆ, ಹೊಸ ಸಮಾಜವ್ಯವಸ್ಥೆಯನ್ನು ವಿರೋಧಿಸುವ ಒಳಸಂಚು ನಡೆಸಿದರೆ ಅವರಿಗೆ ಕೆಡುಗಾಲಪ್ರಾಪ್ತವಾಗುವುದು ನಿಶ್ಚಿತ. ಶಾಸನ ದೃಷ್ಟಿಯಿಂದ ಅವರು ಜನತೆಯ ಶತ್ರುಗಳೆಂದು ನಿರ್ಣಯವಾಗಿ ತಕ್ಕ ಶಿಕ್ಷೆಗೊಳಗಾಗುವರು. ಕ್ರಾಂತಿಕಾಲದಲ್ಲಿ ಜನರು ಇವರ ಮೇಲೆ ಸಹಜವಾದ ಸಿಟ್ಟಿನಿಂದ ಬೆಂಕಿ ಕಾರುವರು. ಏಕೆಂದರೆ, ಆಗ ತಾನೆ ತೇಲಿಸಿ ಬಿಟ್ಟ ಹೊಸ ಘಟನೆಯ ಹಡಗವು ತೆರೆಗಳ ತಾಕಲಾಟದಿಂದ ಬಂಡೆಗಪ್ಪಳಿಸಿ ಒಡೆದು ಎಲ್ಲಿ ಹಾಳಾಗುವುದೋ ಎಂದು ಎಲ್ಲರೂ ಕಳವಳಗೊಳ್ಳುವರು. ಹೊಸ ಪದ್ಧತಿಯು ಬೇರುಬಿಡುವ ವರೆಗೆ ಎಲ್ಲರಿಗೂ ಆತುರವಿರುವುದು.

ಹೊಸ ಘಟನೆಯ ಆಡಳಿತದಲ್ಲಿ ಒಡೆಯರ ಪಾಡೇನೆಂಬುದು ಅವರ ನಡತೆಯನ್ನೇ ಅವಲಂಬಿಸಿದೆ.

ಹತ್ತಿಯ ಉದ್ಯೋಗದಂತೆಯೇ ಇತರ ಉದ್ಯೋಗಗಳ ಬಗೆ. ರಾಷ್ಟ್ರವು ನೂತನ ಯೋಜನೆ ನವನಿರ್ಮಿತಿಗಳನ್ನು ಎಲ್ಲೆಲ್ಲಿಯೂ ಕೈಕೊಳ್ಳುವುದು. ಸುಘಟಿತವಾದ ಉತ್ಪಾದನೆಯೊಂದಿಗೆ ಸುನಿಯಂತ್ರಿತವಾದ ಸರಿಯಾದ ಹಂಚಿಕೆಯೂ ನಡೆಯುವುದು.

## ೪. ವಿದೇಶ ವ್ಯಾಪಾರದಲ್ಲಿ ರಾಷ್ಟ್ರದ ವಿಶೇಷಾಧಿಕಾರ

ರಾಷ್ಟ್ರಕ್ಕೆ ವಿದೇಶ ವ್ಯಾಪಾರದ ಬಗೆಗೆ ವಿಶೇಷಾಧಿಕಾರವಿರುವುದು ಆರ್ಥಿಕ ಯೋಜನೆಯ ಅತ್ಯಂತ ಅಗತ್ಯವಾದ ಅಂಶ. ಇದರಿಂದ ದೇಶವು ತನಗೆ ಬೇಕಾದ ಆಯಾತ ನಿರ್ಯಾತಗಳನ್ನು ನಿರ್ಣಯಿಸುವುದು. ವ್ಯಕ್ತಿಗಳ ವಶಕ್ಕೆ ಈ ಅಧಿಕಾರವಿದ್ದರೆ ಅವರು ದೇಶದ ಅಗತ್ಯಕ್ಕಿಂತ ತಮ್ಮ ಲಾಭವನ್ನೇ ಹೆಚ್ಚಾಗಿ ನೋಡಿಕೊಳ್ಳುವರು. ಹೀಗಾಗಿಯೇ ಇಂದು ನಾಡಿನಲ್ಲಿ ಬರಗಾಲದ ಬೇಗೆಯಿದ್ದರೂ ಗೋದಿಯು ಹೊರನಾಡುಗಳಿಗೆ ಕಳುಹಲ್ಪಡುವ ಕೆಟ್ಟ ನೋಟವು ನಮಗೆ ಕಾಣುವುದು; ನಮ್ಮಲ್ಲಿಯ ಹತ್ತಿಯು ಮಾರಾಟಕ್ಕೆ ಗತಿಯಿಲ್ಲದಿದ್ದರೂ ಹೊರಗಿನ ಹತ್ತಿ ಇಲ್ಲಿ ನುಗ್ಗುವುದು.

ಲಾಭಲಾಲಸೆಯುಳ್ಳವರ ಕೈಯಲ್ಲಿ ವಿದೇಶ ವ್ಯಾಪಾರದ ಸೂತ್ರಗಳನ್ನು ಕೊಟ್ಟರೆ ಆರ್ಥಿಕ ಯೋಜನೆಯ ಕಾರ್ಯಕ್ರಮವು ನಡೆಯುವುದು ಕಷ್ಟ, ಅಥವಾ ತೀರ ಅಸಾಧ್ಯ. ನಾಣ್ಯಗಳ ಚಲನ, ಉತ್ಪಾದನ, ಕ್ರಯ, ವ್ಯಯ ಗಳನ್ನು ನಿಯಂತ್ರಿಸುವುದು ಕಠಿಣ. ಔದ್ಯೋಗಿಕ ಅಥವಾ ಒಕ್ಕಲುತನದ ಯಾವ ಬಗೆಯ ಮುನ್ನಡೆಯ ಮಾರ್ಗವನ್ನಾದರೂ ಗೆಲವುಗಟ್ಟಿ ನಡೆಯುವುದು ಬಿಗಿ. ಎಲ್ಲೆಲ್ಲಿಯೂ ಕೆಲಸದ ಹದ ಕೆಡುವುದು.

ಈ ತೊಂದರೆಗಳನ್ನು ಅಂತೂ ಇಂತೂ ತಡೆದುಕೊಳ್ಳಬಹುದು. ವಿದೇಶ ಗಳೊಡನೆ ನಡೆಯುವ ವ್ಯಾಪಾರವು ಹಲವು ವ್ಯಕ್ತಿಗಳ ಕೈಯಲ್ಲಿ ಉಳಿದು ಬಿಟ್ಟರೆ, ರಾಷ್ಟ್ರವು ಕೈಕೊಂಡ ಆರ್ಥಿಕ ಯೋಜನೆಗಳನ್ನೂ ಆರ್ಥಿಕ ಕಾರ್ಯ ಕಲಾಪಗಳನ್ನೂ ಕೆಲಸಕ್ಕೆ ಬಾರದಂತೆ ಮಾಡಲು ನಾಡಿನ ಹೊರ-ಒಳಗಿನ ಹಗೆಗಳಿಗೆ ಹೆಚ್ಚು ಅನುವು ಸಿಕ್ಕುವುದು.

ವಿದೇಶ ವ್ಯಾಪಾರವು ಜನಾಂಗದ ಜೀವಾಳದಂತಿದೆ. ಬಂಡವಾಳಗಾರಿ ಕೆಯ ಆಡಳಿತದಲ್ಲಿ ಕೂಡ ಅದು ಅನಿಯಂತ್ರಿತವಾಗಿ ನಿರರ್ಗಲವಾಗಿ ಉಳಿಯು ವುದಿಲ್ಲ. ವ್ಯಾಪಾರ ಸ್ವಾತಂತ್ರ್ಯದ ಪಕ್ಷಪಾತಿಯಾದ ಗ್ರೇಟ್ ಬ್ರಿಟನ್ನಿನಂತಹ ರಾಷ್ಟ್ರ ಕೂಡ ಅಪ್ರತಿಬದ್ಧವಾದ ವಿದೇಶ ವ್ಯಾಪಾರದ ಕ್ರಮವನ್ನು ಬಿಟ್ಟುಬಿಡ ಬೇಕಾಯಿತು.

## ೫. ಆರ್ಥಿಕ ಜೀವನದ ವಿಷಯದಲ್ಲಿ ರಾಷ್ಟ್ರದ ಅಂಕಿತಕ್ಕೆ ಒಳಪಡದ ಅಂಶಗಳಲ್ಲಿ ಹುಟ್ಟುವಳಿ, ಸಾಲ, ಹಂಚುವಿಕೆಗಳನ್ನು ನಡೆಸಲು ಸಹಕಾರದ ಸಂಘಟನೆ

ಈ ಉಪಾಯವನ್ನು ಕೈಕೊಳ್ಳಲು ಒಂದು ಕಾರಣವಿದೆ. ದೇಶದ ಸಮಗ್ರ ಆರ್ಥಿಕ ಜೀವನವನ್ನು ರಾಷ್ಟ್ರದ ಅಧಿಕಾರ ಸೂತ್ರಗಳಿಗೆ ಕೂಡಲೆ ಒಳಪಡಿಸುವುದು ಸಾಧ್ಯವಿಲ್ಲ. ತೀರ ಮೊದಲು ದೊಡ್ಡ ಸಂಸ್ಥೆಗಳನ್ನು ಮಾತ್ರ ರಾಷ್ಟ್ರದ ಆಡಳಿತದಲ್ಲೆಳೆಯಬಹುದು. ಅಂದರೆ ಇನ್ನೂ ಹಲವು ಚಿಕ್ಕ ಪುಟ್ಟ ಕೈಗಾರಿಕೆಗಳೂ ಉದ್ಯಮಗಳೂ ವ್ಯಕ್ತಿಗಳ ಒಡೆತನದಲ್ಲಿಯೇ ಉಳಿಯುವುವು. ಇಂತಹ ಪರಿಸ್ಥಿತಿಯನ್ನು ತಾಣಕ್ಕೆ ತರುವುದಕ್ಕಾಗಿಯೇ ಈ ಹಂಚಿಕೆಯನ್ನು ಸೂಚಿಸಲಾಗಿದೆ. ಸಣ್ಣ ಪ್ರಮಾಣದಲ್ಲಿ ನಡೆಯುವ

ವೈಯಕ್ತಿಕ ವ್ಯಾಪಾರವನ್ನು ಕಿತ್ತು ಸಹಕಾರದ ತತ್ತ್ವಕ್ಕನುಗುಣವಾಗಿ ಅದನ್ನು ಸಾಗಿಸುವುದೇ ಇದರ ಉದ್ದೇಶ.

ನಾಡಿನ ಸಣ್ಣ ಸಣ್ಣ ಗ್ರಾಮಗಳಲ್ಲಿರುವ ಚಿಲ್ಲರೆ-ಕಿರಾಣಿ-ಅಂಗಡಿಗಳನ್ನು ರಾಷ್ಟ್ರವು ತಕ್ಷಣ ತನ್ನ ಆಡಳಿತದ ಅಪ್ಪುಗೆಯಲ್ಲಿರಿಸಲಾರದು. ಕಾಲಾನು ಕ್ರಮದಲ್ಲಿ ಅದು ಇಂತಹ ಉಗ್ರಾಣಗಳನ್ನು ಹೊರಡಿಸಬಲ್ಲುದು. ಆದರೆ ಈ ವೈಯಕ್ತಿಕ ಅಂಗಡಿಗಳನ್ನು ನಡೆಯಗೊಡುವುದೂ ರಾಷ್ಟ್ರದ ಮನಸ್ಸಿಗೆ ಸೇರುವುದಿಲ್ಲ. ಇವುಗಳಿಂದ ಅಂತಹ ಅಪಾಯ ಸಂಭವಿಸಲಾರದಾದರೂ ಮೂಲತಃ ಅವುಗಳು ಸಾಮ್ಯವಾದಕ್ಕೆ ವಿಷಪ್ರಾಯವಾದುವುಗಳು. ಆದುದರಿಂದಲೆ ವ್ಯಕ್ತಿಗಳ ಬದಲು ಸಹಕಾರದ ಉಗ್ರಾಣಗಳನ್ನು ನೆಲೆಗೊಳಿಸಬೇಕೆಂದು ಸೂಚಿಸಿದುದು. ಈ ಸಣ್ಣ ಅಂಗಡಿಗಳ ಒಡೆಯರು ಉಗ್ರಾಣದವರೊಂದಿಗೆ ಒಂದಾದರೆ ಲೇಸು. ಇಲ್ಲವಾದರೆ ಸ್ಪರ್ಧೆಯಿಂದ ಅವರನ್ನು ಸದೆಬಡೆಯಬೇಕು. ಸುಸಜ್ಜಿತವಾದ ಉಗ್ರಾಣಗಳಿಗೆ ಇದು ಬಲು ಸುಲಭ. ಏಕೆಂದರೆ, ಅದರ ಸಂಘಟನೆ ಆದರ ಅನುಕೂಲತೆಗಳು ಈ ಸಣ್ಣ ಅಂಗಡಿಗಳ ಒಡೆಯರನ್ನು ಯಾವಾಗಲೂ ಹಗುರವಾಗಿ ಉರುಳಿಸಬಲ್ಲುವು. ಅದರಲ್ಲಿಯೂ ನೆರವಿಗೆ ರಾಷ್ಟ್ರಬಲವಿದ್ದ ಮೇಲೆ ಕೇಳುವುದೇನು ?

## ೬. ರಾಜರನ್ನೂ ಜಮೀನುದಾರರನ್ನೂ ಇತರ ಎಲ್ಲ ವರ್ಗದ ಸುಲಿಗೆಗಾರರನ್ನೂ ಪ್ರತಿಫಲ ಕೊಡದೆ ಪದಚ್ಯುತಗೊಳಿಸುವುದು.

ಪ್ರತಿಯೊಂದು ತರದ ಸಾಮಾಜಿಕ ಅಪಹಾರ ಅನ್ಯಾಯಗಳಿಂದ ವಿರಹಿತವಾದ, ವಿಶಿಷ್ಟವಾದ ಅಧಿಕಾರ ಅಂತಸ್ತುಗಳಿಲ್ಲದ ಸಮಾಜವೊಂದನ್ನು ನಿರ್ಮಿಸುವುದೇ ನಮ್ಮ ಗುರಿಯಾಗಿದ್ದರೆ ಮೇಲ್ಕಂಡ ಉಪಾಯವು ಕೇವಲ ಕ್ರಮಪ್ರಾಪ್ತವಾದುದು.

ರಾಜರು, ಪಾಳೆಯಗಾರರು, ಸರದಾರರು ಎಂಬುವವರೆಲ್ಲ ಈ ಕಾಲಕ್ಕೆ ಸಲ್ಲದ ಹಳೆಯ ಅಂಶ. ಸಾಮ್ರಾಜ್ಯಶಾಹಿಯು ಇವರನ್ನು ಸಾಕಿ ಸಲಹುತ್ತಿರುವುದು ತನಗಾಗಿ ಮಾತ್ರ. ಇಲ್ಲವಾದರೆ ಕಸಗುಡಿಸಿದಂತೆ ಆಧುನಿಕ ಸಾಮಾಜಿಕ ಪ್ರಭಾವವು ಇವರನ್ನು ಎಂದೋ ಉಡುಗಿ ಬಿಡುತ್ತಿತ್ತು.

ಭಾರತೀಯ ರಾಜರುಗಳು ಜಗತ್ತಿನ ಇಂದಿನ ನಿರಂಕುಶ ಪ್ರಭುಗಳಲ್ಲಿ ನಾಮಾಂಕಿತರು. ಜೋಹಗಾರಿಕೆಯನ್ನರಿಯುವ ಇಂತಹ ಜನಗಳ ವಶಕ್ಕೆ ಇಷ್ಟು ಅಧಿಕಾರಬಲವನ್ನು ಇನ್ನೆಲ್ಲಿಯೂ ಕೊಟ್ಟಿಲ್ಲ. ಇದರಿಂದ ಅಪಾರ ಹಾದ ಅನ್ಯಾಯವಾಗಿರುವುದು ನಿಜ. ಆದರೂ ರಾಜರ ಆಳಿಕೆಯನ್ನು ತಳ್ಳಲು ನಾವು ಯೋಚಿಸುವುದು ಇದಕ್ಕಾಗಿ ಅಲ್ಲ.

ನಾವು ದೂರುವುದು ಅರಸೊತ್ತಿಗೆಯ ಪದ್ಧತಿಯನ್ನೇ ಹೊರತು ಅದರ ಅತ್ಯಾಚಾರಗಳನ್ನಲ್ಲ. ಒಳ್ಳೆಯ ರಾಜನೂ ರಾಜನೇ ಅಲ್ಲವೇ? ಒಳ್ಳೆಯ ಜಾಗೀರದಾರನೂ ಜಾಗೀರದಾರನೇ ತಾನೆ? ಗಿರಣಿಯೊಡೆಯನು ಸಜ್ಜನ ನಾದರೂ ಗಿರಣಿಯೊಡೆಯನೆ ಅಲ್ಲವೇ? ಈ ಪದ್ಧತಿಗಳಲ್ಲಿ ಗರ್ಭಿತವಾಗಿರುವ ಸಾಮಾಜಿಕ ಸಂಬಂಧಗಳು ಉಳಿಯುವ ವರೆಗೆ ಅವುಗಳಿಗೆ ಸಂಬಂಧಪಟ್ಟ ಜನರು ಎಷ್ಟು ಒಳ್ಳೆಯವರಾದರೂ ಅನ್ಯಾಯ ಸುಲಿಗೆಗಳು ತಪ್ಪಿದ್ದಲ್ಲ.

ನಮ್ಮ ಯೋಜನೆಯ ಸರಿಯಾದ ಅರಿವು ಆಗಬೇಕಾದರೆ ಈ ಸಂಗತಿ ಯನ್ನು ಸಂಪೂರ್ಣವಾಗಿ ತಿಳಿದುಕೊಳ್ಳಬೇಕು.

ಸ್ವತಂತ್ರ ಭಾರತದಲ್ಲಿ ಶಾಸನಸಮ್ಮತರಾದ ರಾಜ (Constitutional Princes) ರಿರುವುದರಲ್ಲಿ ಅರ್ಥವಿಲ್ಲ. ಅದು ಕೆಲಸಕ್ಕೆ ಬಾರದ ಒಂದು ಹೊರೆ; ಪ್ರಜಾಸತ್ತೆಯ ಬೆಳವಣಿಗೆಗೆ ನಿರಂತರವಾದ ಎಡರು. ರಾಜರುಗಳಿರು ವುದರಿಂದ ರಾಷ್ಟ್ರದ ಜನತೆಗೆ ಲಾಭವಿಲ್ಲ, ಹಾನಿ ಹೆಚ್ಚು.

ಬಹುಶಃ ಇದೇ ಮಾತನ್ನು ದೊಡ್ಡ ದೊಡ್ಡ ವರ್ಗದಾರರ (Land lords) ವಿಷಯಕ್ಕೂ ಹೇಳಬಹುದು. ಹಿಂದೂ ಸನಾತನದಲ್ಲಿ ವರ್ಗದಾರಿಕೆ (Land lordism) ಯೆಂಬುದಿರಲಿಲ್ಲ.

ಹಿಂದುಸ್ಥಾನದ ಇತಿಹಾಸದ ಹಿಂದೂ ಅರಸರ ಆಳಿಕೆಯ ಕಾಲದಲ್ಲಿ ಹೊಲಗದ್ದೆಗಳನ್ನು ಸಾಗುವಳಿ ಮಾಡುವವರು ತಮ್ಮ ಹುಟ್ಟುವಳಿಯ ಒಂದು ನಿಶ್ಚಿತ ಭಾಗವನ್ನು ಅರಸನಿಗಾಗಲಿ ಆತನ ಪ್ರತಿನಿಧಿಗಾಗಲಿ ನೇರವಾಗಿ ಕೊಡುತ್ತಿದ್ದರು ಮಿಕ್ಕ ಮಧ್ಯಸ್ಥರಿರಲಿಲ್ಲ.

ಜಮೀನುದಾರಿ ಪದ್ಧತಿಯ ಹುಟ್ಟಡಗಿಸಬೇಕೆಂದು ಹೇಳುವ ನಾವು ರಶಿಯಾದ ಬೋಲ್ಶೆವಿಕ್ ರೀತಿಯನ್ನು ಅನುಸರಿಸುತ್ತಿದ್ದೇವೆಂದೂ ನಮ್ಮ

## ೭. ಹೊಲಗದ್ದೆಗಳೆನ್ನೆಲ್ಲ ಒಕ್ಕಲಿಗರಲ್ಲಿ ಮತ್ತೆ ಹಂಚುವುದು

ಸಾರ್ವಜನಿಕ ಒಡೆತನವೇ ನಮ್ಮ ಗುರಿಯೆಂದ ಬಳಿಕ ಭೂಮಿಯನ್ನು ಒಕ್ಕಲಿಗರಿಗೆ ಹಂಚಿಕೊಡುವುದು ವಿಚಿತ್ರವಾಗಿ ತೋರಬಹುದು. ಸಾರ್ವಜನಿಕ ಒಡೆತನದಲ್ಲಿ ಹೊಲಗದ್ದೆಗಳ ಸಾಗುವಳಿಯು ತಕ್ಷಣ ಆಗದೆ, ಕೆಲವು ಕಾಲದ ನಂತರ ನಡೆಯಬಲ್ಲುದಾದ್ದರಿಂದ ಪ್ರಾರಂಭಕ್ಕೆ ಹೊಲಗಳನ್ನು ಒಕ್ಕಲಿಗರ ಒಡೆತನದಲ್ಲಿರಿಸುವುದು ಅಗತ್ಯವಾಗಿದೆ. ಸದ್ಯಕ್ಕೆ ಬೇರೆ ಬೇರೆಯವರ ಜಮೀನುಗಳ ಉದ್ದಳತೆಗಳಲ್ಲಿ ವಿಶೇಷ ಭೇದವಿದೆ. ಕೆಲವು ಹೊಲಗಳು ನೂರಾರು ಎಕರೆಯವು. ಕೆಲವು ಒಂದು ಎಕರೆಗಿಂತ ಚಿಕ್ಕವು. ಈ ದೊಡ್ಡ ವಿಷಮತೆಯನ್ನು ಹೋಗಲಾಡಿಸಲು ಹೊಲಗದ್ದೆಗಳನ್ನೆಲ್ಲ ಮತ್ತೊಮ್ಮೆ ಹಂಚಿ ಹಾಕಬೇಕು.

## ೮. ಸಾಮೂಹಿಕವಾದ ಸಹಕಾರದ ಒಕ್ಕಲುತನಕ್ಕೆ ರಾಷ್ಟ್ರದ ಆಧಾರ ಮತ್ತು ಪ್ರೋತ್ಸಾಹ

ಈ ವಿಷಯವು ಯಾವ ಸಾಮ್ಯವಾದೀಯ ಸರಕಾರವನ್ನಾದರೂ ತೊಂದರೆಪಡಿಸಿ ಅದರ ತಲೆ ಕೆಡಿಸುವಂತಹದು. ಭಾರತೀಯ ಸಾಮ್ಯವಾದೀ ಸರಕಾರಕ್ಕೆ ಇನ್ನೂ ಹೆಚ್ಚು ಕಷ್ಟಗಳಿವೆ. ಆದುದರಿಂದ ಈ ಸಂಗತಿಯನ್ನು ವಿಶೇಷ ಮನಸ್ಸುಕೊಟ್ಟು ಯೋಚಿಸೋಣ.

ಭಾರತವು ಕೃಷಿಪ್ರಧಾನವಾದ ದೇಶ. ಆದುದರಿಂದ ಇಲ್ಲಿ ಸಾಮ್ಯವಾದಕ್ಕೆ ಎಳ್ಳಷ್ಟೂ ಎಡೆಯಿಲ್ಲೆಂದು ಕೆಲವರು ವಾದಿಸುವರು. ಈ ವಾದಕ್ಕೆ ನಾವು ಮುಂಚೆಯೇ ಉತ್ತರ ಕೊಟ್ಟಿದ್ದೇವೆ. ಜಗತ್ತಿನ ಸದ್ಯದ ಸ್ಥಿತಿಯಲ್ಲಿ ಈಗಿನ ಉತ್ಪಾದನ ಸಾಧನಗಳಿಂದ ಸಾಮ್ಯವಾದವನ್ನು ಎಲ್ಲಿ ಬೇಕಾದರೂ ಬಳಕೆಯಲ್ಲಿ ತರಬಹುವೆಂದು ಮೊದಲೆ ತಿಳಿಸಿದ್ದೇವೆ. ಆ ಸ್ಥಳವು ಎಷ್ಟು ಹಿಂದುಳಿದುದಾದರೂ ಚಿಂತೆಯಿಲ್ಲ. ಸಾಮ್ಯವಾದವನ್ನು ಸ್ಥಾಪಿಸುವ ಅಪೇಕ್ಷೆಯುಳ್ಳ ಪ್ರಭಾವಶಾಲಿಯಾದ ಒಂದು ಪಕ್ಷವಿರುವುದಾದರೆ ಹಿಂದುಸ್ಥಾನದ ಕೃಷಿಪ್ರಧಾನ ಗುಣವು ಅದಕ್ಕೆ ಯಾವ ಬಗೆಯ ಆತಂಕವನ್ನೂ ಉಂಟುಮಾಡಲಾರದು. ಅದು ಸಾಮ್ಯವಾದದ ಸವಾರಿಯ ವೇಗವನ್ನು ಕಡಿಮೆ ಮಾಡಬಹುದಷ್ಟೇ ಅಲ್ಲದೆ ಇನ್ನೇನೂ ಇಲ್ಲ.

ಸಾಮ್ಯವಾದವನ್ನು ಸ್ಥಾಪಿಸುವ ಶಕ್ಯತೆ ಮುಖ್ಯ ವಿಷಯವಲ್ಲ. ಆದರೆ
ಸಾಮ್ಯವಾದದಿಂದ ಹಿಂದುಸ್ಥಾನದ ಒಕ್ಕಲುತನ, ಒಕ್ಕಲಿಗ ಮತ್ತು ಜನಾಂಗ
ಇವುಗಳಿಗೆ ಲಾಭವಿದೆಯೋ? ಈ ಪ್ರಶ್ನೆಗೆ ನಾವು ಖಚಿತವಾದ ಉತ್ತರವನ್ನು
ಕೊಡುತ್ತೇವೆ. ನಮ್ಮ ಒಕ್ಕಲುತನವನ್ನು ನಾಶ ನಿರ್ಮೂಲನಗಳಿಂದ ಉಳಿಸಲು
ಸಾಮ್ಯವಾದವೊಂದೇ ಗತಿಯೆಂಬ ಬಗೆಗೆ ನಮಗೆ ಕೊಂಚವೂ ಸಂಶಯವಿಲ್ಲ.
ಅದುವೆ ಒಕ್ಕಲಿಗರ ಮುನ್ನಡೆ ಏಳ್ಗೆಗಳನ್ನು ಸಾಧಿಸಬಲ್ಲುದು; ಅದುವೆ ಜನಾಂಗ
ವನ್ನು ಪ್ರಭಾವಶಾಲಿಯಾಗಿಯೂ ಶಕ್ತಿಯುತವಾಗಿಯೂ ಮಾಡಬಲ್ಲುದು.
ನಮ್ಮ ಒಕ್ಕಲುತನಕ್ಕೊದಗಿದ ಬೇನೆ ಬಲು ಆಳವಾಗಿ ಬೇರು ಬಿಟ್ಟಿದೆ. ತೀವ್ರ
ವಾದ ಚಿಕಿತ್ಸೆ ಮಾತ್ರವೇ ಅದಕ್ಕೆ ಜೀವದಾನ ಕೊಡಬಹುದು. ಸಂಕ್ಷೇಪದಲ್ಲಿ
ಹೇಳುವುದೆಂದರೆ ನಮ್ಮ ಒಕ್ಕಲುತನಕ್ಕೆ ಈ ಕೆಳಗಿನ ರೋಗಗಳು ಅಂಟಿ
ಕೊಂಡಿವೆ. ಸಾಗುವಳಿ ಮಾಡುವ ಒಕ್ಕಲಿಗನನ್ನು ಸುಲಿಯುವುದಲ್ಲದೆ ಆತನ
ಔದಾಸೀನ್ಯವನ್ನು ಹೆಚ್ಚಿಸಿ ಕಾರ್ಯಕ್ಷಮತೆಯನ್ನು ಕುಗ್ಗಿಸುವ ವರ್ಗದಾರರ
ಹಿತಸಂಬಂಧಗಳು (Vested interests); ಪ್ರಮಾಣವಿಲ್ಲದ, ಮೀತಿ
ಮೀರಿದ ಕಂದಾಯ; ಒಕ್ಕಲಿಗನನ್ನು ನೆಲಕ್ಕುರುಳಿಸುವ, ಹೊರಲಾರದ ಸಾಲದ
ಹೊರೆ; ಅನುತ್ಪಾದಕವಾದ ಸಣ್ಣ ಸಣ್ಣ ಹೊಲದ ತುಂಡುಗಳು; ಅತ್ಯಂತ
ಕನಿಷ್ಠವಾದ ಉತ್ಪಾದನ; ಅತೃಪ್ತಿಕರವಾದ ಕ್ರಯ ವಿಕ್ರಯ ಪದ್ಧತಿಗಳು;
ಸಾಲದ ವ್ಯವಸ್ಥೆಯ ಅನಾನುಕೂಲತೆಗಳು; ಗ್ರಾಮ ಮತ್ತು ನಗರ, ಕೃಷಿ
ಹಾಗೂ ಉದ್ಯಮ ಇವುಗಳ ತೂಕ ತಪ್ಪಿರುವಿಕೆ.

ಇವುಗಳಲ್ಲಿ ಒಂದೊಂದೂ ದೊಡ್ಡದಾದ ಸಮಸ್ಯೆಯೇ. ಆದರೆ ಎಲ್ಲವು
ಗಳನ್ನೂ ಏಕಕಾಲಕ್ಕೆ ಎದುರಿಸಿ ಎಲ್ಲವುಗಳಿಗೂ ಸರಿಹೋಗಿ ಎಲ್ಲವನ್ನೂ
ಬಗೆಹರಿಸಲು ತಕ್ಕುದಾದ ಒಂದು ಹಂಚಿಕೆಯನ್ನು ಹುಡುಕುವುದು ಯಾವ
ಸುಧಾರಣೆಯ ಯೋಜನೆಗೂ ಸಾಧ್ಯವಿಲ್ಲ.

ಹೊಲಗಳನ್ನು ಉಳುವವರನ್ನು ಸುಲಿಯುವ ದೊಡ್ಡ ದೊಡ್ಡ ವರ್ಗ
ದಾರರ ಹಿತಸಂಬಂಧಗಳನ್ನು ಕೀಳುವುದು; ಒಕ್ಕಲಿಗರನ್ನು ಸಾಲದ ಶೂಲದಿಂದ
ಬಿಡಿಸುವುದು; ತುಂಡು ಹೊಲಗಳನ್ನು ಜೋಡಿಸಿ ಸಾಮುದಾಯಿಕವಾದ
ಸಹಕಾರ ಪದ್ಧತಿಯಿಂದ ಹೊಲಗಳನ್ನು ಹರಗುವುದು; ಹಣದ ತೊಂದರೆ
ಗಳನ್ನು ನೀಗಿಸಲು ರಾಷ್ಟ್ರವೇ ಏರ್ಪಾಟನ್ನು ಮಾಡುವುದು; ಅಥವಾ ಸಹಕಾರ

ಸಂಘಗಳನ್ನು ಏರ್ಪಡಿಸುವುದು, ಹುಟ್ಟುವಳಿಯ ಮಾರಾಟಕ್ಕೆ ಸಹಕಾರದ ತತ್ಕ್ಷಣಕ್ಕನುಗುಣವಾಗಿ ಕೋಠಿಗಳನ್ನೊದಗಿಸುವುದು; ಸಹಕಾರದಿಂದ ಉಪ-ಉದ್ಯೋಗಗಳನ್ನು ಕೈಕೊಳ್ಳುವುದು—ಮುಂತಾದ ಯೋಜನೆಗಳು ಒಕ್ಕಲುತನವನ್ನು ಸದ್ಯದ ಪರಿಸ್ಥಿತಿಯಿಂದ ಬಿಡುಗಡೆ ಮಾಡಬಹುದು.

ಇವು ವಿಶಾಲ ವಿಚಾರಗಳೆಂದು ಭಾವಿಸಲಾಗದು. ಒಡೆಯ ಒಕ್ಕಲಿಗರ ಸಂಬಂಧದಲ್ಲಿ ಮನೆಮಾಡಿರುವ ಸುಲಿಗೆಯ ಪದ್ಧತಿಯನ್ನು ಕಿತ್ತುಹಾಕುವುದೇ ಇವುಗಳ ಮುಖ್ಯ ಉದ್ದೇಶ. ಮಿಕ್ಕುದೆಲ್ಲ ಸಂಪೂರ್ಣ ವಿಧಾಯಕವಾದುದು. ಅದಕ್ಕೆ ಸರಕಾರದವರು ಪ್ರಚಾರ ಪ್ರೋತ್ಸಾಹಗಳನ್ನು ಮಾಡಿ ಕೇವಲ ಮಾರ್ಗದರ್ಶಕರಾಗಬೇಕು.

“ ಅಲ್ಲೊಂದು ಇಲ್ಲೊಂದು ಬಿದ್ದಿರುವ ಸಣ್ಣ ಸಣ್ಣ ಹೊಲದ ತುಂಡುಗಳನ್ನೆಲ್ಲ ಸಹಕಾರದ ದೊಡ್ಡ ಹೊಲಗಳನ್ನಾಗಿ ಮಾಡಿ ಕೃಷಿಯನ್ನು ಸಾಂಘಿಕ ಕ್ರಮದಿಂದ ನಡೆಸದಿದ್ದರೆ ಹಿಂದುಸ್ಥಾನದ ಕೃಷಿಯು ಸುಧಾರಣೆಯಾಗಲಾರದು” ಎಂದು ಪ್ರೊ. ರಾಧಾಕಮಲ ಮುಕರ್ಜಿಯವರು ಆಗ್ರಾದಲ್ಲಿ ಕೊಟ್ಟ ತಮ್ಮ ಉಪನ್ಯಾಸವೊಂದರಲ್ಲಿ ಹೇಳಿದರು. ನಾವು ಹೇಳುವ ವಿಚಾರಗಳಿಗೆ ಅವರ ಪೂರ್ಣ ಅನುಮೋದನವಿದ್ದಂತಿದೆ.

ಮುಖ್ಯವಾಗಿ, ಕೃಷಿಯ ವಿಷಯದಲ್ಲಿ ಸಹಕಾರದ ಸಾಂಘಿಕ ಪ್ರಯತ್ನ ಪಂಡಿತ ನೆಹರೂರವರು ಬೇರೆ ಇನ್ನೊಂದು ಕ್ರಮವನ್ನು ಸೂಚಿಸಬಹುದು. ತುಂಡು ಮಾಡದ ಹೊಲಗಳನ್ನು ನೆಲವಿಲ್ಲದ ಕಾರ್ಯದಕ್ಷರಾದ ಒಕ್ಕಲಿಗರ ಒಡೆತನಕ್ಕೆ ಒಪ್ಪಿಸಿ ಅವರನ್ನು ಸ್ವತಂತ್ರರಾಗಿ ಸಾಗುವಳಿ ಮಾಡಗೊಡುವುದು ಸರಿಯೆಂದು ಅವರ ಅಭಿಪ್ರಾಯ.

ಈ ಸೂಚನೆಯನ್ನು ನಿಜವಾಗಿ ಕಾರ್ಯರಂಗಕ್ಕಿಳಿಸಿದರೆ ನಾವು ಹೇಳಿದಂತಹ ಕ್ರಾಂತಿಕಾರಕ ಮಾರ್ಪಾಟುಗಳನ್ನೇ ಮಾಡಬೇಕಾಗುವುದು. ಆದರೆ ಆಗುವ ಪರಿಣಾಮವು ಮಾತ್ರ ತೀರ ಕೀಳ್ತರದ್ದು. ಜನಾಂಗದ ಮತ್ತು ಒಕ್ಕಲಿಗರ ದೃಷ್ಟಿಯಿಂದ ಇದರ ಪ್ರತಿಫಲವು ಹಿರಿದಾಗಲಾರದು.

ಸಹಕಾರದ ಹೊಲದ ಒಕ್ಕಲಿಗನಿಗಿಂತ ಸ್ವತಂತ್ರನಾದ ಒಕ್ಕಲಿಗನಿಗೆ ಸಂಭವಿಸುವ ಗಂಡಾಂತರಗಳು ಹೆಚ್ಚಿನವು. ಹುಟ್ಟುವಳಿ, ಸರಕುಗಳ ಕೊಡು

ಕೊಳ್ಳುವಿಕೆ, ಸಾಲ ಮುಂತಾದ ವಿಚಾರಗಳಲ್ಲಿ ಅವನಿಗಿಂತ ಇವನಿಗೆ ಸೌಕರ್ಯ ಗಳು ಕಡಿಮೆ. ಇದಲ್ಲದೆ ಒಂದು ದೊಡ್ಡ ಸಹಕಾರದ ಬಳಗದಲ್ಲಿ ಸಹಜವಾಗಿ ಸಿಕ್ಕುವ ಸೌಲಭ್ಯ ಮತ್ತು ಸುಖಸಂದರ್ಭಗಳು ಈ ಒಬ್ಬಂಟಿಗನಿಗೆ ಲಭಿಸವು. ಕ್ಷುದ್ರ ವ್ಯಕ್ತಿತ್ವವನ್ನು ತೊರೆದು ಸಂಘದೊಡನೆ ಏಕಜೀವನಾದ ಸಹಕಾರದ ಒಕ್ಕಲಿಗನಿಗಿಂತ ಈತನು ನೀತಿ ಸಂಸ್ಕೃತಿಗಳ ದೃಷ್ಟಿಯಿಂದ ಸಾಮಾನ್ಯವಾಗಿ ಹಿಂದುಳಿದವನೇ ಆಗುವನು.

ಜನಾಂಗದ ದೃಷ್ಟಿಯಿಂದ ನೋಡಿವರೆ ನಮ್ಮ ಪಕ್ಷಕ್ಕೆ ಇನ್ನೂ ಬಲ ಬರುವುದು. ಒಕ್ಕಲಿಗನೂ ಜನಾಂಗದ ಒಂದು ಘಟಕ—ಭಾರತದಲ್ಲಿ ಪ್ರಮುಖ ಘಟಕ—ಎಂಬುದನ್ನು ಮರೆಯಲಾಗದು.

ಜನರನ್ನು ಸುಲಿಗೆಯ ಬಾಯಿಂದ ತಪ್ಪಿಸಲು ಮಾತ್ರವಲ್ಲ, ದೇಶದ ಆರ್ಥಿಕ ಮತ್ತು ಸಾಮಾಜಿಕ ಜೀವನದ ಬುದ್ಧಿಪೂರ್ವಕವಾದ ಬೆಳವಣಿಗೆ ಯನ್ನು ಸಾಧಿಸಲು ಸಹ, ಎಲ್ಲ ಕಡೆಯಂತೆ ಇಲ್ಲಿಯೂ ಸಾಮ್ಯವಾದದ ಅಗತ್ಯ ವಿದೆಯೆಂದು ನಾನು ಮೊದಲೆ ಸೂಚಿಸಿದ್ದೇನೆ.

ಇನ್ನೆಲ್ಲಿಗಿಂತ ಹಿಂದುಸ್ಥಾನಕ್ಕೆ ಕ್ರಮಬದ್ಧವಾದ ವಿಕಾಸದ ಆವಶ್ಯಕತೆ ಯಿದೆ. ಏಕೆಂದರೆ, ಸಾಮ್ರಾಜ್ಯಶಾಹಿಯ ಸುಲಿಗೆಯಿಂದ ಇಲ್ಲಿಯ ಜೀವನವೆಲ್ಲ ಅಸ್ತವ್ಯಸ್ತವಾಗಿದೆ.

ವೈಯಕ್ತಿಕ ಕೃಷಿವಿಧಾನವಿದ್ದಲ್ಲಿ ಆರ್ಥಿಕ ಯೋಜನೆಯು ಸಾಧ್ಯವಲ್ಲ. ಹಿಂದುಸ್ಥಾನದ ಕಾಳುಕಡಿ ಮುಂತಾದ ಹಸಿ ಸರಕುಗಳೆಲ್ಲ ಒಬ್ಬಂಟಿಗರಾದ ಒಕ್ಕಲಿಗರ ಚಿಕ್ಕ ಪುಟ್ಟ ಹೊಲಗಳಲ್ಲಿ ಬೆಳೆಯುತ್ತವೆಂದ ಬಳಿಕ ಇಲ್ಲಿ ಕೈಕೊಂಡ ಒಂದು ಯೋಜನೆಯ ಮೇರೆಗೆ ಹುಟ್ಟುವಳಿ ಮತ್ತು ಹಂಚುವಿಕೆಗಳನ್ನು ನಡೆಸುವುದು ಎಷ್ಟು ಕಷ್ಟಕರವೆಂಬುದನ್ನು ವಿಚಾರ ಮಾಡಬೇಕು. ಇದು ಸಾಧ್ಯವೇ ? ಬೆಳೆಸಬೇಕಾದ ಬೆಳೆ ಯಾವುದು ? ಎಷ್ಟು ? ಕಾರಖಾನೆಗಳಲ್ಲಿ ಯಾವ ಸರಕುಗಳನ್ನು ಸಿದ್ಧಪಡಿಸಬೇಕು ? ಯಾವ ಕಾರಖಾನೆಗಳನ್ನು ಕಟ್ಟ ಬೇಕು ? ಯಾವ ಆಹಾರ ವಸ್ತುಗಳನ್ನು ಬಳಸಬೇಕು ? ತನಗೆ ಬೇಕಾಗುವ ಸರಕುಗಳ ಆಯಾತಕ್ಕಾಗಿ ಯಾವ ಸರಕುಗಳನ್ನು ಹೊರನಾಡುಗಳಿಗೆ ಕಳಿಸ

ಬೇಕು ? ಎಂಬುದನ್ನೆಲ್ಲ ಗೊತ್ತುಮಾಡಲು, ನಾವು ಆ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಕೊಡಲೇಬೇಕು.

ಇದನ್ನೆಲ್ಲ ನೆರವೇರಿಸಲು ನಮ್ಮ ಕೃಷಿಯ ಸಂಘಟನೆಯನ್ನು ವಿಶಾಲವಾಗಿಸಬೇಕು. ಒಬ್ಬೊಬ್ಬ ಒಕ್ಕಲಿಗನ ಕೈಯಲ್ಲಿರುವ ತುಂಡು ಹೊಲಗಳ ಬದಲು ದೊಡ್ಡ ಘಟಕಗಳನ್ನು ಮಾಡಬೇಕು. ಇಡಿಯ ಹಳ್ಳಿಯೇ ಕೃಷಿಯ ಉತ್ಪಾದನದ ಒಂದು ಘಟಕವಾಗಬೇಕು. ಹಾಗೂ ಒಂದು ಘಟಕವು ಇನ್ನೊಂದರೊಡನೆ ಸಹಕರಿಸಿ ಒಂದೊಂದೂ ಆರ್ಥಿಕ ವ್ಯವಸ್ಥೆಯ ಒಂದು ಅಂಗವೆಂಬಂತೆ ಸಾಗುವಳಿ ನಡೆಸಿದರೆ ಮಾತ್ರ ಇದೆಲ್ಲ ಕೈಗೂಡುವುದು. ವ್ಯಕ್ತಿವಿಶಿಷ್ಟವಾದ ಕೃಷಿ ಪದ್ಧತಿಯಲ್ಲಿಯೂ ರಾಷ್ಟ್ರಕ್ಕೆ ಕೃಷಿಯ ಉತ್ಪತ್ತಿಯನ್ನು ನಿಯಂತ್ರಿಸಲಿಕ್ಕೆ ಸಾಧ್ಯವಿದೆ. ತನಗೆ ಬೇಕಾದ ಬೆಳೆಗಳ ಹುಟ್ಟುವಳಿಯ ಬಗೆಗೆ ಕಡಿಮೆ ಕಂದಾಯವನ್ನು ನಿರ್ಣಯಿಸಿ ಬೇಕಾಗದ ಭಾಗಕ್ಕೆ ಹೆಚ್ಚು ತೆರಿಗೆಯನ್ನು ಹೇರಿದರೆ ಈ ಕೆಲಸವು ಸುಲಭಸಾಧ್ಯವಾಗಬಲ್ಲದು. ಈ ಪ್ರಶಸ್ತಿಯ ಕಂದಾಯ ಕ್ರಮದಿಂದ(Preferential taxation) ಕೆಲವು ಬೆಳೆಗಳಿಗೆ ಪ್ರೋತ್ಸಾಹವು ಸಿಕ್ಕು ಅವುಗಳ ಸಾಗುವಳಿ ಬೆಳೆಯುವುದು. ಮೊದಲಿಗೆ ರಶಿಯಾದಲ್ಲಿ ಮಾಡಿದ್ದು ಹೀಗೆಯೆ. ಆದರೆ ಇದರಿಂದ ರಾಷ್ಟ್ರಕ್ಕೆ ಆರ್ಥಿಕ ಯೋಜನೆಯ ದೃಷ್ಟಿಯಿಂದ ವಿಶೇಷ ಯಶಸ್ಸು ದೊರೆಯಲಿಕ್ಕಿಲ್ಲ.

ಇನ್ನು ದೀರ್ಘಕಾಲದ ಆರ್ಥಿಕ ಯೋಜನೆಯ ( Long time Planning ) ಬಗೆಗೆ ಯೋಚಿಸೋಣ. ಹಿಂದುಸ್ಥಾನದ ಒಕ್ಕಲುತನದ ಹುಟ್ಟುವಳಿಯನ್ನು ಕೆಲವು ವರ್ಷಗಳಲ್ಲಿ ಇಮ್ಮಡಿಸಬೇಕೆಂಬ ಹಂಬಲಿಕೆ ಈ ವ್ಯಕ್ತಿವಿಶಿಷ್ಟವಾದ ಕೃಷಿಪದ್ಧತಿಯಿಂದ ಕೈಗೂಡಬಹುದೋ ? ಬಹಳವಾದರೆ ಒಕ್ಕಲಿಗರಿಗೆ ಸಾಗುವಳಿಯ ಸುಧಾರಿಸಿದ ಕ್ರಮ ಮುಂತಾದವುಗಳನ್ನು ಕಲಿಸಬಹುದು. ಆದರೆ ಇದರಿಂದೇನಾಗುವುದು ? ಒಬ್ಬೊಬ್ಬನ ಸಾಗುವಳಿಯಲ್ಲಿರುವ ತುಂಡು ಹೊಲಗಳಲ್ಲಿ ಆಗುವ ಹುಟ್ಟುವಳಿಗೊಂದು ಮೇರೆಯಿದೆ.

ಉದ್ಯೋಗ–ಕೃಷಿಗಳನ್ನು ಒಂದು ತೂಕದಲ್ಲಿರಿಸುವ ( Balancing ) ವಿಚಾರವನ್ನು ತೆಗೆದುಕೊಳ್ಳೋಣ. ಈ ಹಿಡಿತವು ಸಾಧ್ಯವಾಗದಿದ್ದರೆ ಕೃಷಿ ಸಮಸ್ಯೆಯು ಪರಿಹಾರವಾಗದು. ಇದಕ್ಕಾಗಿ ಸಹಕಾರದ ಪ್ರಯತ್ನ, ಯೋಜನೆ ಬೇಕು. ಇದರಲ್ಲಿಯೂ ವ್ಯಕ್ತಿಗತ ಕೃಷಿ ತೊಂದರೆ ಕೊಡುವುದು.

ಜನತೆಯ ಮನಸ್ಸಂಸ್ಕಾರಗಳ ದೃಷ್ಟಿಯಿಂದ ನೋಡಿದರೆ ಸಾಮ್ಯವಾದದ ಬುನಾದಿಯ ಮೇಲೆ ಭಾರತೀಯ ಜೀವನದ ಪುನರ್ಘಟನೆಯನ್ನು ಮಾಡುವ ಯಾವ ಪ್ರಯತ್ನಕ್ಕಾದರೂ ಗೆಲವು ಸಿಕ್ಕಬೇಕಾದರೆ ಕೃಷಿವಿಧಾನದಲ್ಲಿ ಸಾಮ್ಯವಾದದ ಸೇರ್ಪಡೆಯಾಗಬೇಕು. ಅಂದರೆ ತುಂಡು ಹೊಲಗಳನ್ನು ಜೋಡಿಸಿ ವಿಶಾಲವಾದ ಕ್ಷೇತ್ರಗಳಲ್ಲಿ ಸಹಕಾರದ ಪದ್ಧತಿಯಿಂದ ಸಾಗುವಳಿಯು ನಡೆಯಬೇಕು. ನಮ್ಮ ಉದ್ಯಮಗಳ ಸಂಘಟನೆಯನ್ನು ಸಾಮ್ಯವಾದದ ಮೇರೆಗೆ ಮಾಡಿ ಕೃಷಿವ್ಯವಸ್ಥೆಯನ್ನು ಈಗಿನಂತೆಯೇ ವ್ಯಕ್ತಿಗತ ಆಡಳಿತದಲ್ಲಿ ಏಕೆ ಬಿಡಬಾರದೆಂದು ನನಗೆ ಹಲವು ಸಲ ಕೇಳಲಾಗಿದೆ. ಇದಕ್ಕೆ ಉತ್ತರವು ಸಿದ್ಧವಾಗಿಯೇ ಇದೆ. ಒಂದು ಕಡೆಗೆ ವ್ಯಷ್ಟಿವಾದ ಇನ್ನೊಂದು ಕಡೆಗೆ ಸಮಾಜವಾದ; ಹೀಗೆ ದ್ವಿದಲ ಪದ್ಧತಿಯ ಆಳಿಕೆಯಲ್ಲಿ ಹಲವು ವಿಸಂಗತತೆಗಳೂ ಘರ್ಷಣಗಳೂ ಉಂಟಾಗಿ ಈ ಕುಲಗೆಟ್ಟ ಸಂಘಟನೆಗೆ ಅರ್ಧಾಂಗವಾಯುವಾಗುವುದು. ಕ್ಷುದ್ರಮನೋವೃತ್ತಿಯ, ಸ್ವಾರ್ಥನಿಷ್ಠರಾದ ಮತ್ತು ತಮ್ಮ ಲಂಗೋಟಿ ಪಟ್ಟಿಯಂತಹ ತುಂಡು ಹೊಲಗಳನ್ನು ಸ್ವಲಾಭಕ್ಕಾಗಿಯೇ ಹರಗಿ ಸಾಗುವಳಿ ಮಾಡುವ ಲಕ್ಷಗಟ್ಟಲೆ ಒಕ್ಕಲಿಗರುಳ್ಳ ನಾಡಿನಲ್ಲಿ ಸಾಮ್ಯವಾದವು ನೆಲೆಗೊಳ್ಳುವುದೆಂತು? ಜನಾಂಗದ ಬಹುಭಾಗವು ವ್ಯಕ್ತಿನಿಷ್ಠವಾಗಿ ತನ್ನ ಸಾಮಾಜಿಕ ಘರ್ಷಣದಿಂದ ಮತ್ತು ನಿಷ್ಫಲತೆಯಿಂದ ಸ್ವಲಾಭವನ್ನೇ ಸಾಧಿಸುವಂತಹದಾಗಿ ಉಳಿದರೆ ಮಿಕ್ಕ ಭಾಗವು ಸಾಂಘಿಕವಾಗಿ ದುಡಿದು ಹೇಗೆ ಬದುಕಬಲ್ಲುದು?

ಸಮಾಜವಾದವು ನೆಲೆಯಾಗಿ ನಿಲ್ಲಬೇಕಾದರೆ ಪಟ್ಟಣಗಳಂತೆ ಹಳ್ಳಿಗಳಲ್ಲಿಯೂ ಸಂಘಬುದ್ಧಿಯು ಅರಳಿ ವಿಕಾಸವಾಗಬೇಕು; ಸಂಘ ಜೀವನವು ತಲೆದೋರಿ ಬೆಳೆಯಬೇಕು.

ಅಂತೂ ಯಾವ ದೃಷ್ಟಿಯಿಂದ ಯೋಚಿಸಿದರೂ ಭಾರತೀಯ ಕೃಷಿವ್ಯವಸ್ಥೆಯಲ್ಲಿ ಸಮಾಜವಾದದ ಸೇರ್ಪಡೆಯಾಗಲೇಬೇಕೆಂಬುದು ನಿರ್ವಿವಾದವಾದುದು.

ಹಾಗಾದರೆ, ಸಾಮ್ಯವಾದೀಯ ಕೃಷಿವ್ಯವಸ್ಥೆ ಎಂತಹದು? ವಿಶಾಲ ಕ್ಷೇತ್ರಗಳಲ್ಲಿ ಸಹಕಾರಪದ್ಧತಿಯಿಂದ ಕೃಷಿ ನಡೆಸುವುದೆಂದರೇನು?

ನಮಗೆಲ್ಲ ಭಾರತದ ಹಳೆಯ ಗ್ರಾಮವ್ಯವಸ್ಥೆಯು ತಕ್ಕಮಟ್ಟಿಗೆ ಗೊತ್ತು. ಅಲ್ಲಿರುವುದು ಅತ್ಯಂತ ಪುರಾತನದ ಕೃಷಿಸಂಘಟನೆಯಲ್ಲ. ಅಥವಾ ಭಾರತದಲ್ಲಿ ಸಾರ್ವತ್ರಿಕವಾಗಿದ್ದ ಕೃಷಿವಿಧಾನವೂ ಅಲ್ಲ. ಮನುಸ್ಮೃತಿಯಲ್ಲಿ ಅದನ್ನು ದ್ದೇಶಿಸಿ ಉಲ್ಲೇಖವೇ ಇಲ್ಲ. ನಮ್ಮ ಹಿಂದುಸ್ಥಾನದ ಇತಿಹಾಸದಲ್ಲಿ ಒಂದು ದೊಡ್ಡ ಪರ್ವ; ವಿಶಾಲವಾದ ಕೆಲವು ಭೂಭಾಗಗಳಲ್ಲಿ ಆಗ ಈಗಿನ ಹಳ್ಳಿಯ ಮಾದರಿಯ ಚಿಕ್ಕ ವಸತಿಗಳಿದ್ದವು. ಅವುಗಳು ಹೇಗೆ ಉಂಟಾದವೆಂಬುದು ಹಾಗಿರಲಿ. ಅವುಗಳಲ್ಲಿ ಸಾಮೂಹಿಕ ಒಡೆತನದ ಮತ್ತು ಕೆಲವು ಕಾಲ ಸಾಮೂಹಿಕ ಸಾಗುವಳಿಯ ಹೊಲಗಳಿದ್ದವೆಂಬುದರಲ್ಲಿ ಅನುಮಾನವಿಲ್ಲ. ಮದ್ರಾಸ್ ಪ್ರಾಂತದಲ್ಲಿ ಮೊನ್ನೆ ಮೊನ್ನೆಯ ವರೆಗೂ ಅಂತಹ ಹಳ್ಳಿಗಳಿದ್ದವು. ಪ್ರಾಚೀನ ಪದ್ಧತಿಯ ಸ್ಫೂರ್ತಿಗನುಸಾರವಾಗಿಯೇ ಸಾಮ್ಯವಾದದ ಆದರ್ಶವಿರುವುದು. ಸಾಮ್ಯವಾದದ ಮೇರೆಗೆ ನಿರ್ಮಾಣವಾಗುವ ಕೃಷಿಯ ಘಟಕವಾದ ಹಳ್ಳಿಯು ಸಾಲ್ಕೂ ನಿಟ್ಟಿನಿಂದ ಆವೃತವಾದ ಒಂದು ಪುಟ್ಟ ಆರ್ಥಿಕ ಘಟಕವಲ್ಲ. ಅದರೆ ವಿಶಾಲವಾದ ಆರ್ಥಿಕ ವ್ಯವಸ್ಥೆಯಲ್ಲಿ ದುಡಿದು ಸಹಕರಿಸುವ ಒಂದು ಅಂಗ.

ಈ ಕಾಲದಲ್ಲಿ ಸಾಮ್ಯವಾದವು ರಶಿಯಾದಲ್ಲಿ ಮಾತ್ರ ರೂಪಗೊಳ್ಳುತ್ತಿದೆ. ಅಲ್ಲಿ ಕೃಷಿಪದ್ಧತಿಯ ಸಮಾಜೀಕರಣದ ನಿಷ್ಠಾಪೂರ್ಣ ಪ್ರಯತ್ನಗಳಿಗೆ ಹೊಗಳಿಕೆಗೆ ಯೋಗ್ಯವಾದ ಗೆಲವು ದೊರಕಿದೆ. ಅಲ್ಲಿಯ ಒಕ್ಕಲುತನವೂ ನಮ್ಮದರಂತೆಯೇ ಪ್ರಾಥಮಿಕವಾದುದು, ಪರಂಪರಾಪ್ರಧಾನವಾದುದು; ಕ್ಷುದ್ರಭಾವದ, ಅಜ್ಞಾನ ಆಲಸ್ಯಗಳಿಂದ ತುಂಬಿದ ಕಮತಿಗರಿಂದ ( Peasants ) ಕೂಡಿದುದು. ಅಲ್ಲಿ ಈಗ ಎರಡು ಮೂರು ತರದ ಸಾಮ್ಯವಾದಾತ್ಮಕ ಕೃಷಿ ವಿಧಾನಗಳು ತಲೆದೋರಿವೆ.

ಅಲ್ಲಿ ಕಂಡುಬರುವ ಸಹಕಾರ ಪದ್ಧತಿಯ ಒಕ್ಕಲುತನವು ಸಾಮ್ಯವಾದದ ದೃಷ್ಟಿಯಿಂದ ಕೆಳಗಿನ ತರಗತಿಯದು. ಈ ಮೊದಲನೆಯ ತರದ ಕೃಷಿಕ್ರಮದಲ್ಲಿ ವ್ಯಕ್ತಿಗತ ಜಮೀನುಗಳು ಉಳಿಯುವುವು. ಆದರೆ ದೊಡ್ಡ ವರ್ಗದಾರರ ಮತ್ತು ಬಂಡವಾಳಗಾರರಾದ ಒಕ್ಕಲಿಗರ ಒಡೆತನದಲ್ಲಿದ್ದ ಭೂಮಿಗಳನ್ನು ಪುನರ್ವಿಭಾಗಿಸಿ ಹಂಚುವುದರಿಂದ ಇದರಲ್ಲಿ ಕೆಲಮಟ್ಟಿನ ಸಮಾನತೆಯು ತೋರುವುದು. ಮೊದಲಿನ ಕೃಷಿಸಾಮಗ್ರಿ, ಕುದುರೆ ಎತ್ತು ಮುಂತಾ

ದವುಗಳು ಸ್ವಂತ ಸೊತ್ತಾಗಿ ಉಳಿಯುವುವು. ಆದರೆ ಸಾಗುವಳಿಗಾಗಿ ಎಲ್ಲ ಹೊಲಗಳನ್ನು ಕೂಡಿಸಿ ಎಲ್ಲರೂ ಜೊತೆಯಲ್ಲಿ ದುಡಿದು ಬೆಳೆಗಳನ್ನೆತ್ತುವರು. ಒಟ್ಟಿಗೆ ತಗಲಿದ ವೆಚ್ಚವನ್ನು ಹುಟ್ಟುವಳಿಯಿಂದ ಕಳೆದು ಮಿಕ್ಕುದನ್ನು ಆಯಾ ಹೊಲದ ಅಳತೆ ಮತ್ತು ಆವನವನ ದುಡಿತ ಇವುಗಳ ಮೇರೆಗೆ ಪಾಲು ಮಾಡಿ ಕೊಳ್ಳುವರು.

ಇದು ಸಾಮ್ಯವಾದೀಯ ಜೀವನದಲ್ಲಿ ಪ್ರಥಮ ಪಾಠ. ಇದು ಸಂಘ ಬುದ್ಧಿಯನ್ನು ಬೆಳೆಸುವುದು, ಹುಟ್ಟುವಳಿಯನ್ನು ಹೆಚ್ಚಾಗಿಸುವುದು. ಇದರಿಂದ ಒಕ್ಕಲಿಗರಲ್ಲಿ ಸಂಘಜೀವನ, ಸಾಂಘಿಕ ಕಾರ್ಯಗಳ ಬಗೆಗೆ ಹೆಚ್ಚು ಪ್ರೀತ್ಯುತ್ಸಾಹಗಳುಂಟಾಗುವುವು.

ಸಾಂಘಿಕ ಒಕ್ಕಲುತನವನ್ನು ಕೈಕೊಳ್ಳುವುದೇ ಮುಂದಿನ ಹೆಜ್ಜೆ. ಇಲ್ಲಿ ಸ್ವಂತ ಆಸ್ತಿಯೆಂಬುದು ಯಾರಿಗೂ ಉಳಿಯುವುದಿಲ್ಲ. ಹುಟ್ಟುವಳಿಯ ಪಾಲುಗಾರಿಕೆಯು ಮಾತ್ರ ಒಬ್ಬೊಬ್ಬನು ಪಡುವ ಶ್ರಮದ ದೃಷ್ಟಿಯಿಂದಲೆ ಮಾಡಲ್ಪಡುವುದು. ಒಮ್ಮೊಮ್ಮೆ ಆತನ ವಾಡಿಕೆಗಿಂತ ಹೆಚ್ಚಿನ ಆವಶ್ಯಕತೆಗಳನ್ನು ಸಹ ಪಾಲು ಮಾಡುವಾಗ ಲಕ್ಷ್ಯದಲ್ಲಿ ತೆಗೆದುಕೊಳ್ಳಲಾಗುವುದು. ಸಾಂಘಿಕ ಕೃಷಿ (Collective farming)ಯ ಘಟಕವಾದ ಹಳ್ಳಿಯಲ್ಲಿ ಕೂಡ ಕಮತದ ಕೆಲಸದ ಆಯುಧಗಳು ಸ್ವಂತದ ಸೊತ್ತಾಗಿರಬಲ್ಲವು. ಹಾಗೆಯೇ ಕುದುರೆ ದನ ಕೋಣ ಹಂದಿಗಳೂ ವೈಯಕ್ತಿಕ ಸೊತ್ತಾಗಿ ಉಳಿಯಬಲ್ಲವು. ಹೀಗೆ ಜೀವನವು ಹೆಚ್ಚು ಹೆಚ್ಚು ಸಾಂಘಿಕವಾಗತೊಡಗಿದೆ. ಆದರೆ ಅದರ ಇನ್ನೂ ಎಷ್ಟೋ ಅಂಶವು ವಿಂಗಡವಾಗಿಯೇ ಉಳಿದಿದೆ.

ಈ ಮೆಟ್ಟಲನ್ನು ದಾಟಿದೊಡನೆ Communeಗಳ ಉದಯ. ಅಲ್ಲಿ ಅತ್ಯಂತ ಹೆಚ್ಚು ಪ್ರಮಾಣದ ಸಂಘಜೀವನವಿದೆ.

ಸಾಮ್ಯವಾದದ ಸಾಹಸದಿಂದ ನಡೆದ ರಶಿಯಾದ ಈ ಕೃಷಿಕ್ರಾಂತಿಯನ್ನುದ್ದೇಶಿಸಿ ಡಾಕ್ಟರ್ ಶರ್‌ವುಡ್ ಎಡಿಯು ತನ್ನ ಇತ್ತೀಚೆಗಿನ ಗ್ರಂಥವೊಂದರಲ್ಲಿ, "**ಇಂದು ರಶಿಯಾದ ಸಾಮ್ಯವಾದೀ ಸಮಾಜವು ಜಗತ್ತು ಈವರೆಗೆ ಕಾಣದ ಕೃಷಿಕ್ರಾಂತಿಯ ಮಧ್ಯದಲ್ಲಿದೆ. ಹಿಂದುಳಿದ ಕೃಷಿಕ್ರಮ ಮತ್ತು ಗ್ರಾಮ-ನಗರಗಳ ಸಂಬಂಧಚ್ಛೇದ ಎಂಬ ಪ್ರಮುಖ**

ಸಮಸ್ಯೆಯು ರೋಮನ್ ಸಾಮ್ರಾಜ್ಯದ ಪತನಕಾಲದಿಂದ ಈ ವರೆಗೂ ಇದೆ. ನಾಲ್ಕೈವರೆ ವರ್ಷಗಳ ವರೆಗೆ ರಶಿಯಾದವರು ಪ್ರಾಥಮಿಕ ವರ್ಗದ ಕೃಷಿಪದ್ಧತಿಯುಳ್ಳ ದೇಶವನ್ನು ಆಧುನಿಕ ಔದ್ಯೋಗಿಕ ರಾಷ್ಟ್ರವನ್ನಾಗಿ ಮಾಡಲು ಪ್ರಯತ್ನಪಟ್ಟರು. ಜನರ ವಾಸಕ್ಕೆ ಯೋಗ್ಯವಾದ ಭೂಭಾಗದ ಆರನೇ ಒಂದಂಶದ ಭಾಗದಲ್ಲಿ ಸುಮಾರು ೧೦ ಕೋಟಿ ಒಕ್ಕಲಿಗರಿರುವಲ್ಲಿ—ದೇಶದ ತುಂಡು ಹೊಲಗಳನ್ನೆಲ್ಲ ಜೋಡಿಸಿ ದೊಡ್ಡ ಪ್ರಮಾಣದ ಸಾಂಘಿಕ ಕ್ಷೇತ್ರಗಳನ್ನಾಗಿ ವಿಭಾಗಿಸಿ ಯಾಂತ್ರಿಕ ಸಾಧನಗಳಿಂದ ಸಾಗುವಳಿ ಮಾಡಿ ಅವುಗಳ ಮೇಲೆ ಸಾಮಾಜಿಕ ಒಡೆತನವನ್ನು ನಡೆಸುವುದೆಂದರೆ ಸಾಮಾನ್ಯ ಕಾರ್ಯ ವಲ್ಲ. ಆದರೆ ಅಸಾಧ್ಯವೆಂದು ತೋರುವ ಈ ಕೆಲಸವನ್ನು ಸಹ ಕೊನೆ ಗಾಣಿಸಿದರೆಂದೇ ಹೇಳಬೇಕು. ಗ್ರಾಮಗಳ ಸಮಸ್ಯೆಯ ಪರಿಹಾರ ವಾಯಿತು. ರಶಿಯಾದವರು ಒಕ್ಕಲಿಗರ ನೆರವಿನಿಂದ ಈ ಕೃಷಿ ಸಂಗ್ರಾಮವನ್ನು ಮಾಡಿ ಗೆಲವು ಪಡೆದರು. ರಶಿಯಾ ದೇಶವು ಈ ಸಾಂಘಿಕ ಕ್ಷೇತ್ರಪದ್ಧತಿಯಿಂದ (Collectivization) ಎಂದೂ ಹಿಂದಿರುಗದು.

ಈಗ ಎರಡು ವರ್ಷಗಳ ಹಿಂದಿನ ವರೆಗೆ ಭೂಕ್ಷುಧೆಯುಳ್ಳ ೨ ಕೋಟಿ ವೈಯಕ್ತಿಕ ಕೃಷೀವಲರು ಸಾಮ್ಯವಾದವನ್ನು ಪ್ರತಿಭಟಿಸು ತ್ತಿದ್ದರು. ಒಂದಾನೊಂದು ದಿನ ಅವರು ರಶಿಯಾದ ಈ ಸಾಮ್ಯ ವಾದಾತ್ಮಕ ಸರಕಾರವನ್ನು ಕಿತ್ತೊಗೆಯಬಹುದೆಂಬ ಗಂಡಾಂತರದ ಹೆದರಿಕೆ ಇದ್ದೇ ಇತ್ತು. ಔದ್ಯೋಗಿಕ ಕೆಲಸಗಾರರ ತರುವಾಯ ಒಕ್ಕಲಿಗರೇ ಈಗ ಹೆಚ್ಚಿನ ಪ್ರಮಾಣದಲ್ಲಿ ಸಾಮ್ಯವಾದಕ್ಕೆ ಸೇರಿದ ವರ್ಗದವರು. ಈ ಮಹಾಕಾರ್ಯವನ್ನು ಸಾಧಿಸುವುದರಲ್ಲಿ ಎಷ್ಟು ಅವಸರವಾಗಿದ್ದರೂ ಎಷ್ಟು ತಪ್ಪುಗಳಿದ್ದರೂ ಇದನ್ನು ಇತಿಹಾಸದಲ್ಲಿ ಮಹಾಸಿದ್ಧಿಯೆಂದೇ ಉಲ್ಲೇಖಿಸುವರು” ಎಂಬುದಾಗಿ ಬರೆದಿರುವರು.

ಇದು ರಶಿಯಾದ ಸಮಾಜವಾದವು ಸಾಧಿಸಿದ ಸಿದ್ಧಿ. ಆದರೆ ಭಾರತದ ಗತಿಯೇನು? ನಮ್ಮಲ್ಲಿ ನೆರವೇರಿಸಲು ಬಾರದ ಅಂಶಗಳು ಈ ಸಾಮ್ಯ

ವಾದೀಯ ಕೃಷಿಕ್ರಮದಲ್ಲಿ ಯಾವುವು ? ರಷಿಯದವರು ಅಸಾಧ್ಯವಾದುದೆಂಬುದನ್ನು ಸಾಧಿಸಿರುವರೆಂದ ಬಳಿಕ ನಾವೇಕೆ ಸಾಧಿಸಲಾರೆವು ? ಎಲ್ಲರೂ ಕೂಡಿ ಕೆಲಸ ಮಾಡುವುದಕ್ಕೂ ಜೀವನ ಸೌಕರ್ಯಗಳನ್ನು ತಮ್ಮೊಳಗೆ ಪಾಲು ಮಾಡಿಕೊಳ್ಳಲಿಕ್ಕೂ ನಮ್ಮ ಒಕ್ಕಲಿಗರು ರಷಿಯಾದವರಿಗಿಂತ ಹೆಚ್ಚು ಹೇಸುವರೆಂದು ತೋರಬರುವುದಿಲ್ಲ. ಅದಲ್ಲದೆ

**" ಸಹನಾವವತು ಸಹನೌ ಭುನಕ್ತು ಸಹವೀರ್ಯಂ ಕರವಾವಹೈ।**
**ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ ॥ "**

ಈ ಉಪನಿಷತ್ತಿನ ಮಂತ್ರದ ಅರ್ಥವಾದರೂ ಏನು ಸಾರುವುದು ?

ನಾವು ರಷಿಯದನ್ನು ಅವಸರಪಡುವುದು ಬೇಡ; ಸಾವಕಾಶವಾಗಿ ಸಾಗೋಣ. ನಮಗೆ ಬಲುಮೆಯ ಬಳಕೆ ಬೇಡ. ಉದ್ಯಮ ಸಂಸ್ಥೆಗಳಂತೆ, ಒಕ್ಕಲುತನವನ್ನು ಬಲುಮೆಯಿಂದ ಸಮಾಜದ ಆಡಳಿತದಲ್ಲಿರಿಸುವುದು ನಮ್ಮ ಉದ್ದೇಶವಲ್ಲ. ಭಾರತೀಯ ಸಾಮ್ಯವಾದಿ ಪಕ್ಷವು ಹೀಗೆ ಪ್ರಚಾರವನ್ನೂ ಮಾಡುತ್ತಿಲ್ಲ. ಸಹಕಾರದ ಸಾಂಘಿಕ ಕೃಷಿಪದ್ಧತಿಯ ಬೆಳವಣಿಗೆಗೆ ತಕ್ಕ ಉತ್ತೇಜನೋತ್ಸಾಹಗಳನ್ನು ಕೊಡಬೇಕೆಂದು ಅದರ ಅಪೇಕ್ಷೆ. ಶಿಕ್ಷಣ, ಪ್ರಚಾರಕಾರ್ಯ, ಪ್ರದರ್ಶನ, ಧನಸಹಾಯ, ಪ್ರೋತ್ಸಾಹಕರವಾದ ಕಂದಾಯ ಮುಂತಾದವುಗಳಿಂದ ಇದನ್ನು ಸಾಧಿಸುವರು.

ಶ್ರಮವನ್ನುಳಿಸುವ ಯಾಂತ್ರಿಕ ಕೃಷಿಸಾಧನಗಳನ್ನು ನಾವು ಕಡಿಮೆ ಉಪಯೋಗಿಸಬಹುದು. ಏಕೆಂದರೆ, ನಮ್ಮ ನಾಡಿನಲ್ಲಿ ಜನಸಂಖ್ಯೆ ವಿಶೇಷವಾಗಿದ್ದು ಸಾಗುವಳಿಗೆ ಯೋಗ್ಯವಾಗಿ ಮಾಡಬಹುದಾದ ಭೂಮಿ ರಷಿಯಾದಷ್ಟಿಲ್ಲ. ನಮ್ಮ ಈಗಿನ ಕಾರ್ಯಕ್ಷಮವಲ್ಲದ ನೇಗಿಲನ್ನು ಇನ್ನು ಮುಂದೆಯೂ ಇಟ್ಟುಕೊಳ್ಳಬೇಕೆಂದಿಲ್ಲ. ಆದರೆ ಉದ್ಯಮಗಳು ಬೆಳೆದು ಅವುಗಳಲ್ಲಿ ಹಳ್ಳಿಯ ನಿರುದ್ಯೋಗಿಗಳಾದ ಹೆಚ್ಚಿನ ಜನರಿಗೆಲ್ಲ ಕೆಲಸ ದೊರೆಯುವವರೆಗೆ ದೊಡ್ಡ ದೊಡ್ಡ ಟ್ರ್ಯಾಕ್ಟರುಗಳು, ಕೊಯ್ಯುವ ಕಟ್ಟುವ ಯಾಂತ್ರಿಕ ಸಾಮಗ್ರಿಗಳು ನಮಗೆ ಬೇಕಾಗಿಲ್ಲ. ಹಳ್ಳಿಗಳಿಗೆ ಮೊದಲು ವಿದ್ಯುತ್ತಿನ ದೀಪಗಳನ್ನು ಪೂರೈಸುವೆವು. ವಾಹನ ಸೌಲಭ್ಯವನ್ನುಂಟು ಮಾಡುವೆವು. ರೇಡಿಯೋಗಳ

( ಧ್ವನಿಪ್ರಸಾರಕ ಯಂತ್ರಗಳ ) ವ್ಯವಸ್ಥೆಯನ್ನು ಮಾಡುವೆವು. ನಾವು ಪಾಶ್ಚಾತ್ಯರ ಅನುಕರಣವನ್ನು ಮಾಡುತ್ತೇವಂತೆ. ಅನುಕರಣ ಮಾಡಬೇಕೆಂದು ನಾವು ಉದ್ಯುಕ್ತರಾಗಿಲ್ಲ. ನಮ್ಮ ಬಯಕೆ ಅಧ್ಯಯನ ಮಾಡುವುದು.

ರಶಿಯಕ್ಕಿಂತ ನಾವು ಕಡಿಮೆ ತಪ್ಪುಗಳನ್ನು ಮಾಡಬೇಕು. ಜಾಣತನದಿಂದ ವರ್ತಿಸಿದರೆ ತಪ್ಪುಗಳಾಗಲಿಕ್ಕಿಲ್ಲ. ಕೆಲಸವೆಲ್ಲ ಆದಬಳಿಕ, ಅದನ್ನು ಹಾಗೆ ಮಾಡಬೇಕಿತ್ತು ಹೀಗೆ ಮಾಡಬೇಕಿತ್ತು ಎಂದು ಜಂಬ ಕೊಚ್ಚುವುದು ಬಹು ಸುಲಭ. ರಶಿಯದವರು ತಮ್ಮ ತಪ್ಪುಗಳನ್ನು ಎಲ್ಲರಿಗಿಂತ ಮುಂಚೆ ತಾವೇ ಕಂಡುಕೊಂಡರು. ಇದಲ್ಲದೆ ಅವರು ಬೇಕೆಂತ ಆ ತಪ್ಪುಗಳನ್ನು ಮಾಡಿರಲಿಲ್ಲ. ಶಾಸ್ತ್ರೀಯ ಸಂಶೋಧನದ ಪ್ರಯೋಗಾಲಯಗಳಲ್ಲಿ ಟೆಸ್ಟ್-ಟ್ಯೂಬು ( ಪರೀಕ್ಷಾ-ನಳಿಕೆ )ಗಳನ್ನುಪಯೋಗಿಸಿ ಕೆಲಸ ನಡೆಸಿದಾಗ ತಪ್ಪುಗಳಾಗುತ್ತವೆಂದ ಬಳಿಕ ಕೋಟಿಗಟ್ಟಲೆ ಜನರ ನಡುವೆ ಪೃಥ್ವಿಯ ಆರನೇ ಒಂದಂಶ ಭಾಗದ ಮೇಲೆ ನಡೆಯುವ ಇಂತಹ ಪ್ರಯೋಗಗಳಲ್ಲಿ ಪ್ರಮಾದಗಳಾಗುವುದು ಆಶ್ಚರ್ಯವಲ್ಲ. ಅವುಗಳನ್ನು ಕಡಿಮೆಯಾಗಿಸುವುದು ಇನ್ನೂ ಕಷ್ಟಕರ.

ಆದರೆ ಅವರ ತಪ್ಪುಗಳು, ಅವರ ಗೆಲವನ್ನೂ ಅವರಿಂದ ಕಲಿತುಕೊಳ್ಳಬಹುದಾದ ಪಾಠಗಳನ್ನೂ ನಮ್ಮಿಂದ ಮರೆಮಾಡದಿರಲಿ. ದಿಂಬಿಗೊರಗಿ ಜಂಬ ಕೊಚ್ಚುವ ತತ್ತ್ವಜ್ಞಾನಿಗಳೆಂಬವರು ಮನಬಂದಂತೆ ಮಾತನಾಡಲಿ. ಆದರೆ ಒಂದು ಧ್ಯೇಯವನ್ನಿಟ್ಟುಕೊಂಡು ಅದಕ್ಕಾಗಿ ದುಡಿಯಬೇಕೆಂದಿರುವ ನಮಗೆ, ರಸಿಯಾದವರು ಎದೆಗಾರಿಕೆಯಿಂದ ಅನುಷ್ಠಾನ ಮಾಡುತ್ತಿರುವ ನವಜೀವನದ ಮಹಾತತ್ತ್ವವೊಂದೇ ಅಮೌಲ್ಯವಾಗಿ ತೋರುತ್ತದೆ.

ನಮ್ಮ ನಾಡಿನಲ್ಲಿ ಸುತ್ತಾಡುವ, ತೊಡಕಿನ ಹಾಗೂ ಸ್ವಾರ್ಥ ವೃತ್ತಿಯ ಮನುಷ್ಯನೊಬ್ಬನು "ಸಾಮ್ಯವಾದಿಗಳು ಒಕ್ಕಲಿಗರಿಂದ ಹೊಲಗಳನ್ನೆಲ್ಲ ಕಸಿದುಕೊಳ್ಳುವರು" ಎಂಬದಾಗಿ ಹರಟುತ್ತಿರುತ್ತಾನೆ. ಸಮುದ್ರದಾಚೆಗೆ ಸಾಮ್ಯವಾದಿಗಳ ದ್ವೀಪವೊಂದಿಲ್ಲ. ಇದ್ದರೆ ಒಕ್ಕಲಿಗರಿಂದ ಕಸಿದುಕೊಂಡ ಭೂಮಿಗಳನ್ನೆಲ್ಲ ಅಲ್ಲಿ ಶೇಖರಿಸಿಡಬಹುದಿತ್ತು. ಹೊಲಗಳನ್ನು ಕೀಳಲು ಬರುವಂತಿಲ್ಲ. ಅವುಗಳನ್ನು ಮತ್ತೆ ಒಕ್ಕಲಿಗರಿಗೆ ಕೊಡಲಾಗುವುದು. ಅವರು

ಆವುಗಳನ್ನು ಉತ್ತು ಬಿತ್ತುವರು. ಸಮಾಜಕ್ಕೆಲ್ಲ- -ಮುಖ್ಯವಾಗಿ ಒಕ್ಕಲಿಗರಿಗೆ—ಹೆಚ್ಚು ಜೀವನ ಸೌಕರ್ಯಗಳು ಸಿಕ್ಕುವಂತೆ ಕೃಷಿವ್ಯವಸ್ಥೆಯನ್ನು ಹೇಗಿಡಬೇಕೆಂಬುವೆ ದೊಡ್ಡ ಪ್ರಮೇಯ.

ಒಂದು ಹಿಡಿ ಜನರ ಹಿತದ ಬದಲು ಇಡಿ ನಾಡಿನ ಹಿತವೇ ನಮ್ಮ ಗುರಿಯಾಗಬೇಕೆಂದು ನಮ್ಮ ಸೂಚನೆ. ಹೊಲಗಳನ್ನು ಸಹಕಾರದಿಂದ ಸಾಗುವಳಿ ಮಾಡಿದರೆ ಹಿಂದುಸ್ಥಾನದ ಹಳ್ಳಿಗರಿಗೆ ದೊಡ್ಡದಾದ ಒಂದು ವರವು ದೊರೆತಂತಾದೀತೆಂದು ನಾನು ಈ ಮುಂಚೆಯೇ ಸ್ಪಷ್ಟಪಡಿಸಿದ್ದೇನೆ. ಹೊಲಗಳ ಮೇಲೆ ಸಾಂಘಿಕವಾದ ಒಡೆತನವಿದ್ದರಂತೂ ಅವರ ಸುಖಕ್ಕೆ ಮೇರೆಯಿಲ್ಲ. ಹಳ್ಳಿಯು ಈಗಿನ ಹೀನದೀನ ಸ್ಥಿತಿಯಿಂದ ಬಿಡುಗಡೆ ಹೊಂದಿ, ಹಿಂದೂ ಚರಿತ್ರೆಯಲ್ಲಿ ಎಂದೂ ಕಾಣದ ನಾಗರಿಕತೆ ಮತ್ತು ಊರ್ಜಿತಾವಸ್ಥೆಗಳನ್ನು ಪಡೆಯುವುದು.

ಈ ವಿಷಯವನ್ನು ಇಲ್ಲಿಗೇ ಮುಗಿಸುವ ಮೊದಲು ಇದಕ್ಕೆ ನಿಕಟವಾಗಿ ಸಂಬಂಧಿಸಿರುವ ಇನ್ನೊಂದು ಸಮಸ್ಯೆಯನ್ನು ಎತ್ತುವೆನು. ಕಾಂಗ್ರೆಸ್ ಕೆಲಸಗಾರರಲ್ಲಿ ಹಳ್ಳಿಗೆ ಮತ್ತು ಅದನ್ನು ಸಂಬಂಧಿಸುವ ಎಲ್ಲ ವಿಷಯಗಳಿಗೆ ವಿಶೇಷ ಗಮನವಿಡುವ ಒಂದು ದೊಡ್ಡ ಪಂಗಡವುಂಟು. ಸಾಮ್ಯವಾದಿಗಳು ಯಂತ್ರ ಪಕ್ಷದವರೆಂದು ಅವರು ತಿಳಿದುಬಿಟ್ಟಿದ್ದಾರೆ. ಯಂತ್ರಗಳ ಪ್ರವೇಶದಿಂದ ಹಳ್ಳಿಗಳ ಸುಲಿಗೆಯು ಒತ್ತರದಿಂದ ಸಾಗುವುದು; ಅಲ್ಲಿಯ ಸ್ವಯಂಪೂರ್ಣವಾದ ಸುಂದರ ಜೀವನವು ಹಾಳಾಗುವುದು; ಪರಾವಲಂಬಿ ನಗರಗಳು ಹೆಚ್ಚಾಗುವುವು; ಆದುದರಿಂದ ಸಾಮ್ಯವಾದಿಗಳನ್ನು ಪ್ರತಿಭಟಿಸುವುದು ತಮ್ಮ ಕರ್ತವ್ಯವೆಂದು ಅವರು ಗಟ್ಟಿ ಮಾಡಿಕೊಂಡಿದ್ದಾರೆ.

ಮೊದಲು ನಗರಗಳ ಪಟ್ಟಿಗೆ ಈ ಗೆಳೆಯರು ಹೇಳುವುದನ್ನೆಲ್ಲ ಬಿಚ್ಚು ಮನದಿಂದ ಒಪ್ಪಿಕೊಳ್ಳುವೆ. ಜನರ ದಟ್ಟಣೆ, ಕಿವಿ ಗಡಚಿಕ್ಕುವ ಗಲಭೆ, ಹೊಲಸಿನ ಕೊಳಚೆ, ಹೇಸಿಗೆ, ಬಡವರ ನಾರುವ ಕೇರಿಗಳು (ಹೊಲಗೇರಿ) ಇವನ್ನೆಲ್ಲ ನೋಡಿದರೆ ಪಟ್ಟಣಗಳ ವಿಷಯಕ್ಕೆ ಅಸಡ್ಡೆಯುಂಟಾಗುವುದು. ಇವು ಸದ್ಬುದ್ಧಿಯ ಸಾತ್ವಿಕ ಜೀವನದ ಹಗೆಗಳು, ಗಂಡಾಂತರಗಳು, ದಬ್ಬಾಳಿಕೆಯ ದೌಡುಗಳು ಎಂಬದಾಗಿ ಮನಸ್ಸು ಹೇಸುವುದು. ಪಟ್ಟಣವು, ಅದರಲ್ಲಿರುವ ಹಲವು ಜನರಿಗೆ ಭೀಕರವಾದ ವಾಸಸ್ಥಾನವೆಂದು ತೋರುವುದು. ಅದರಲ್ಲಿ

ನಾಟ್ಯಗೃಹವೇ ಮುಂತಾದ ಮನರಂಜನೆಯ ಸ್ಥಾನಗಳಿರುವುದು ನಿಜ. ಆದರೆ ಇವೆಲ್ಲ ದಣಿದ ದೇಹಕ್ಕೆ ಮತ್ತು ಬಳಲಿದ ಸ್ನಾಯುಗಳಿಗೆ ಮಬ್ಬನ್ನುಂಟು ಮಾಡುವ ಉಪಾಯಗಳೇ ಹೊರತು ಆತ್ಮವನ್ನು ಸೌಂದರ್ಯಾನಂದಗಳಿಂದ ತಣಿಸಿ ಅರಳಿಸುವ ಪೌರುಷವನ್ನು ಚೇತನಗೊಳಿಸಿ ಬೆಳೆಸುವ ಸಾಧನಗಳಲ್ಲ.

ಅದಲ್ಲದೆ ಪಟ್ಟಣಗಳು ಕೊಬ್ಬಿದುದು ಬರಿಯ ಹಳ್ಳಿಗಳ ಸುಲಿಗೆಯಿಂದಲ್ಲ. ಅವು ಪಟ್ಟಣದ ದುಡಿತದಾಳುಗಳನ್ನೂ ಸುಲಿದಿರುವುವು. ಈ ಸುಲಿಗೆಯ ಬಗೆಯು ಹಳ್ಳಿ–ಪಟ್ಟಣಗಳಲ್ಲಿ ಅಸ್ವಾಭಾವಿಕವಾದ ಹಗೆಯನ್ನುಂಟುಮಾಡಿದೆ. ಇದರಿಂದ ಹಳ್ಳಿಗಳ ಪಾಡೇ ಕೆಟ್ಟಿದೆ. ಜ್ಞಾನ, ಕಲಾ, ವಿಲಾಸ, ಜೀವನ ಸೌಕರ್ಯ ಮುಂತಾದವುಗಳು ಪಟ್ಟಣಗಳಲ್ಲಿ ಮಾತ್ರ ಬೆಳೆದು ನಿಂತಿವೆ. ಹಳ್ಳಿಗಳ ಕಡೆಗೆ ಯಾರೂ ಕಣ್ಣು ಹಾಕದಿರುವುದರಿಂದ ಅವುಗಳು ಹಿಂದುಳಿದಿವೆ. ಹಳ್ಳಿಗಳಿಗೂ ಹಳ್ಳಿಗಳ ಮೂಲಕ ಬೆಳೆದ ಪಟ್ಟಣಗಳಿಗೂ ಬಹಳ ವ್ಯತ್ಯಾಸವಿದೆ.

ಇದೆಲ್ಲ ನಿಜವಾಗಿದ್ದರೂ ಸಾಮ್ಯವಾದದ ಆಡಳಿತದಲ್ಲಿ ನಾಡಿನಲ್ಲಿ ಈ ಬಗೆಯ ವಿಪರೀತ ಪರಿಸ್ಥಿತಿಯನ್ನು ಪ್ರೋತ್ಸಾಹಿಸಲಾಗುವುದೆಂದು ತಿಳಿಯುವುದು ಶುದ್ಧ ತಪ್ಪು. ಸಾಮಾಜಿಕ ಸೌಧದ ನಿರ್ಮಾಣಕ್ಕೆ ಸಾಮ್ಯವಾದವು ಶಿಲ್ಪವಿದ್ಯೆಯಿದ್ದಂತೆ. ಸಮಾಜದಲ್ಲಿ ಸಾಮರಸ್ಯ ಸುಸಂಗತತೆಗಳನ್ನುಂಟು ಮಾಡುವುದೇ ಅದರ ಗುರಿ. ಸಾಮ್ಯವಾದೀಯ ಗ್ರಾಮದಲ್ಲಿ ಈಗಿನ ಗ್ರಾಮದ ಲಕ್ಷಣಗಳು ತೋರಲಿಕ್ಕಿಲ್ಲ. ಪಟ್ಟಣಗಳ ಮಾತೂ ಹಾಗೆಯೆ. ಈ ವೈಷಮ್ಯಗಳನ್ನು, ಈ ಆಂತರಿಕ ವಿರಸವನ್ನು ಇರಗೊಡುವುದು ಹಾಗಿರಲಿ; ಹೋರಾಡಿ ಅವುಗಳನ್ನೆಲ್ಲ ಕ್ರಮಪ್ರಕಾರವಾಗಿ ಹೋಗಲಾಡಿಸಲಾಗುವುದು.

ಸಾಮ್ಯವಾದಿಯು ಯಂತ್ರವನ್ನು ಅಪ್ಪಿಕೊಳ್ಳುವನೆಂಬುದು ನಿಜ. ಯಂತ್ರವು ಆವನ ಕಣ್ಣಿಗೆ ಸುಲಿಗೆಯ ಸಾಧನವೆಂದು ತೋರುವುದಿಲ್ಲ; ಮಾನವ ದೇಹವನ್ನು ಕಟ್ಟಿ ಗೋಳಾಡಿಸುವ ಕಂಬವೆಂದು ಕಾಣುವುದಿಲ್ಲ. ಅದು ಶ್ರಮಶಕ್ತಿಯ ಸ್ನೇಹಿತ. ಮಾನವನ ಶ್ರಮವನ್ನು ಉಳಿಸುವುದು. ಆತನ ದುಡಿತದ ಉತ್ಪಾದನ ಪ್ರಮಾಣವನ್ನು ಬೆಳೆಸುವುದು. ನೀರು-ಗಾಳಿಗಳನ್ನು ನಮಗಾಗಿ ಗೆಲ್ಲುವುದು.

ಯಂತ್ರಗಳು ನಗರದ ರಕ್ಕಸತನವನ್ನು ಹುಟ್ಟಿಸುವುವು, ಗ್ರಾಮವ್ಯವಸ್ಥೆಯನ್ನು ಹಾಳುಮಾಡಿ ನಿರುದ್ಯೋಗವನ್ನು ಹೆಚ್ಚಿಸುವುವು ಎಂಬ ಗ್ರಹಿಕೆ ತಪ್ಪು.

ಒಂದು ಹಿಡಿ ಜನರು ಸ್ವಂತ ಲಾಭಕ್ಕಾಗಿ ಯಾಂತ್ರಿಕ ಸಾಧನಗಳನ್ನು ಬಳಸಿದರೆ ಇಂತಹ ಮತ್ತು ಇದಕ್ಕೂ ದುಷ್ಟ ಪರಿಣಾಮವಾಗುವುದರಲ್ಲಿ ಸಂದೇಹವಿಲ್ಲ. ಕಾರ್ಯಕ್ಷಮವಾದ ವಿಪುಲ ಉತ್ಪಾದನಾಶಕ್ತಿಯುಳ್ಳ ಈ ಯಂತ್ರಗಳನ್ನು ಸಮಗ್ರ ದೇಶವು ಸಕಲ ಪ್ರಜೆಗಳ ಹಿತಕ್ಕಾಗಿ ಬಳಸಿದರೂ ಈ ತರವ ಪರಿಣಾಮಗಳಾಗುತ್ತವೆಂದು ತಿಳಿಯುವುದು ಮಹಾಮೂರ್ಖತನ.

ಸಾಮ್ಯವಾದದ ಆಡಳಿತದಲ್ಲಿ ನಗರಗಳ ನಿರ್ಮಾಣವು ಜನಸಂದಣಿಯಾಗದ ಬಗೆಯಲ್ಲಿ ಆಗುವುದು. ಏಕೆಂದರೆ ಉದ್ಯಮ ಕೇಂದ್ರಗಳನ್ನು ಅಲ್ಲೊಂದು ಇಲ್ಲೊಂದು ಎಂಬಂತೆ ಸ್ಥಾಪಿಸುವರು. ಆರ್ಥಿಕ ಯೋಜನೆಯನ್ನು ಭೌಗೋಲಿಕ ಮತ್ತು ಅಂಕೆಸಂಖ್ಯೆಗಳ ಸ್ಥಿತಿಯ ಮೇರೆಗೆ ಕೈಕೊಳ್ಳಲಾಗುವುದು. ಜಗತ್ತಿನ ಬಳಕೆ ತಪ್ಪಿ ಎಲ್ಲಿಯೋ ಮೂಲೆಯಲ್ಲಿರುವ ಕೆಲವು ಗುಡಿಸಲುಗಳ ಗುಂಪಾದ ಈಗಿನ ಹಳ್ಳಿಯು ಮರೆಯಾಗಿ, ಹೊರಜಗತ್ತಿನೊಡನೆ ಇಲೆಕ್ಟ್ರಿಕ್, ರೈಲ್ವೆ, ಟೆಲಿಫೋನ್, ರೇಡಿಯೊ, ವಿಶಾಲ ಮಾರ್ಗಗಳು, ಬಸ್ಸುಗಳು ಮುಂತಾದವುಗಳ ಮೂಲಕ ಸಂಬಂಧ ಬೆಳೆಯುವ ಪ್ರಗತಿಪರವಾದ ಸಾಂಘಿಕ ಜನವಸತಿಗಳು ತಲೆದೋರುವುವು. ಪಟ್ಟಣಗಳಂತೆ ಹಳ್ಳಿಗಳೂ ಔದ್ಯೋಗಿಕ ಉತ್ಪಾದನದ ಘಟಕಗಳಾಗುವುವು. ಹಳ್ಳಿಗಳಲ್ಲಿ ಸ್ಥಾನಿಕ ಸ್ವರಾಜ್ಯವಿರುವುದು; ಶಾಲೆಗಳು, ಕ್ರೀಡಾಕೇಂದ್ರಗಳು, ವಸ್ತುಪ್ರದರ್ಶನಾಲಯಗಳಿರುವುವು.

ಮುಂದಿನ ಕನಸುಗಳನ್ನು ವಾಚಕರ ಕಣ್ಣೆದುರಿಗಿಡುವುದಕ್ಕಿಂತ ಎಮ್. ಇಲಿನ್ ಎಂಬವರು 'Moscow has a plan' ಎಂಬ ಪುಸ್ತಕದಲ್ಲಿ ಬಣ್ಣಿಸಿದ ರಶಿಯಾದ ಈಗಿನ ಒಂದು ಹಳ್ಳಿಯ ಸುಂದರ ವರ್ಣನೆಯನ್ನೇ ಅವರು ಓದಿ ತಿಳಿದುಕೊಳ್ಳಲೆಂದು ಹೇಳುವುದು ಲೇಸು.

ಅದನ್ನೋದಿದರೆ, ಸಾಮ್ಯವಾದವು ಬರಿಯ ಕನಸಲ್ಲ, ಅದನ್ನು ಕಾರ್ಯರಂಗಕ್ಕಿಳಿಸಿ ತಮ್ಮ ನಾಡನ್ನು ಸುಖಸಂಪತ್ತುಗಳ ನೆಲೆವೀಡಾಗಿ ಮಾಡಬಹುದೆಂಬ ಮನವರಿಕೆಯಾಗುವುದು.

ಸಾಮ್ಯವಾದವು ಮಾನವನು ಕಂಡ ಅದ್ಭುತ ರಮಣೀಯವಾದ ಒಂದು ಕಣಸು (Vision). ಆದರೂ ಅದನ್ನು ದೃಶ್ಯಪ್ರಪಂಚಕ್ಕಿಳಿಸಬಹುದು. ಬುದ್ಧಿ

ಯಿಂದ ಬಗೆದು ಕಂಡುದನ್ನು ಕಣ್ಣಾರೆ ನೋಡಿ ಪಡೆಯಬಹುದು. ಅದು ಅಷ್ಟು ವ್ಯವಹಾರ್ಯ, ಅಷ್ಟು ಸುಲಭ. ಇದುವೆ ಸಾಮ್ಯವಾದದ ಅಗ್ಗಳಿಕೆ.

ಗ್ರಾಮ-ನಗರಗಳ ಸಮಸ್ಯೆಯನ್ನು ಬಗೆಹರಿಸಲೇ ಬೇಕಾದರೆ ಈ ತರದ ಹಾದಿಯೊಂದನ್ನು ಹಿಡಿಯಬೇಕು. ಗ್ರಾಮಗಳಿಂದ ನಗರಗಳಿಗೂ ನಗರಗಳಿಂದ ಗ್ರಾಮಗಳಿಗೂ ಪಲಾಯನ ಮಾಡಿದರೆ ಕೆಲಸವು ಕೈಗೂಡುವುದಿಲ್ಲ.

## ೧೦. ರಾಷ್ಟ್ರವು ಪ್ರಜೆಗಳಿಗೆ ಉದ್ಯೋಗವನ್ನೊದಗಿಸಬೇಕು ಇಲ್ಲವೆ ಅವಶ್ಯ ಉಪಜೀವನವನ್ನು ಕೊಡಬೇಕು

ಬಂಡವಾಳಗಾರಿಕೆಯ ರಾಷ್ಟ್ರಗಳಲ್ಲಿ ಅಥವಾ ಅದಕ್ಕೂ ಮುಂಚಿನ ರಾಷ್ಟ್ರಗಳಲ್ಲಿ ಜನರಿಗೆ ಉದ್ಯೋಗವು ಖಂಡಿತವಾಗಿ ದೊರೆಯುತ್ತಿತ್ತೆಂಬ ಕ್ಷೇಮವಿರಲಿಲ್ಲ. ಆದುದರಿಂದ ಜೀವನದ ಸುರಕ್ಷಿತತೆಯೂ ಇರಲಿಲ್ಲ. ಇನ್ನೂ ಸಾಗುವಳಿಯಾಗದಿರುವ ಭೂಮಿ ವಿಪುಲವಾಗಿರುವಾಗ ಸಶಕ್ತರಾದವರಿಗೆ ಸುರಕ್ಷಿತತೆಯ ಅಗತ್ಯವಿರಲಿಲ್ಲ. ಬರಬರುತ್ತ ಭೂಮಿಯು ಕಡಿಮೆಯಾಗಿ ಕೊನೆಗೆ ಸಿಕ್ಕದಂತಾಯಿತು, ಕೆಲಸವು ದೊರಕದಂತಾಯಿತು. ಆಗ ಮಾತ್ರ ಕಳವು ಸುಲಿಗೆಗಳನ್ನು ಮಾಡದಿದ್ದರೆ ಮಾನವನಿಗೆ ಬದುಕುವ ಆಸೆಯಿರಲಿಲ್ಲ. ಆದರೆ ಕಳವು ಸುಲಿಗೆಗಳನ್ನು ನಡೆಸುವಾತನು ನ್ಯಾಯಾಸನದೆದುರು ನಿಲ್ಲಿಸಲ್ಪಡುತ್ತಿದ್ದನು. ಕೂಳುಗೇಡಿಯಾಗಿ ಸತ್ತವನಿಗೆ ದೇವರೇ ಗತಿ.

ಈ ನಿರುದ್ಯೋಗ ಸಮಸ್ಯೆಯು ಹಿಂದೆ ಎಂದಿಗಿಂತಲೂ ಇಂದು ಭಯಂಕರವಾದ ಗಂಡಾಂತರವಾಗಿದೆ. ಔದ್ಯೋಗಿಕ ಯುಗವು ಕೇವಲ ತನ್ನ ಶ್ರಮ ಶಕ್ತಿಯನ್ನು ಮಾರಿ ಬಾಳಬಲ್ಲ ಒಂದು ವರ್ಗವನ್ನು ಹುಟ್ಟಿಸಿದೆ. ಆದರೆ ಅದಕ್ಕೆ ತಕ್ಕ ಉದ್ಯೋಗದ ವ್ಯವಸ್ಥೆಯನ್ನು ಮಾತ್ರ ಮಾಡಿಲ್ಲ. ದುಡಿತದಾಳು ಕೂಲಿಯನ್ನು ಹುಡುಕುತ್ತ ಇತ್ತಿಂದತ್ತ ಅಲೆಯಬೇಕು.

ಇತ್ತೀಚೆಗೆ ಕೂಲಿಕಾರರು ಕಾದಾಡತೊಡಗಿದರು. ಔದ್ಯೋಗಿಕ ಮುಗ್ಗಟ್ಟುಗಳು ನಿರುದ್ಯೋಗ ಸಮಸ್ಯೆಯನ್ನು ಎತ್ತಿ ತೋರಿಸಿದವು. ಆದುದರಿಂದ ಕೆಲವು ಆಧುನಿಕ ರಾಷ್ಟ್ರಗಳು ನಿರುದ್ಯೋಗ ವಿಮೆಯನ್ನೇರ್ಪಡಿಸಿರುವುವು. ನಮ್ಮ ಭಾರತದಲ್ಲಿ ಸಾಮ್ರಾಜ್ಯಪದದ ಪ್ರಭಾವದಿಂದ ಉದ್ಯಮ-ಕೃಷಿಗಳೆರಡಕ್ಕೂ ಅರ್ಧಾಂಗವಾಯುವಾಗಿ ನಿರುದ್ಯೋಗವು ಅತ್ಯಂತ ಕ್ರೂರರೂಪವನ್ನು

ತಾಳಿದೆ. ಸಾಮ್ಯವಾದವು ಈ ಪರಿಸ್ಥಿತಿಯನ್ನು ತಾಳಲಾರದು. ನ್ಯಾಯ ವಿವೇಕಗಳುಳ್ಳ ಯಾವ ರಾಜ್ಯಘಟನೆಯೂ ಲಕ್ಷಾವಧಿ ಜನರು ಕೂಳುಗೇಡಿಗಳಾಗಿ ಸಾಯುವುದನ್ನು ಸಹಿಸಲಾರದು. ಉದ್ಯೋಗದ ಅಥವಾ ಉಪಜೀವನದ ವ್ಯವಸ್ಥೆಯನ್ನು ಮಾಡುವುದು ಸರಿಯಾದ ಘಟನೆಯುಳ್ಳ ಪ್ರತಿಯೊಂದು ರಾಷ್ಟ್ರದ ಧರ್ಮವಾಗಿದೆ. ಭಾರತದಲ್ಲಿ ಸಾಮ್ಯವಾದೀಯ ಸರಕಾರವು ಸ್ಥಾಪಿತವಾದರೆ ಅದು ಮೊದಲು ಜನರ ಉಪಜೀವಿಕೆಯ ಪ್ರಶ್ನೆಯನ್ನೇ ಎತ್ತಿಕೊಳ್ಳುವುದು. ಜನತೆಗೆ ಮುಂಚೆ ಈ ಭದ್ರತೆಯ ನಂಬಿಕೆಯನ್ನೇ ಕೊಡುವುದು.

## ೧೧. ಶ್ರಮಶಕ್ತಿಗೆ ತಕ್ಕ ದುಡಿತವನ್ನು ಪ್ರತಿಯೊಬ್ಬನಿಂದ ತೆಗೆದುಕೊಂಡು ಅಗತ್ಯಕ್ಕೆ ತಕ್ಕ ಸಂಪತ್ತನ್ನೊದಗಿಸುವುದು.

ಇದುವೆ ಸಮಾಜವಾದದ ಅಂತಿಮ ಧ್ಯೇಯ. ಇದರ ಅರ್ಥವಿಷ್ಟೇ. ಸಾಮ್ಯವಾದವು ಪೂರ್ಣ ರೂಪವನ್ನು ಪಡೆದ ಬಳಿಕ ಪ್ರತಿಯೊಬ್ಬನೂ ಸಮಾಜಕ್ಕೋಸ್ಕರ ತನ್ನ ಕೈಲಾದಷ್ಟು ದುಡಿಯುವನು. ಕಾರಖಾನೆ, ಕರ್ಮಶಾಲೆ, ಹೊಲಗದ್ದೆ, ಶಾಲೆ, ಪ್ರಯೋಗಾಲಯ, ನಾಟ್ಯಗೃಹ ಮುಂತಾದವುಗಳಲ್ಲೆಲ್ಲ ಆತನು ಕೆಲಸ ಮಾಡುವನು. ಮತ್ತು ಒಟ್ಟು ಹುಟ್ಟುವಳಿಯಿಂದ ತನಗೆ ಅಗತ್ಯವಾದ ವಸ್ತುಗಳನ್ನು ಪಡೆಯುವನು. ಆತನು ಕೀಲು, ಮೊಳೆ, ಗುಂಡು ಸೂಜಿಗಳನ್ನು ತಯಾರು ಮಾಡುತ್ತಿದ್ದರೆ ಅವುಗಳನ್ನೇ ಬೇಕಾದಷ್ಟು ಪಡೆದು ಬಾಳುವನೆಂದು ಇದರ ಅರ್ಥವಲ್ಲ. ಅವನಿಗೆ ಅವುಗಳನ್ನು ಪಡೆದೇನು ಪ್ರಯೋಜನ ? ಅಲ್ಲದೆ ಇವುಗಳ ಮಾರಾಟಕ್ಕೆ ಪೇಟೆಗಳು ಆಗ ಇರುವುದಿಲ್ಲ. ತನ್ನ ಅವಶ್ಯಕತೆಗೆ ತಕ್ಕಷ್ಟು ತೆಗೆದುಕೊಳ್ಳುವುದೆಂದರೆ ಉಪಜೀವನಕ್ಕೆ ಬೇಕಾದ ಅನ್ನ ವಸ್ತ್ರ ಪುಸ್ತಕ ಮುಂತಾದ ವಸ್ತುಗಳನ್ನು. ಆಗ ಹಣವೆಂಬುದಿಲ್ಲ, ಕೂಲಿಯಿಲ್ಲ, ವರಮಾನದಲ್ಲಿ ಭೇದವಿಲ್ಲ.

ಸಮಾಜದ ಅಂತಿಮ ಸ್ಥಿತಿ ಹೀಗಾಗುವುದೆಂದು ತಿಳಿಯಬೇಕು. ಆಗ ವಿಪುಲತೆಯ ಸುಗ್ಗಿ. ಪ್ರತಿಯೊಬ್ಬನ ಬಳಕೆಗೆ ಬೇಕಾದ ವಸ್ತುಗಳು ಸಿದ್ಧವಾಗಿರುವುವೆಂಬುದು ನಿಶ್ಚಿತ. ಈ ಸ್ಥಿತಿಯನ್ನು ಮುಟ್ಟುವ ವರೆಗೆ ಬಳಕೆಯ ಮೇಲೆ ಕೆಲವು ನಿರ್ಬಂಧಗಳನ್ನು ಹಾಕುವುದು ಅವಶ್ಯವಾಗಬಹುದು.

ನೇರವಾಗಿ ಒಬ್ಬೊಬ್ಬನಿಗೆ ಹುಟ್ಟುವಳಿಯನ್ನು ಇಂತಿಷ್ಟೆಂದು ಪಾಲು ಮಾಡಿ ಕೊಡುವುದನ್ನಾಗಲಿ ವೇತನದ ಪರ್ಯಾಯ ಪದ್ಧತಿಯನ್ನಾಗಲಿ ಕೈಕೊಳ್ಳ ಬೇಕಾಗುವುದು.

ಈ ಪದ್ಧತಿಯ ವ್ಯವಹಾರ್ಯತೆಯ ಬಗೆಗೆ, ಹುಟ್ಟುವಳಿಯ ಹೆಚ್ಚಳದ ಕಾಲದಲ್ಲಿ ಸಹ ಇದು ಹೇಗೆ ಶಕ್ಯವೆಂಬ ಬಗೆಗೆ, ಅನುಮಾನಗಳು ತೋರ ಬಹುದು. ಇದು ವ್ಯವಹಾರಜ್ಞಾನದ ಮತ್ತು ಸಾಮಾಜಿಕ ಮನೋಗತಿಯ ಪ್ರಶ್ನೆ; ಆಚರಣೆಯಲ್ಲಿ ಅಷ್ಟು ಕಷ್ಟಕರವಲ್ಲ. ಸಾಮಾಜಿಕ ಪರಿಸ್ಥಿತಿಯ ವ್ಯತ್ಯಾಸದ ಪ್ರಭಾವದಿಂದ ಒಂದು ನೂತನ ಮಾನವಸ್ವಭಾವವು ಉದಯ ವಾಗುವುದು. ಆಗ ಸ್ವಾರ್ಥವೆಂಬುದು ಪಾಪವಷ್ಟೇ ಅಲ್ಲ ಮಹಾಪರಾಧ ವೆಂದೂ ಪರಿಗಣಿಸಲ್ಪಡುವುದು ಎಂಬುದನ್ನು ಲಕ್ಷ್ಯದಲ್ಲಿಡಬೇಕು. ಸಾಮ್ಯ ವಾದೀಯ ರಶಿಯಾದಲ್ಲಿ ಸಾಂಘಿಕ ಕ್ಷೇತ್ರಗಳಿಂದ ದವಸಧಾನ್ಯಗಳನ್ನು ಕಳವು ಮಾಡುವವರನ್ನು ಗುಂಡಿಗೆ ಗುರಿ ಮಾಡುವರು. ಸಾಮಾಜಿಕ ಸೊತ್ತೆಂದರೆ ಅಷ್ಟು ಪವಿತ್ರವಾದುದೆಂಬ ಕಲ್ಪನೆ.

ಬಳಕೆಯ ಈ ತತ್ತ್ವವು ಈ ನೂತನ ಮನೋಗತಿಯ ದೃಷ್ಟಿಯಿಂದ ವ್ಯವಹಾರ್ಯವಾಗುವುದೋ ಇಲ್ಲವೋ ನೋಡೋಣ. ಜನರಿಗೆ ಮನಬಂದಷ್ಟು ತೆಗೆದುಕೊಳ್ಳುವ ಅವಕಾಶವು ಸಿಕ್ಕರೆ ಅವರು ಈ ಸ್ವಾತಂತ್ರ್ಯವನ್ನು ದುರುಪ ಯೋಗಿಸುವರೆಂಬ ಒಂದು ಆಕ್ಷೇಪವಿದೆ. ಆದರೆ ಅವರಿರುವ ಸಮಾಜದ ಪರಿಸ್ಥಿತಿಯನ್ನು ನಾವು ಆಲೋಚಿಸಬೇಕು. ಉದ್ಯೋಗ–ಉಪಜೀವನಗಳಿಗೆ ಅಲ್ಲಿ ಸಂಪೂರ್ಣ ಅನುಕೂಲವಿರುವುದು. ಮುಪ್ಪು, ಬೇನೆಬೇಸರಿಕೆ, ಹೆರಿಗೆ ಮುಂತಾದವುಗಳಿಗೆ ತಕ್ಕ ವ್ಯವಸ್ಥೆ ಇರುವುದು. ವ್ಯಕ್ತಿಗೆ ಯಾವ ಕೊರತೆಯೂ ಇಲ್ಲ, ಯಾವ ಚಿಂತೆಯೂ ಇಲ್ಲ. ತನ್ನ ಕೆಲಸವನ್ನು ಚೆನ್ನಾಗಿ ಮಾಡಿ ಸಜ್ಜನನೆಂದು ಎನಿಸಿಕೊಂಡರೆ ಮುಗಿಯಿತು. ಆ ಸಮಾಜದಲ್ಲಿ ವಸ್ತುಗಳ ಕ್ರಯವಿಕ್ರಯಗಳು ನಡೆಯುವುದಿಲ್ಲ. ಸರಕುಗಳನ್ನು ಸಿದ್ಧಪಡಿಸಿ ಹಂಚಿ ಕೊಳ್ಳಲಾಗುವುದು. ಮುತ್ತು ರತ್ನಗಳಂತಹ ಆಭರಣಗಳನ್ನು ಹೊರತು ಪಡಿಸಿ ಯಾವ ಸರಕುಗಳನ್ನೂ ವಂಚನೆಯಿಂದ ಹೊರನಾಡಿಗೆ ಕಳಿಸುವುದಾಗಲಿ ಅಲ್ಲಿಂದ ತರುವುದಾಗಲಿ ಸಾಧ್ಯವಿಲ್ಲ. ಸಾಮ್ಯವಾದೀಯ ಸಮಾಜದಲ್ಲಿ ರತ್ನಾಭರಣಗಳು ಸಾಕಷ್ಟು ಸಿಕ್ಕುತ್ತವೆಂದು ಹೇಳಲು ಅನುಮಾನ. ಇಂತಹ

ಸಮಾಜದಲ್ಲಿರುವ ವರೆಗೆ ಹಣ ಸರಕುಗಳನ್ನು ಹೂಳಿಡುವ ಹಂಬಲೇಕೆ? ಸಂಗ್ರಹಿಸುವ ಚಪಲವೇಕೆ? ತಮಗೆ ಬೇಕಾದುದು ಬೇಕಾದಾಗ ದೊರಕುವುದು. ಅದು ಅವರದೇ ಆಗುವುದು. ನಸುಕು ಹರಿಯುವುದರೊಳಗೆ ಮಾಯವಾಗದು. ಸಂಪೂರ್ಣ ಸುರಕ್ಷಿತತೆಯ ಸಂಸ್ಕಾರಗಳೂ ಸಾಮಾಜಿಕ ಅಂತಸ್ಸಿನ ಪರಿಜ್ಞಾನವೂ ಅವರಲ್ಲಿಯ ಸಂಗ್ರಹಬುದ್ಧಿಯನ್ನು ಹೋಗಲಾಡಿಸುವುವು.

ನಾನು ಮೊದಲೆ ಹೇಳಿದಂತೆ, ಸಮಾಜವು ಈ ಮೆಟ್ಟಲಿಗೆ ಮುಟ್ಟುವ ವರೆಗೆ ಮಾತ್ರ ಸರಕುಗಳ ಬಳಕೆಯ ಬಗೆಗೆ ಕೆಲವು ನಿಯಂತ್ರಣಗಳನ್ನಿಡಲಾಗುವುದು. ಅಲ್ಲಿಯ ವರೆಗೆ ಹಣವೆಂಬುದು ಉಳಿಯುವುದು. ಕೂಲಿ ಮತ್ತು ವರಮಾನದ (Income) ವ್ಯತ್ಯಾಸಗಳೂ ಇರುವುವು. ಕೂಲಿಯೆಂದರೆ ಸರಕುಗಳನ್ನು ಕೊಳ್ಳುವ ಶಕ್ತಿಯನ್ನು ಕೊಡುವ ಕ್ರಮ. ಉತ್ಪಾದನವು ಬೆಳೆಯಿತೆಂದರೆ ಅದರಿಂದ ಕೂಲಿಯ ಮೊತ್ತವೂ ಏರುವುದು. ಈಗಿನ ನೈತಿಕ ಕಲ್ಪನೆಗಳಿಗೆ ಮತ್ತು ಆಳುಗಳ ಕರ್ಮಕೌಶಲದ ವ್ಯತ್ಯಾಸಗಳಿಗೆ ಅನುಸರಿಸಿ ಆಳುಗಳ ಸಂಬಳದಲ್ಲಿ ಈಗಿನಕಿಂತಲೂ ಕಡಿಮೆಯ ಪ್ರಮಾಣದಲ್ಲಿ ಭೇದವು ಉಳಿಯುವುದು.

## ೧೨. ಪ್ರಾಯಪ್ರಬುದ್ಧರಾದವರಿಗೆ ದೇಹಶ್ರಮದ ತತ್ತ್ವಕ್ಕನುಸರಿಸಿ ಮತದಾನದ ಅಧಿಕಾರ

ಮತದಾನದ ಹಕ್ಕನ್ನು ಭೂಮಿಯ ಒಡೆತನದ ಮೇರೆಗೆ ಕೊಡುವುದಕ್ಕಿಂತ ಉದ್ಯೋಗದ ಮೇರೆಗೆ ಕೊಡಲಾಗುವುದು. ಪ್ರತಿನಿಧಿಗಳೆಂದರೆ ಹಿತಸಂಬಂಧಗಳನ್ನು ಕಾಪಾಡುವವರು. ಒಂದು ನಾಡಿನೊಳಗಿನ ಹಿತಸಂಬಂಧಗಳೆಂಬುವು ಪ್ರಾದೇಶಿಕವಾಗಿ ಹಂಚಿಹೋಗಿಲ್ಲ; ಆದರೆ ಉದ್ಯೋಗಾನುಸಾರವಾಗಿವೆ. ಆದುದರಿಂದ ಉದ್ಯೋಗ ವಿಶಿಷ್ಟವಾದ ಪ್ರಾತಿನಿಧ್ಯವೇ ಹೆಚ್ಚು ಸಮಂಜಸವಾದುದು.

ಈ ಸಂಕ್ರಮಣ ಕಾಲದ ಸಮಸ್ಯೆಗಳನ್ನೆದುರಿಸಲು ಮಾತ್ರ ಈ ಪದ್ಧತಿಯನ್ನು ಸೂಚಿಸಲಾಗಿದೆ. ಕೆಲವು ಕಾಲದ ಬಳಿಕ, ಈಗ ವಿವಿಧವಾಗಿ ತೋರುವ ಉದ್ಯೋಗಗಳೆಲ್ಲ ಹೆಚ್ಚು ಸಂಘಟಿತವಾಗಿ ಏಕಮುಖವಾಗುವುವು, ಸಾಮಾನ್ಯ ಹಿತೋದ್ದೇಶಗಳುಳ್ಳವುಗಳಾಗುವುವು. ಆ ಮೇಲೆ ಈ ಬಗೆಯ

ಮತಪದ್ಧತಿ ಅರ್ಥವಿಹೀನವಾಗುವುದು. ವರ್ಗರಹಿತ ಸಮಾಜದ ಉದಯವಾಗಿ ಸಾಮ್ಯವಾದದ ಪೂರ್ಣಾವತಾರವಾದೊಡನೆ ಆಧುನಿಕ ರೀತಿಯ ರಾಷ್ಟ್ರವೆಂಬ ಸಂಸ್ಥೆ ನಿಜವಾಗಿಯೂ ಉದುರಿ ಬೀಳುವುದು. ಆಗ ರಾಷ್ಟ್ರದ ಶಾಸನ ಸಭೆಗಳ ಚುನಾವಣೆಯ ಬದಲು ಉದ್ಯೋಗ-ವಿದ್ಯಾಮಂಡಲಗಳ ಪ್ರತಿನಿಧಿಗಳ ಆಯ್ಕೆ ನಡೆಯುವುದು. ಪ್ರಾತಿನಿಧಿಕ ಪ್ರಭುತ್ವ ಪದ್ಧತಿಯಲ್ಲಿ ಪ್ರಚಂಡವಾದ ಕ್ರಾಂತಿಯುಂಟಾಗುವುದು.

ಕಾಂಗ್ರೆಸ್ ಸಾಮ್ಯವಾದಿಗಳು ಈ ಯೋಜನೆಗಳನ್ನು ಮಂಡಿಸಿದ್ದಾರೆ. ಅವುಗಳು ಬಹಳ ವ್ಯಾಪಕವಾಗಿವೆ. ಅವುಗಳನ್ನು ಕಾರ್ಯರಂಗದಲ್ಲಿಳಿಸಲು ಸಾಹಸ, ಶಕ್ತಿ, ಶ್ರದ್ಧೆಗಳು ಬೇಕು. ಭಾರತದ ನವಯುವಕರಲ್ಲಿ ಈ ಗುಣಗಳ ಕೊರತೆಯೆಂಬುದಿಲ್ಲ.

ಘನತೆ ಹೊಂದಿದ ಭಾರತದ ನಿರ್ಮಾಣವಾಗಬೇಕೆಂಬ ಹಿರಿ ಹಂಬಲವುಳ್ಳವರು ಈ ಯೋಜನೆಗಳ ಮೇರೆಗೆ ಕೆಲಸ ನಡೆಸಿದರೆ ಇಷ್ಟಸಿದ್ಧಿಯಾಗುವುದು. ಈ ನಾಮಾಂಕಿತವಾದ ನಾಡಿನಿಂದ ಆಲಸ್ಯ, ಅಜ್ಞಾನ, ಅನ್ಯಾಯ, ದಾರಿದ್ರ್ಯ, ಮಲಿನತೆ ಮುಂತಾದವುಗಳು ಹೊರಟುಹೋಗಬೇಕೆಂಬ ಬಲವಾದ ಬಯಕೆಯಿದ್ದರೆ ಈ ಸಾಹಸದ ಯೋಜನೆಗಳನ್ನು ಸ್ವೀಕರಿಸಿ ಸಾಧನೆ ಮಾಡಬೇಕು.

ಇದೊಂದು ಬಯಲಭ್ರಾಂತಿಯೆಂದು ಯಾರಾದರೂ ಹೇಳುತ್ತಿದ್ದರೆ, ಎಂದಿಗೂ ಅಲ್ಲವೆಂದು ನಾನು ಖಂಡಿತವಾಗಿ ಸಾಧಿಸಬಲ್ಲೆ. ಸಂಪೂರ್ಣ ಸ್ವಾತಂತ್ರ್ಯವೆಂಬುದು ಮನದ ಮಂಡಿಗೆಯಲ್ಲದಿದ್ದರೆ ಇದು ಎಂದೆಂದಿಗೂ ಅಲ್ಲ.

ಹಿಂದುಸ್ಥಾನಕ್ಕೆ ಸಾಮ್ಯವಾದವು ಸಲ್ಲದೆಂದು ಕೆಲವರು ಹೇಳುತ್ತಾರೆ. ಮನಸ್ಸು ಮಾಡಿದರೆ ಈ ಯೋಜನೆಗಳಲ್ಲಿ ನಮ್ಮ ನಾಡಿಗೆ ಸರಿಹೋಗದ ಭಾಗವು ಯಾವುದು ? ಭಾರತದ ಬಂಡವಾಳಗಾರಿಕೆಯು ಬಲಹೀನವಾಗಿದ್ದರೆ ಅದರಿಂದ ತೊಂದರೆಯಾಗುವ ಬದಲು ನಮಗಿನ್ನೂ ಅನುಕೂಲ. ಹಿಂದುಸ್ಥಾನದ ಹಿಂದುಳಿದ ಸ್ಥಿತಿಯು ರೇಲ್ವೆ, ಟೆಲಿಗ್ರಾಫ್, ಗಿರಣಿ, ಬ್ಯಾಂಕ್ ಮುಂತಾದವುಗಳ ನಿರ್ಮಾಣದಲ್ಲಿ ಬ್ರಿಟಿಶರಿಗೆ ಅಡ್ಡ ನಿಲ್ಲಲಿಲ್ಲ. ನಿಜವಾಗಿ ಇವುಗಳೊಂದೊಂದೂ ನಮ್ಮ ಹಿತವನ್ನೇ ಹೆಚ್ಚಿಸಬೇಕಿತ್ತು. ಆದರೆ ಇವುಗಳ ನಿರ್ಮಾಣದ ಉದ್ದೇಶವೇ ಬೇರೆಯಾಗಿರುವುದರಿಂದ ನಮಗಿವು ಶಾಪದಂತಾಗಿವೆ.

ತುರ್ಕಸ್ಥಾನದ ಹಿಂದುಳಿದಿರುವಿಕೆ ರಶಿಯನವರನ್ನು ತಡೆದು ನಿಲ್ಲಿಸಲಿಲ್ಲ.

ನಾನು ಆಗಲೇ ಸೂಚಿಸಿದಂತೆ, ನಮಗೆ ಮನಸ್ಸಿದ್ದರೆ, ಜಗತ್ತಿನ ಈಗಿನ ಪರಿಸ್ಥಿತಿಯಲ್ಲಿ ವಿಜ್ಞಾನ ಮತ್ತು ಶಾಸ್ತ್ರೀಯ ಶೋಧಗಳ ನೆರವಿನಿಂದ ನಾವು ನಾವೇನನ್ನು ಎಲ್ಲಿ ಬೇಕೊ ಅಲ್ಲಿ ನೆಲೆಗೊಳಿಸಬಹುದು.

ಹಿಂದುಸ್ಥಾನದಲ್ಲಿ ಹೀಗೆ ಮಾಡಲು ನಮಗೆ ರಾಷ್ಟ್ರಶಕ್ತಿಯ ಅನುಕೂಲ ಬೇಕಾಗುವದೋ? ಸಂಪೂರ್ಣ ಸ್ವಾತಂತ್ರ್ಯವನ್ನು ಗಳಿಸಬಲ್ಲ ಶಕ್ತಿಯನ್ನು ನಾವು ಪಡೆದರೆ ಈ ನಾಡಿನಲ್ಲಿ ಬೇಕಾದುದನ್ನು ನೆರವೇರಿಸಬಹುದು. ಹಿಂದುಸ್ಥಾನದಲ್ಲಿ ಸಾಮ್ರಾಜ್ಯಶಾಹಿಗಿಂತ ಪ್ರಬಲವಾದ ಇನ್ನೊಂದು ಪಕ್ಷವೂ ಇಲ್ಲ, ಶಕ್ತಿಯೂ ಇಲ್ಲ. ಅದನ್ನೇ ನಾವು ಮೂಲಾಗ್ರ ತಿಕ್ಕುವಂತೆ ಮಣಿಸಿದರೆ ಮತ್ತೆ ನಮ್ಮ ಸ್ಪರ್ಧಿಗಳಾರಾರು ? ರಾಜರು ಮತ್ತು ಜಾಗೀರದಾರರೂ (Landlords) ಬ್ರಿಟಿಶರ ಬೆಂಬಲದಿಂದ ಇಂದು ನಮಗೆ ಭಯಂಕರ ಬಲಶಾಲಿಗಳಾಗಿ ತೋರುವರು. ಆದರೆ ಅವರೆಲ್ಲ ಸ್ಪರ್ಶಮಾತ್ರದಿಂದ ನೆಲಕ್ಕುರುಳುವರು. ಬಂಡವಾಳಗಾರರು ಅವರಿಗಿಂತ ಹೆಚ್ಚು ಬಲಶಾಲಿಗಳೆಂಬುದು ನಿಜ. ಅವರಿಗೂ ನಮ್ಮನ್ನು ತಡೆಯುವುದಾಗದು.

---

# ೬ ಸಮಾನ ವಿಚಾರಗಳು

ಸಾಮ್ಯವಾದದ ಬದಲು ಜಗತ್ತಿನ ಸಂಕಟನಿವಾರಣೆಗೆ ಬೇರೆ ಮಾರ್ಗಗಳಿವೆಯೇ ?

ಅನೇಕವನ್ನು ನಾವು ಕೇಳಿದ್ದೇವೆ. ಗಾಂಧೀ ಪದ್ಧತಿಯಿದೆ, ಗ್ರಾಮೋದ್ಯೋಗ ಸಂಘವಿದೆ, ಮನುಸ್ಮೃತಿ ಮುಂತಾದ ಸಾಮಾಜಿಕ ಘಟನೆಯನ್ನು ಹೇಳುವ ಪ್ರಾಚೀನ ಗ್ರಂಥಗಳಲ್ಲಿ ಕಾಣುವ ಹಳೆಯ ಒಂದೂ ಪದ್ಧತಿಯಿದೆ.

ಎಲ್ಲವನ್ನೂ ಪ್ರತಿಭಟಿಸಿ ದಿಗ್ವಿಜಯಕ್ಕೆ ನಿಂತಿರುವ ಈ ಸಾಮ್ಯವಾದದ ಸ್ಥಾನವನ್ನು ಆಕ್ರಮಿಸಬಲ್ಲ ವಿಚಾರಗಳ ಒಂದು ದೊಡ್ಡ ಸಂತೆಯನ್ನೇ

ಮಂಡಿಸದಿದ್ದರೆ ಭಾರತವು ತನ್ನ ಹೆಸರಿಗೆ ಹೊರತು; ಆಧುನಿಕ ಸಾಮ್ಯವಾದದ ಜನ್ಮಭೂಮಿಯಾದ ಯುರೋಪ್ ಖಂಡದಲ್ಲಿಯೇ ಇಂತಹ ವಿಚಾರಗಳಿಗೆ ಇನ್ನೂ ಕೊರತೆಯಿಲ್ಲ. ಮೊನ್ನೆ ಮೊನ್ನೆ ಎಚ್. ಜಿ. ವೆಲ್ಸರು, ಸದ್ಯದ ಸಾಮ್ಯವಾದದ ಚಳವಳದ ಅಖಿಲ ಜಗತ್ತಿನ ಮುಂದಾಳುಗಳಾದ ಜೋಸೆಫ್ ಸ್ಟಾಲಿನ್ನರಿಗೆ ಈ ವರ್ಗಕಲಹೋತ್ಪಾದಕವಾದ ತತ್ತ್ವದ ಬದಲು ಸಯುಕ್ತಿಕವಾದ ಸುಂದರ ವಾದ ಕ್ಲಿಸೋಲ್ಡಿಜಮ್ ( Clissoldism ) ಎಂಬುದನ್ನು ಉಪದೇಶ ಮಾಡಿದ್ದಾರೆ.

ಇವೆಲ್ಲ ವಿಚಾರಗಳು ಹೊಸವಲ್ಲ. ಇವುಗಳಿಗೆ ಹಿಂದಿನ ಯಾವುದೋ ಒಂದು ಆಪ್ತತ್ವವಿದ್ದೇ ಇದೆ. ಇಂದು ಗಾಂಧಿಯವರು ಹೇಳುವುದನ್ನು ಔದ್ಯೋಗಿಕ ಕ್ರಾಂತಿಯ ಪ್ರಭಾತ ಸಮಯದಲ್ಲಿ ಯುರೋಪಿನ ಪ್ರಾಚೀನ ಸಂಪ್ರದಾಯದ ತತ್ತ್ವವೇತ್ತರೂ, ಚರ್ಚಿನ ಪಾದ್ರಿಗಳೂ ಹೇಳಿದ್ದರು. ಈಗ ಎಚ್. ಜಿ. ವೆಲ್ಸರು ಜಗತ್ತಿನ ಪುನರ್ರಚಿಸಲು ನಡೆಸಿದ ಪ್ರಯತ್ನವನ್ನು ಕಾಂಟನು ಎಂದೋ ಮಾಡಿದ್ದನು.

ಈ ವಿಚಾರಸಾಮ್ಯದಲ್ಲಿ ಕೆಲವು ಸಾಮಾನ್ಯ ಲಕ್ಷಣಗಳಿವೆ. ಅವುಗಳಲ್ಲೆಲ್ಲ ಸದ್ಯಸ್ಥಿತಿಯನ್ನು ಬುಡಮೇಲು ಮಾಡುವ ರೀತಿ, ಸಂಗ್ರಾಮ ಕ್ರಮಗಳಿಂದ ಕಾಲ್ತೆಗೆಯುವ ಬುದ್ಧಿಪೂರ್ವಕ ಪ್ರಯತ್ನ ಇವು ಒಡೆದು ಕಾಣುವುವು. ಆದುದ ರಿಂದ ಸಕಲ ಪ್ರಪಂಚದ ಅನುಭವಕ್ಕೆ ಬಂದಿರುವ ಈಗಿನ ಭೀಕರವಾದ ವೈಷಮ್ಯ ವ್ಯತ್ಯಾಸಗಳನ್ನು ಎಲ್ಲರ ಒಪ್ಪಿಗೆ ಒಲವುಗಳಿಂದಲೆ ಹೋಗಲಾಡಿಸಿ ಸಾಮರಸ್ಯ ವನ್ನುಂಟುಮಾಡಬೇಕೆಂದು ಅವುಗಳ ಹವಣಿಕೆ. ಶಿಕ್ಷಣದಿಂದ ಮಾನವ ಸ್ವಭಾವವನ್ನೇ ಉತ್ತಮಗೊಳಿಸಿ ಉನ್ನತವಾದ ನೀತಿಬಲವುಳ್ಳ ಬುದ್ಧಿಶಾಲಿ ಗಳನ್ನು ಅಧಿಕಾರಪದಾರೂಢರನ್ನಾಗಿ ಮಾಡುವುದೇ ಅವುಗಳು ಸೂಚಿಸುವ ಪದ್ಧತಿಯು.

## ಸಾಮ್ಯವಾದ ಮತ್ತು ಭಾರತೀಯ ಭೂಮಿಕೆ

ಭಾರತದ ವಿಶಿಷ್ಟವಾದ ಸಮಸ್ಯೆಗಳಿಗೆ ವಿಶಿಷ್ಟವಾದ ವಿಮೋಚನೆ ಯುಂಟು. ಆದರೆ ಸಾಮ್ಯವಾದಿಗಳು ವಿದೇಶೀಯ ವಿಧಾನಗಳನ್ನು ಇಲ್ಲಿ ಬಳಕೆಗೆ ತರುತ್ತಿದ್ದಾರೆಂಬ ಆಕ್ಷೇಪವಿದೆ. ನನಗೆ ಇಲ್ಲಿ ಒಂದು ಮಾತನ್ನು ಸ್ಪಷ್ಟಪಡಿಸಬೇಕಾಗಿದೆ. ಭಾರತದ ವಿಶಿಷ್ಟವಾದ ಸಮಸ್ಯೆಗಳನ್ನಾಗಲಿ,

ಐತಿಹಾಸಿಕ ಸಾಂಸ್ಕೃತಿಕ ಪರಂಪರೆಯನ್ನಾಗಲಿ ಕಡೆಗಾಣಬೇಕೆಂದು ನಮ್ಮ ಅಪೇಕ್ಷೆಯಿಲ್ಲ. ಹೀಗೆ ಮಾಡುವುದು ಮಾರ್ಕ್ಸನ ತತ್ತ್ವಗಳಿಗೆ ವಿರೋಧ ವಾದುದು.

ಭಾರತೀಯ ಉಪಾಯಗಳೆಂಬವುಗಳನ್ನೆಲ್ಲ ನಮ್ಮ ಶಕ್ತಿಮೀರಿ ಪರೀಕ್ಷೆ ಮಾಡಿರುತ್ತೇವೆ. ಸದ್ಯದ ಪರಿಸ್ಥಿತಿಯಲ್ಲಿ ಸಾಮ್ಯವಾದದ ಸ್ಥಾನವನ್ನಾಕ್ರಮಿಸಲು ಅವುಗಳು ಅಯೋಗ್ಯವಾದವುಗಳೆಂದು ನಮಗೆ ಮನವರಿಕೆಯಾಗಿದೆ. ಇದೊಂದು ಪುರಾತನ ಭಾರತದ ಸಮಾಜವಿಜ್ಞಾನಿಗಳ ಬಹುಧಾನಕ ಬುದ್ಧಿಯ ನಿಂದೆಯೆಂದು ತಿಳಿಯಬಾರದು. ಅವರ ದುರ್ದೈವದಿಂದ ಭಾರತೀಯ ಸಮಾಜದಲ್ಲಿ ಅಂದಿನಿಂದ ಮೂಲಭೂತವಾದ ವ್ಯತ್ಯಾಸಗಳಾಗಿವೆ. ಅವರ ಸಮಸ್ಯೆಗಳೆಲ್ಲ ಸಂಪೂರ್ಣವಾಗಿ ಪರಿವರ್ತನಹೊಂದಿವೆ. ಅವರ ಅಂದಿನ ವಿಚಾರಗಳಿಗೂ ಇಂದಿನ ಸಂಗತಿಗಳಿಗೂ ಯಾವ ಸಂಬಂಧವೂ ಉಳಿದಿಲ್ಲ. ಕೆಲವು ವಿಶಾಲ ತತ್ತ್ವಗಳು ಯಾವ ದೇಶಕಾಲಗಳಿಗೂ ಸರಿಹೋಗುವುದುಂಟು. ಆದರೆ ನಿರ್ದಿಷ್ಟವಾದ ದುರಿತಗಳನ್ನು ನಿವಾರಿಸಲು ನಿರ್ದಿಷ್ಟವಾದ ಯೋಜನೆಗಳನ್ನು ಹುಡುಕುವ ಸಮಯದಲ್ಲಿ ವಿಶಾಲ ತತ್ತ್ವಗಳು ಅಷ್ಟು ಪ್ರಯೋಜನಕ್ಕೆ ಬರುವುದಿಲ್ಲ. ಸಮಾಜದ ಮತ್ತು ವ್ಯಕ್ತಿಯ ಸಾಮಾನ್ಯ ಹಿತದ ದೃಷ್ಟಿಯಿಂದ ಅವುಗಳು ಒಂದು ವೇಳೆ ಸರಿಹೋಗಬಹುದು. ಆದರೆ ನಿರ್ದಿಷ್ಟವಾದ ದುರಿತಗಳ ದೃಷ್ಟಿಯಿಂದ ನೋಡಿದರೆ ಪುರಾತನ ಪದ್ಧತಿಗಳೂ, ಅವುಗಳ ನೂತನ ಪರಿಷ್ಕಾರಗಳೂ ಕೆಲಸಕ್ಕೆ ಬಾರದೆ ಬಿದ್ದು ಹೋಗುತ್ತವೆ.

ನಾಗರಿಕತೆಯು ಈಗಿನಕಿಂತಲೂ ಹೆಚ್ಚು ಸರಳವಾಗಿರುವಾಗ ಆ ಪ್ರಾಚೀನ ತತ್ತ್ವಗಳ ಅಧಿಷ್ಠಾನವಾಯಿತು. ಬೇರೆಯವರ ಶ್ರಮಶಕ್ತಿಯ ಸುಲಿಗೆಯನ್ನು ತಕ್ಕಮಟ್ಟಿಗಾದರೂ ನಡೆಸಲು ಬರುವಷ್ಟು ಉದ್ಯಮ-ಕೃಷಿಗಳ ವಿಕಾಸವಾಗಿರಲಿಲ್ಲ. ಉತ್ಪಾದನವೆಲ್ಲವೂ ಸಣ್ಣ ಪ್ರಮಾಣದಲ್ಲಿ ವ್ಯಕ್ತಿಮಿತವಾಗಿತ್ತು. ಜನಸಂಖ್ಯೆಯು ಕಡಿಮೆಯಾಗಿದ್ದಿತು. ನಿಸರ್ಗಸಂಪತ್ತಿಗಾಗಿ ಕೊರತೆಯಾಗಲಿ, ಕಷ್ಟವಾಗಲಿ ಇರಲಿಲ್ಲ. ಸಮರ್ಥನಾದ ಯಾವ ಮಾನವನಾದರೂ ಕಾಡನ್ನು ಕಡಿದು ವಾಸಕ್ಕೆ ಯೋಗ್ಯವಾದ ಸ್ಥಳದಲ್ಲಿ ತನ್ನ ಕುಟುಂಬದೊಡನೆ ಇದ್ದು ಬಿಡುತ್ತಿದ್ದನು.

ಅಂದಿನ ಸ್ಥಿತಿಗೂ ಇಂದಿನ ಔದ್ಯೋಗಿಕ ಮತ್ತು ಗ್ರಾಮ ಸಮಸ್ಯೆಗಳ ಪರಿಸ್ಥಿತಿಗೂ ಬಹಳ ಬಿಡುತ್ತದೆ. ವರ್ಗದಾರಿಕೆ ( Landlordism ) ಯು

ವಿದೇಶೀಯ ಸರಕು; ಗಿರಣಿ ಮತ್ತು ಕಾರಖಾನೆಗಳೂ ನಮ್ಮ ನಾಡಿಗೆ ಹೊಸವು. ಸಾಮ್ರಾಜ್ಯಪ್ರಭುತ್ವದಿಂದ ಉತ್ಪನ್ನವಾದ ಸಮಸ್ಯೆಗಳೆಲ್ಲವೂ ನಮಗೆ ನೂತನವಾದವುಗಳು. ನಾನು ಮೊದಲನೆಯ ಅಧ್ಯಾಯದಲ್ಲಿ ಹೇಳಿದಮೇರೆಗೆ, ಕೆಲವರಿಂದ ನಡೆಯುವ ಹಲವರ ಸುಲಿಗೆಯು ನಮ್ಮ ಸಮಾಜದ ಮೂಲಸಮಸ್ಯೆ. ಇದಕ್ಕೆ ನಾನು ಮೊದಲನೆಯ ಅಧ್ಯಾಯದಲ್ಲಿ ಹೇಳಿದಮೇರೆಗೆ ಭೂಮಿಯ ಮತ್ತು ಇತರ ಉತ್ಪತ್ತಿಸಾಧನಗಳ ವ್ಯಕ್ತಿಮಿತ ಒಡೆತನವೇ ಕಾರಣ. ಇದು ಮನುವಿನ ಕಾಲದಲ್ಲಿ ಈಗಿನಂತೆ ಸಾರ್ವತ್ರಿಕವಾಗಿರಲಿಲ್ಲ. ಆದುದರಿಂದಲೇ ಅದರ ಪರಿಹಾರವಿಚಾರವೂ ಇರಲಿಲ್ಲ.

## ಸಾಮ್ಯವಾದವು ಜನಾಂಗದ ಮೇರೆಗಳಿಂದ ನಿರ್ಬಂಧಿತವಾಗಿಲ್ಲ

ಅತ್ಯಂತ ಪ್ರಾಚೀನ ಭಾರತದೊಡನೆ ಸಂಬಂಧವಿರದ ಈ ಸಮಸ್ಯೆಯು, ಆಧುನಿಕ ಜಗತ್ತಿನ ಸಮಸ್ಯೆಗಳೊಡನೆ ಮಾತ್ರ ಮೂಲದಲ್ಲಿ ಒಂದೇ ಆಗಿದೆ. ಚೀನ, ಜಪಾನ್, ಇಂಗ್ಲಂಡ್, ಫ್ರಾನ್ಸ್, ಜರ್ಮನಿ ಮತ್ತು ಅಮೇರಿಕೆಯ ಸಂಯುಕ್ತ ಸಂಸ್ಥಾನಗಳ ಜನಸಮುದಾಯವು ಮುಖ್ಯವಾಗಿ ಇದೇ ಸಮಸ್ಯೆಯನ್ನೆದುರಿಸಬೇಕಾಗಿದೆ. ಉತ್ಪಾದನಶಕ್ತಿಯ ಅಭಿವೃದ್ಧಿಯಿಂದ ಅಥವಾ ಯಾಂತ್ರಿಕ ಮತ್ತು ಶಾಸ್ತ್ರೀಯ ಶೋಧಗಳಿಂದ ಈವರೆಗೆ ಅವಿದಿತವಾದ ಪ್ರಚಂಡ ಅಪಹಾರಪದ್ಧತಿಯು, ಅಂದರೆ ಬಂಡವಾಳಗಾರಿಕೆಯು ಹುಟ್ಟುವಳಿಯ ಮತ್ತು ಹಂಚುವಿಕೆಯ ಪದ್ಧತಿಯು ಹುಟ್ಟಿ ಬೆಳೆಯಿತು. ಈ ಪದ್ಧತಿಯ ಅನಿವಾರ್ಯವಾದ ಪ್ರತಿಕಾರವೇ ಸಾಮ್ಯವಾದ. ಇದಕ್ಕೆ ನಾಡುಗಳ ಮೇರೆ ಇಲ್ಲ. ಇದು ಇಂಗ್ಲಂಡಿನಂತೆ ಜಪಾನಿನಲ್ಲಿಯೂ ಇದೆ. ಹೀಗೆಯೇ ಚೀನ, ಜರ್ಮನಿ, ಅಮೇರಿಕೆ, ಭಾರತ ಮುಂತಾದ ಎಲ್ಲ ದೇಶಗಳಲ್ಲಿಯೂ ಇದು ಹಬ್ಬಿಕೊಂಡಿದೆ. ಬಂಡವಾಳಗಾರಿಕೆಯು ಸುಲಿಗೆ ನಡೆಸುತ್ತಿರುವಲ್ಲೆಲ್ಲ ಸಾಮ್ಯವಾದವು ತಪ್ಪದೆ ತಲೆಯೆತ್ತುವುದು. ಬಂಡವಾಳಗಾರಿಕೆಯು ಜಾಗತಿಕ ಪದ್ಧತಿಯಾಗಿದ್ದರೆ ಸಾಮ್ಯವಾದವೂ ಜಗತ್ತಿನ ನಾಲ್ಕೂ ಮೂಲೆಗಳವರೆಗೆ ಹಬ್ಬದಿರಲಾರದು. ಸದ್ಯದ ವಾತಾವರಣವನ್ನು ನಿರೀಕ್ಷಿಸಿದರೆ ಭಾರತವು ಇದಕ್ಕೆ ಅಪವಾದವಾಗಲಾರದು, ಆಗಿಲ್ಲವೆಂದು ತೋರುತ್ತದೆ.

ಹಿಂದುಸ್ಥಾನದಲ್ಲಿ ಉಳಿದಿರುವ ಪಾಳೆಯಗಾರಿಕೆಯ ಅವಶೇಷಗಳು ಈ ಸಮಸ್ಯೆಯಲ್ಲಿ ಸ್ವಲ್ಪ ವ್ಯತ್ಯಾಸವನ್ನುಂಟುಮಾಡಿರಬಹುದು. ಆದರೆ ಅದರ ಅಂಗಭೂತ ಸ್ವಭಾವವನ್ನು ಮಾತ್ರ ಬದಲಿಸಲಾರವು. ಸುಲಿಗೆಯ ಹಿಡಿತ ಕೊಳ್ಳೆಪಟ್ಟೆ ಇಲ್ಲಿಯ ಸಮಾಜದ ಬೇರೆಬೇರೆ ಅಂಗಗಳ ಸಾಮರ್ಥ್ಯದಲ್ಲಿ ಹೆಚ್ಚುಕಡಿಮೆಯಾಗಬಹುದು. ಅವುಗಳು ಸಾಮ್ಯವಾದವನ್ನು ಸ್ವೀಕರಿಸುವುದು ಹೆಚ್ಚು ಸಾಧಕವಾಗಬಹುದು. ಆದರೆ ಅವುಗಳ ಗುರಿಯಲ್ಲಿ ವ್ಯತ್ಯಾಸವಾಗಲಾರದು. ಅದಲ್ಲದೆ ಈ ಬಂಡವಾಳಗಾರರ-ಪಾಳೆಯಗಾರರ ಸುಲಿಗೆಯ ಮತ್ತು ಆಳಿಕೆಯ ಪದ್ಧತಿಯನ್ನು ಕಿತ್ತೊಗೆಯುವ ತೀರ ಮೊದಲಿನ ಕೆಲಸದಲ್ಲಿಯೂ ವ್ಯತ್ಯಾಸವಾಗಲಾರದು. ಅವುಗಳೆರಡೂ ಬೇರೆ ಬಂಡವಾಳಗಾರಿಕೆಯ ನಾಡುಗಳಲ್ಲಿದ್ದಂತೆಯೇ ಇರುತ್ತವೆ.

## ಭಾರತೀಯ ಚಿಕಿತ್ಸಾಪ್ರಯೋಗಗಳು

ಪಾಶ್ಚಾತ್ಯರ ಅನುಕರಣವನ್ನು ಮಾಡುತ್ತೇವೆಂದು ನಮ್ಮ ಮೇಲೆ ದೋಷಾರೋಪಣೆ ಮಾಡುವವರು ನಮ್ಮನ್ನೆದುರಿಸುವ ಈ ಸಮಸ್ಯೆಗಳ ಪರಿಹಾರಕ್ಕೆ ನಿಜವಾದ ಭಾರತೀಯ ಉಪಾಯಗಳನ್ನು ಒದಗಿಸಬೇಕು. ಭಾರತೀಯರ ವೈಶಿಷ್ಟ್ಯಗಳ ಮತ್ತು ಅವರಿಗೊದಗುವ ಆಪತ್ತುಗಳ ಕೆಲವು ವಿಶಿಷ್ಟವಾದ ಚಿಕಿತ್ಸೆಗಳ ಬಗೆಗೆ ಅನೇಕರು ವಿಪುಲವಾಗಿ ಮಾತಾಡುತ್ತಿರುತ್ತಾರೆ. ಆದರೆ ಈವರೆಗೆ ತಿಳಿಯುವ ಬಗೆಯಲ್ಲಿ ಡಾಕ್ಟರ್ ಭಗವಾನದಾಸರೊಬ್ಬರನ್ನುಳಿದು ಯಾರೂ ಅವುಗಳನ್ನು ಜನರೆದುರು ಅವಗಾಹನೆಗಾಗಿ ಮುಂಡಿಸುವ ಗೊಡವೆಗೆ ಹೋಗಿಲ್ಲ.

ಭಾರತೀಯ ನಾಯಕರಲ್ಲಿ ಇವರೊಬ್ಬರೆ ಈ ಸಮಸ್ಯೆಯನ್ನು ಚೆನ್ನಾಗಿ ಆಲೋಚಿಸಿದವರು, ಹಿಂದುಸ್ಥಾನಕ್ಕೊದಗಿದ ಆಪತ್ತುಗಳ ದೇಶೀಯ ಪರಿಹಾರ ಪದ್ಧತಿಯನ್ನು ಸೂಚಿಸಿದವರು. ಆದರೆ ಅವರು ತೋರಿಸಿದ ಉಪಾಯಗಳಿಗಿಂತ ನಮಗೆ ಹೆಚ್ಚು ಬೆಲೆಯುಳ್ಳುದೂ ಮಹತ್ತ್ವವಾದುದೂ ಎಂದೆನಿಸುವ ಮತ್ತೊಂದು ವಿಷಯವಿದೆ. ಸ್ವರಾಜ್ಯದ ರೂಪರೇಷೆಯನ್ನು ಬೇಗನೆ ಗೊತ್ತು ಮಾಡುವುದು ಅತ್ಯಂತ ಮಹತ್ತ್ವವಾದುದು, ಅದರ ಬಗೆಗೆ ಚೆನ್ನಾದ ವಿಮರ್ಶೆಯನ್ನೂ ವಿವೇಚನೆಯನ್ನೂ ಮಾಡುವುದು ಅತ್ಯಗತ್ಯವಾದುದು ಎಂಬ ಅವರ

ಯೋಚನೆ ಗೌರವಕ್ಕೆ ತಕ್ಕುದಾಗಿದೆ. ಆದರೆ ಸಾಮ್ಯವಾದಿಗಳನ್ನು ಬಿಟ್ಟರೆ ಈ ರೀತಿಯ ವಿಚಾರವನ್ನಿಟ್ಟುಕೊಂಡವರು ಭಗವಾನದಾಸರೊಬ್ಬರೆ.

ಭಾರತೀಯ ಸಂಸ್ಕೃತಿಯ ಅಭಿಮಾನಿಗಳೆಂದು ಹೇಳಿಕೊಳ್ಳುವ ಬೇರೆ ಹಲವರ ವಿಷಯವು ಪ್ರತ್ಯೇಕ. ನಮ್ಮ ತಲೆಯ ಮೇಲೆ ವಿದೇಶೀಯತೆಯ ಆರೋಪವನ್ನು ಹೊರಿಸಿ, ನಾವು ಭವಿಷ್ಯದ ಗರ್ಭದೊಳಗಿನ ಸಂಗತಿಗಳಿಗಾಗಿ ಚಡಪಡಿಸುವವರೆಂದು ನಮ್ಮ ಮೋರೆಗಷ್ಟು ಕಪ್ಪು ಬಳಿದರೆ ಅವರ ಕೆಲಸ ಮುಗಿಯಿತು. "ನಾವು ಮುಂಚೆ ಸ್ವರಾಜ್ಯವನ್ನು ಸಂಪಾದಿಸೋಣ" ಎಂಬುದೇ ಅವರ ನಿತ್ಯ ಜಪ. ಸಾಮ್ಯವಾದದ ಮೇಲೆ ಕೈಯೆತ್ತಿ ಅದನ್ನು ವಿರೋಧಿಸುವಾಗ ಅವರಿಗೆ ತಮ್ಮ ನಡತೆಯ ವಿಸಂಗತತೆಯು ಹೇಗೆ ಕಂಡು ಬರುವುದಿಲ್ಲವೆಂಬುದೇ ಆಶ್ಚರ್ಯದ ವಿಷಯ. ಸ್ವರಾಜ್ಯಸಿದ್ಧಿಯಾದ ಬಳಿಕ ಅವರಿಗೆ ಯಾವ ಸಂಪ್ರದಾಯವು ಸೇರಿದರೂ ಸಾಮ್ಯವಾದವು ಮಾತ್ರ ಖಂಡಿತ ವಾಗಿ ರುಚಿಸುವುದಿಲ್ಲೆಂಬುದು ಅವರ ಈ ಬಗೆಯ ನಡಾವಳಿಯಿಂದ ವಿಶದ ವಾಗುವುದು. ತಾವು ಯಾವ ಪಕ್ಷಕ್ಕೂ ಸೇರಿದವರಲ್ಲವೆಂಬ ಅವರ ಹೆಗ್ಗಳಿಕೆಯು ಹಾಗಿರಲಿ, ಅವರ ಹೃದಯದ ಒಲವು ಯಾವ ಕಡೆಗಿದೆಯೆಂಬುದು ಮಾತ್ರ ಇದರಿಂದ ಸ್ಪಷ್ಟವಾಗುತ್ತದೆ.

ಭಾರತೀಯ ಸಂಸ್ಕೃತಿಯ ಅಭಿಮಾನಿಗಳ ಒಂದು ವಿಲಕ್ಷಣ ವಿಷಯ ವನ್ನು ಇಲ್ಲಿ ಹೇಳದಿರಲಾರೆ. ಸಾಮ್ಯವಾದವು ಇವರನ್ನೆದುರಿಸಿತೆಂದರೆ ಇವರಿಗೆ ಡಾ. ಭಗವಾನದಾಸರಂತಹ ಮಹನೀಯರು ಸೂಚಿಸಿದ ಮನುಮುನಿಯ ಮಾರ್ಗವು ಕಣ್ಣಿಗೆ ಕಾಣುವುದೇ ಇಲ್ಲ. ಅದರಲ್ಲಿ ಇವರು ಸ್ವಲ್ಪವಾದರೂ ಅಭಿರುಚಿಯನ್ನು ತೋರಿಸುವುದಿಲ್ಲ. ದಾಸ-ದಾಸ ಸ್ವರಾಜ್ಯ ಯೋಜನೆಯ ಹಣೆಬರಹವನ್ನು ಎಲ್ಲರೂ ಬಲ್ಲರು. ಈಗ ಪುನಃ ಭಗವಾನದಾಸರ "ಪುರಾತನ ಹಾಗೂ ಆಧುನಿಕ ಶಾಸ್ತ್ರೀಯ ಸಾಮ್ಯವಾದ"ವೂ ಅದೇ ಹಾದಿಯನ್ನು ಹಿಡಿಯುವುದೆಂದು ತೋರುತ್ತದೆ. ಅದು ಹೇಗೆಂಬುದನ್ನು ಗಟ್ಟಿಯಾಗಿ ತಿಳಿದು ಕೊಳ್ಳುವಾ. ಕಳೆದ ವರಿಷ್ಠ ನ್ಯಾಯಸಭೆ (Assembly)ಯ ಆಯ್ಕೆಗಳ ಕಾಲದಲ್ಲಿ ಸನ್ಮಾನ್ಯ ಭಗವಾನದಾಸರು ಹೇಳಿದ ಮಾತುಗಳನ್ನು ನೆನಪಿಗೆ ತರಬೇಕು.

"ಭಾರತೀಯ ಪರಂಪರೆಯ ಮೇರೆಗೆ ಪ್ರಜೆಗಳೆ ತಮ್ಮ ಮುಂದಾಳುಗಳನ್ನು ಆರಿಸಿ ತಮಗಾಗಿ ಶಾಸನಗಳನ್ನು ರಚಿಸಬೇಕೆಂದು ಕೇಳಿಕೊಳ್ಳಬೇಕಲ್ಲವೆ ಹುರಿಯಾಳುಗಳು ( Candidates ) ಜನಗಳ ಬಾಗಿಲಿಗೆ ಹೋಗಿ ನಮ್ಮನ್ನು ಆರಿಸಿರೆಂದು ಬಿಕ್ಕೆ ಬೇಡುವುದಲ್ಲ" ಎಂದು ಡಾಕ್ಟರ್ ದಾಸರು ಗಂಟಲು ಹರಿದುಕೊಂಡರು. ಆಗ ಆರ್ಯಪರಂಪರೆಯ ಅಭಿಮಾನಿಗಳು ಒಂದಿಷ್ಟು ಹುರುಪನ್ನು ಸಹ ತೋರಿಸಿದಂತೆ ಕಾಣಲಿಲ್ಲ. ಅದೇಕೆ, ಈ ಸಭ್ಯಗೃಹಸ್ಥರು ಅವರನ್ನು ಮನುಧರ್ಮದ ಮರುಳರೆಂದು ತಿರಸ್ಕರಿಸಿದ್ದರೂ ಇರಬಹುದೆಂದು ನನಗೆ ಬಲವಾದ ಅನುಮಾನ.

"ಭಾರತೀಯತೆ"ಯ ಈ ಮಾತಿನ ಮುಕ್ಕಾಲುಪಾಲೆಲ್ಲ ಬರಿಯ ದುರಭಿಮಾನದ ಕಂತೆ. ಅದರಲ್ಲಿ ಸಿಪ್ಪೆ ಒಂದಿಷ್ಟು ಸಹ ಇಲ್ಲ. ಅವರ ಸಂಪ್ರದಾಯ ಶರಣತೆಯ ಪ್ರತಿಕ್ರಿಯೆಗೆ ( Reaction ) ಇದೊಂದು ರಕ್ಷಾಕವಚ. ಸಾಮ್ಯವಾದವು ಹೊರನಾಡಿನ ಸರಕೆಂದು ಇವರೆಷ್ಟು ಕೂಗಿದರೂ ಚಿಂತೆಯಿಲ್ಲ. ಒಬ್ಬಿಬ್ಬರನ್ನುಳಿದು ಹಿಂದುಸ್ಥಾನದ ಮುಂದಾಳುಗಳೆಲ್ಲ ಭಾರತಕ್ಕೊಂದು ರಾಜ್ಯಘಟನೆಯನ್ನು ರಚಿಸಬೇಕೆಂದು ತೊಡಗಿದರೆ ಆ ಘಟನೆಯು ಪಾಶ್ಚಾತ್ಯ ಪ್ರಜಾಸತ್ತಾತ್ಮಕ ಘಟನೆಗಳ ಕೇವಲ ನಕಲಾಗುವುದರಲ್ಲಿ ಸಂದೇಹವಿಲ್ಲ.

## ರಾಜಕೀಯ ಪ್ರಜಾಪ್ರಭುತ್ವ ( Political Democracy )

ಇದು ಸಾಮ್ಯವಾದದ ಸ್ಥಾನವನ್ನು ಆಕ್ರಮಿಸಲಾರದು. ಆದರೂ ದೇಶದೊಳಗಿನ ಅನೇಕ ರಾಜಕೀಯ ಕೆಲಸಗಾರರಿಗೆ ಸ್ವರಾಜ್ಯವೆಂದೊಡನೆ ಈ ಮಾದರಿಯ ಪ್ರಜಾಪ್ರಭುತ್ವದ ಕಲ್ಪನೆಯೇ ಬರುವುದರಿಂದ ನಾನು ಇಲ್ಲಿ ಇದನ್ನು ವಿಮರ್ಶಿಸಬೇಕಾಗಿದೆ.

ಪ್ರಾಯಪ್ರಬುದ್ಧನಾದ ಪ್ರತಿಯೊಬ್ಬ ಮಾನವನಿಗೂ ಮತದಾನದ ಅಧಿಕಾರವನ್ನು ಕೊಟ್ಟುಬಿಟ್ಟರೆ ಪ್ರಜೆಗಳು ಪ್ರಬಲರಾಗಿ ಸಮಾಜದಲ್ಲಿ ಬೇರುಬಿಟ್ಟಿರುವ ಅನ್ಯಾಯ ಸಂಕಟಗಳನ್ನೆಲ್ಲ ನಿರ್ಮೂಲಿಸುವರು ಎಂಬುದಾಗಿ ಬೆಂಥಾಮ್ ಮತ್ತು ಗೋಡ್ವಿನ್ನರ ಕಾಲದಲ್ಲಿ ನಂಬಲಾಗಿತ್ತು. ಕಾಲಕ್ರಮೇಣ ಮತದಾನದ ಹಕ್ಕನ್ನೇನೋ ಎಲ್ಲರಿಗೂ ಹಂಚಲಾಯಿತು. ಆಗಿನ ಉಗ್ರಪಕ್ಷದವರ ಬಯಕೆಗಳು ಈಡೇರಿದವು. ಆವರೆ ಇಷ್ಟಫಲ ಪ್ರಾಪ್ತಿ

ಮಾತ್ರ ಆಗಲಿಲ್ಲ. ಅನ್ಯಾಯಗಳು ಹಾಗೆಯೇ ಉಳಿದುವು. ಪೀಡೆಗಳು ಪಟ್ಟಭದ್ರವಾದುವು. ಅಂತೂ ಇನ್ನೂ ಎಲ್ಲಿಯೋ ದೋಷವಿದೆಯೆಂಬುದು ಮನದಟ್ಟಾಯಿತು.

ಬೇಗನೆ ತಪ್ಪು ಕಣ್ಣಿಗೆ ಬಿತ್ತು. ಸಾಮ್ಯವಾದಿಗಳು ಎಂದಿನಿಂದಲೂ "ರಾಜಕೀಯ ಸಂಸ್ಥೆಯಲ್ಲಿ ಮಾತ್ರ ಅಲ್ಲೊಂದು ಇಲ್ಲೊಂದು ಮಾರ್ಪಾಟನ್ನು ಮಾಡಿದರೆ ಪ್ರಯೋಜನವಿಲ್ಲ. ಸಮಾಜದ ಆರ್ಥಿಕ ಘಟನೆಯಲ್ಲಿಯೇ ಮೂಲಭೂತವಾದ ಪರಿವರ್ತನವನ್ನುಂಟುಮಾಡಬೇಕು" ಎಂಬುದಾಗಿ ಸಾರುತ್ತಿದ್ದರು. ರಾಜಕೀಯ ಪ್ರಭುತ್ವವು ಮತದಾನದ ಅಧಿಕಾರಕ್ಕಿಂತಲೂ ದೇಶದ ಆರ್ಥಿಕ ಜೀವನದ ನಿಯಂತ್ರಣವನ್ನೇ ಹೆಚ್ಚಾಗಿ ಹೊಂದಿಕೊಂಡಿದೆ ಯೆಂದು ಅವರು ಸೂಚಿಸಿದರು. ಇತರರು ಮತದಾನದ ಪಟ್ಟಿಗೆಯಲ್ಲಿಯೇ ತಮ್ಮ ನಿಷ್ಠೆಯನ್ನಿಟ್ಟರು. ಆದರೆ ಆ ಪೆಟ್ಟಿಗೆಯಿಂದ ತಮ್ಮ ಬಯಕೆಗಳು ಕೈಗೂಡಲಿಲ್ಲವೆಂದ ಬಳಿಕ ಎಲ್ಲೆಲ್ಲಿಯೂ "ರಾಜಕೀಯ ಪ್ರಜಾಸತ್ತೆಯು ಸೋಲು ತಿಂದಿತು" ಎಂಬ ಕೂಗು ಕೇಳಿಸತೊಡಗಿತು. ಇಂದು ರಾಜಕೀಯದೊಡನೆ ಆರ್ಥಿಕ ಪ್ರಜಾಪ್ರಭುತ್ವವೂ ಬೇಕೆಂದು ಪ್ರತಿಪಾದಿಸದ, ಪ್ರಗತಿಪರ ವಿಚಾರ ಗಳನ್ನಿಟ್ಟುಕೊಂಡ ಒಬ್ಬ ರಾಜ್ಯನೀತಿಜ್ಞನೂ ದೊರೆಯುವುದು ದುರ್ಲಭ. ಈ ಬಗೆಯ ಪ್ರಜಾಪ್ರಭುತ್ವವನ್ನು ಎಷ್ಟು ಮತ್ತು ಹೇಗೆ ಸಾಧಿಸಬೇಕೆಂಬ ಬಗೆಗೆ ಇಂದು ಭಿನ್ನಾಭಿಪ್ರಾಯಗಳಿರಬಹುದು. ಆದರೆ ರಾಜಕೀಯ ಪ್ರಜಾ-ಪ್ರಭುತ್ವವೊಂದೇ ಸಾಕು ಎಂದು ಯಾರೂ ನಂಬುವುದಿಲ್ಲ.

ಹಿಂದುಸ್ಥಾನದ ಸ್ಥಿತಿಯೇನು? ದುರ್ದೈವದಿಂದ ನಾವಿನ್ನೂ ಬೆಂಥಾಮ್ ಗೊಡ್ವಿನ್ನರ ಕಾಲದಲ್ಲಿಯೇ ಇದ್ದಂತಿರುವೆವು. ಕಾಂಗ್ರೆಸ್ಸಿನ ಹಳಬರು ಮತ್ತು ಸೌಮ್ಯಪಕ್ಷೀಯರು ಪೂರ್ಣ ಪ್ರಾತಿನಿಧಿಕ ಪ್ರಭುತ್ವವು ದೊರೆತರೆ ಸಾಕೆಂಬುದ ಕ್ಕಿಂತ ಹೆಚ್ಚಿನ ಆದರ್ಶಗಳನ್ನಿಟ್ಟುಕೊಂಡಿಲ್ಲ.

ಪ್ರಾಯಕ್ಕೆ ಬಂದ ಪ್ರತಿಯೊಬ್ಬನಿಗೆ ಮತದಾನದ ಅಧಿಕಾರವು ಸಿಕ್ಕರೆ, ಜನತೆಯು ರಾಜ್ಯಯಂತ್ರವನ್ನು ಸ್ವಾಧೀನಪಡಿಸಿ ಅದನ್ನು ತಮ್ಮ ಕಲ್ಯಾಣಕ್ಕೆ ತಕ್ಕಂತೆ ನಡೆಸಲಾರದೋ ಎಂದು ನನಗೆ ಆಗಾಗ ಕೇಳುತ್ತಾರೆ. ಹಾಗೆಂದಿಗೂ ಆಗದೆಂದು ಖಂಡಿತವಾಗಿ ಹೇಳಬಹುದು. ಭಾರತೀಯ ಜನತೆಗಿಂತ ಹೆಚ್ಚು ಸುಶಿಕ್ಷಿತರಾದ ಯಾವ ದೇಶದ ಪ್ರಜೆಗಳೂ ಹೀಗೆ ಮಾಡಿಲ್ಲ. ಜನರಿಗೆ

ಪ್ರಜಾಪ್ರಭುತ್ವದ ಸಮಾನತೆಯು ತತ್ತ್ವದ ಉಪಚಾರವೇನೋ ನ್ಯಾಯವಾಗಿಯೇ ಆಗಿರಬಹುದು. ಆದರೆ ಹಸಿವೆ, ಸುಲಿಗೆ, ಕೆಲಸಗೇಡಿತನ, ಆಳ್ತನಗಳಿಂದ ಪಾರಾಗಲು ಅವರಿಗೆ ಬಲವು ಬಂದಿಲ್ಲ.

ಅಮೇರಿಕೆಯ ಸಂಯುಕ್ತಸಂಸ್ಥಾನಗಳಲ್ಲಿ ಜಗತ್ತಿನ ಯಾವ ರಾಷ್ಟ್ರಕ್ಕಿಂತಲೂ ಹೆಚ್ಚು ಐಶ್ವರ್ಯವಿದೆ. ಪ್ರಜಾಸತ್ತಾತ್ಮಕ ಪದ್ಧತಿ ಜನ್ಮವೆತ್ತಿದುದು ಅಲ್ಲಿಯೇ. ೧೫೦ ವರ್ಷಗಳಿಂದಲೂ ಅಲ್ಲಿ ಪ್ರಜೆಗಳ ಆಳಿಕೆಯಿದೆ. ಆದರೂ ಅಲ್ಲಿ ಸುಮಾರು ೧೫೦ ಲಕ್ಷ ಸಶಕ್ತರಾದ ಜನರು ತಮ್ಮ ಕುಟುಂಬಕ್ಕೆ ತೀರ ಕನಿಷ್ಠ ತರಗತಿಯ ಉಪಜೀವನಕ್ಕೆ ಬೇಕಾಗುವ ಸರಕುಗಳನ್ನು ಕೂಡ ಇಂದು ಒದಗಿಸಲಾರದಂತಹ ಕೆಟ್ಟ ಪರಿಸ್ಥಿತಿಯಲ್ಲಿದ್ದಾರೆ. ಎಲ್ಲರೂ ಹೆಮ್ಮೆಯಿಂದ ಕರೆಯುವ "ಜನರಿಗಾಗಿ ಜನರಿಂದ ನಡೆಸುವ ಜನರ ಆಳಿಕೆ" ಅಲ್ಲಿ ಇಷ್ಟು ದೀರ್ಘಕಾಲವಿದ್ದರೂ ಈ ಅವಸ್ಥೆಯಾಯಿತೆಂಬುದು ತೀರ ಆಶ್ಚರ್ಯಕಾರಕವಾದದ್ದು. ಜನರು ತಮ್ಮನ್ನು ತಾವು ಕೂಳುಗೇಡಿಗಳಾಗುವಂತೆ ಆಳಿಕೊಂಡರೆಂಬುದು ಅದ್ಭುತವಾದ ಆಶ್ಚರ್ಯ.

ಹಾಗಾದರೆ ಈ ಪ್ರಜಾಸತ್ತಾತ್ಮಕ ಪದ್ಧತಿಯ ಪ್ರಮಾದವೇನು? ಅದರ ಕೊರತೆ ಯಾವುದು? ಇದನ್ನೆಲ್ಲ ಹೆಚ್ಚಾಗಿ ಹುಡುಕಬೇಕಾಗಿಲ್ಲ. ಆರ್ಥಿಕ ಮತ್ತು ಸಾಮಾಜಿಕ ಅಂತಸ್ತುಗಳ ಭೇದಗಳಿರುವಲ್ಲಿ ಆರ್ಥಿಕ ಪ್ರಾಬಲ್ಯವುಳ್ಳ ವರ್ಗದವರು ರಾಷ್ಟ್ರದ ಅಧಿಕಾರವನ್ನು ಸುಲಭವಾಗಿ ವಶಪಡಿಸಿಕೊಂಡು ಜನತೆಯನ್ನು ಆಳ್ತನದಲ್ಲಿಡುವರು. ಐತಿಹಾಸಿಕ ದೃಷ್ಟಿಯಿಂದ ನೋಡಿದರೆ ಪ್ರಜಾಸತ್ತಾತ್ಮಕ ಪದ್ಧತಿಯ ಸರಕಾರವು ಬಂಡವಾಳಗಾರಿಕೆಯ ಏಳ್ಗೆಯೊಂದಿಗೆ ಸಮಕಾಲೀನವಾಗಿ ಹುಟ್ಟಿ ಬೆಳೆದಿವೆ. ಪಾಳೆಯಗಾರಿಕೆಯ ವಿಶೇಷಾಧಿಕಾರದ ಪ್ರಾಬಲ್ಯಗಳನ್ನು ಪ್ರತಿಭಟಿಸಲು ಧನಿಕರು ನಿರ್ಮಿಸಿದ ಒಂದು ಸಾಧನವೇ ಪ್ರಜಾಪ್ರಭುತ್ವ. ಆದುದರಿಂದ ಪ್ರಜಾಪ್ರಭುತ್ವದ ಹುಟ್ಟಿನ ಕಾರಣಗಳೇ ಅವನ್ನು ಬಂಡವಾಳಗಾರಿಕೆಯ ತೇರಿನಗಾಲಿಗಳಿಗೆ ಕಟ್ಟಿಬಿಟ್ಟವು. ಬಂಡವಾಳಗಾರರ ಆಳಿಕೆಯು ಅಡೆತಡೆಯಿಲ್ಲದೆ ನಡೆಯಲು ಪ್ರಜಾಸತ್ತಾತ್ಮಕ ಪದ್ಧತಿಯೆಂಬುದೊಂದು ಬಲವಾದ ಸಾಧನವಾಯಿತು. ಈ ಮೇರೆಗೆ ಪ್ರಜಾಪ್ರಭುತ್ವವೆಂಬ ಶುಭನಾಮದ ಮರೆಯಲ್ಲಿ ಧನಿಕರ ಪ್ರಭುತ್ವವು ನಗ್ನತಾಂಡವನಾಡುತ್ತಿದೆ. ಪ್ರಜಾಪ್ರಭುತ್ವವುಳ್ಳ ಇಂದಿನ ಪ್ರತಿಯೊಂದು ಪಾಶ್ಚಾತ್ಯ ದೇಶದ ಅನುಭವವೇ ಈ ಮಾತಿಗೆ ಸಾಕ್ಷಿ.

ಭಾರತವು ಇದೇ ಮಾದರಿಯನ್ನನುಸರಿಸಿದರೆ ಇದಕ್ಕಿಂತಲೂ ಲೇಸಾದ ಪರಿಸ್ಥಿತಿಯುಂಟಾಗಲಾರದು. ಆದರೆ ಇದಕ್ಕಿಂತಲೂ ಹೆಚ್ಚಿನ ಕೇಡುಗಳುಂಟಾಗುವುದು ಖಂಡಿತ. ಭಾರತೀಯ ಪ್ರಜಾಪ್ರಭುತ್ವದ ಸರಕಾರವೆಂದರೆ ಉನ್ನತ ವರ್ಗದವರ ಕೈಯಲ್ಲಿ ಬಡವರ ಸುಲಿಗೆಗೆ ಅನುಕೂಲವಾಗುವ ದುಷ್ಟ ಸಾಧನವಾಗುವುದು. ಈ ಉನ್ನತ ವರ್ಗದವರ ಬಗೆಗೆ ನಮಗಿರುವ ತಿಳುವಳಿಕೆಯ ಮೇಲಿಂದ ನೋಡಿದರೆ ಇದಕ್ಕಿಂತಲೂ ಹೆಚ್ಚಿನ ಹಿತಕಾರಕ ಪರಿಸ್ಥಿತಿಯುಂಟಾದೀತೆಂದು ನಂಬಲಿಕ್ಕೆ ಸಾಧ್ಯವಿಲ್ಲ. ಭಾರತೀಯ ಗಿರಣಿಕಾರನಿಗಿಂತ ಬ್ರಿಟಿಶ ಗಿರಣಿಕಾರನೇ ಒಳ್ಳೆಯ ಒಡೆಯನೆಂಬುದು ಪ್ರತಿಯೊಬ್ಬ ಕೂಲಿಕಾರನ ಸ್ವಂತ ಅನುಭವ. ಹಿಂದುಸ್ಥಾನದ ಹಣಗಾರರ ಮತ್ತು ವರ್ಗದಾರರ ಸುಲಿಗೆಯನ್ನು ಅರಿಯದವರಾರು ? ದಬ್ಬಾಳಿಕೆ ಮತ್ತು ಅತ್ಯಾಚಾರಗಳ ವಿಷಯದಲ್ಲಿ ಭಾರತದ ರಾಜರುಗಳಿಗೆ ಎಲ್ಲಿಯೂ ಸಾಟಿಯಿಲ್ಲ. ಪ್ರಭುತ್ವವು ಈ ವರ್ಗದ ವಶದಲ್ಲಿ ಬಂದಿತೆಂದರೆ ಜನತೆಯ ಪಡಿಪಾಟಲೇನಾಗುವುದೆಂದು ಹೇಳಲು ಸಾಧ್ಯವಿಲ್ಲ.

## ವಿಕಾಸದ ಮೆಟ್ಟಲುಗಳು

ಸಮಾಜವಿಕಾಸದ ಎಲ್ಲ ಮೆಟ್ಟಲುಗಳನ್ನು ನಾವು ಒಂದೇ ಸಲ ಹತ್ತಿಬಿಡುವುದು ಶಕ್ಯವಲ್ಲ. ಯುರೋಪಿನಂತೆ ಧನಿಕರ ವರ್ಚಸ್ವವುಳ್ಳ, ಪ್ರಜಾಸತ್ತಾತ್ಮಕ ಪದ್ಧತಿಯ ಅನುಭವವನ್ನು ಪಡೆದು ನಾವು ಸಾಮ್ಯವಾದವನ್ನು ಅಂಗೀಕರಿಸಬಹುದೆಂದು ಕೆಲವರು ಒತ್ತಿ ಹೇಳುವರು. ಸೋವಿಯೆಟ್, ಚೀನ ಮತ್ತು ರಶಿಯಾ ದೇಶಗಳು ಈ ಮಾತಿನ ಪೊಳ್ಳುತನವನ್ನು ಹೊರಗೆಡಹುತ್ತವೆ. ಒಂದು ದೇಶವು ಸಂಪೂರ್ಣ ಉದ್ಯೋಗೀಕೃತ (Industrialised) ವಾಗುವ ವರೆಗೆ ಪೂರ್ಣ ಸಾಮ್ಯವಾದವನ್ನು ಅಲ್ಲಿ ಸ್ಥಾಪಿಸುವುದು ಸಾಧ್ಯವಿಲ್ಲವೆಂಬುದು ನಿಜ. ಔದ್ಯೋಗಿಕ ದೃಷ್ಟಿಯಿಂದ ಹಿಂದುಳಿದ ಭಾರತವು ಪೂರ್ಣ ಉದ್ಯಮೀಕೃತ ರಾಷ್ಟ್ರವಾಗಬೇಕಾದರೆ ಕೆಲವು ಕಾಲವು ಸಹಜವಾಗಿಯೇ ಬೇಕಾಗುವುದು. ಆದುದರಿಂದ ಅದನ್ನು ತಕ್ಷಣ ಸಾಮ್ಯವಾದೀಯ ರಾಷ್ಟ್ರವನ್ನಾಗಿ ಮಾಡುವುದು ದುಸ್ತರವೆಂಬಲ್ಲಿ ಏನೂ ಸಂದೇಹವಿಲ್ಲ. ಆದರೆ ಈ ಉದ್ಯಮೀಕರಣ ಮತ್ತು ಸಾಮಾನ್ಯ ಆರ್ಥಿಕ ವಿಕಾಸ ಇವುಗಳು ಬಂಡವಾಳಗಾರಿಕೆಯ ಶಿಷ್ಟವೃತ್ತಿಯನ್ನೇಕೆ ಅವಲಂಬಿಸಬೇಕೆಂಬುದೇ ನಮಗೆ ತಿಳಿಯಲೊಲ್ಲದು. ಈಗ ಸಾಮ್ಯವಾದದ ಶಕ್ತಿಯು ಬೆಳಕಿಗೆ ಬಂದಿದೆ. ಭೂಮಿಯ

ಆರನೆಯ ಒಂದು ಭಾಗದಲ್ಲಿ ಅದು ನೆಲೆಯಾಗಿ, ಗೆಲುವು ಪಡೆದಿದೆ. ಬಂಡವಾಳಗಾರಿಕೆಯು ಈಗ ನೆಲಕ್ಕುರುಳುತ್ತಿದೆ. ಅದು ಉತ್ಪಾದನ ಶಕ್ತಿಯನ್ನು ಬೆಳೆಸುವುದಕ್ಕಿಂತ ಹೆಚ್ಚಾಗಿ ಕಡಿಮೆ ಮಾಡುತ್ತಿದೆ. ಇಂತಹ ಸಂದರ್ಭದಲ್ಲಿ ಜನತೆಯನ್ನು ಸುಲಿಗೆಗಾರರಾದ ಕುಬೇರರ ಕೈಗೊಪ್ಪಿಸಿದರೆ ಅವರು ರಾಷ್ಟ್ರದ ಆರ್ಥಿಕೋನ್ನತಿಯನ್ನು ಸಾಧಿಸುವರೆಂದು ತಿಳಿಯುವುದು ಶುದ್ಧ ಅವಿವೇಕ. ಜಗತ್ತಿನಲ್ಲಿ ಬಂಡವಾಳಗಾರಿಕೆಯು ಅಸ್ತವ್ಯಸ್ತ ಕಾರಭಾರದ ಪಕ್ಷಪಾತದಿಂದ ನರಳುತ್ತಿರುವಾಗ ಸಾಮ್ಯವಾದಿಯಾದ ರಶಿಯಾದೇಶದ ಗೆಲುವು ಹೊಂದಿ ತಾಳಿ ಬೆಳೆಯುವ ಆರ್ಥಿಕ ಜೀವನವು, ಸಮಾಜದ ಉತ್ಪಾದನ ಶಕ್ತಿಯ ವಿಕಾಸವನ್ನು ಸಾಧಿಸುವಲ್ಲಿ ಸಾಮ್ಯವಾದಕ್ಕಿರುವ ಹೆಚ್ಚಿನ ಯೋಗ್ಯತೆಯನ್ನು ವ್ಯಕ್ತ ಮಾಡುವುದು.

ಇದಲ್ಲದೆ ಇನ್ನೊಂದು ಮಹತ್ವದ ವಿಚಾರವಿದೆ. ಧನಿಕ ವರ್ಗವು ತನ್ನ ಮುಂದಾಳುತನದಲ್ಲಿ ರಾಜಕೀಯ ಕ್ರಾಂತಿಯನ್ನು ಜಯಶೀಲವಾಗಿ ಸಾಗಿಸಿದರೆ ಅದು ವರ್ಗದಾರರೊಡನೆ ಸೇರಿ ಜನಾಂಗದ ಮೇಲೆ ತನ್ನ ಆಳಿಕೆಯನ್ನು ನಡೆಸುವುದು. ಮತ್ತು ಅದು ಪ್ರಜಾಪ್ರಭುತ್ವದ ವೇಷವನ್ನು ಹಾಕಿಕೊಳ್ಳುವುದು. ಅಥವಾ ಫ್ಯಾಸಿಜಮ್ಮಿನ ಆಳಿಕೆಯನ್ನು ಸಾರುವುದು. ಹೀಗಾದಪಕ್ಷಕ್ಕೆ ಜನತೆ ತನ್ನ ಬಿಡುಗಡೆಗಾಗಿ ಇನ್ನೊಂದು ಕ್ರಾಂತಿಯನ್ನು ಕೈಕೊಳ್ಳಬೇಕಾಗುವುದು.

ಆದರೆ ಬಡತನದ ಬೇಗೆಯಿಂದ ಬಳಲುತ್ತಿರುವ ಹಳ್ಳಿಯ ಮಧ್ಯಮ ವರ್ಗದವರು, ಮಡಿತದಾಳುಗಳು, ಒಕ್ಕಲಿಗರು ಮುಂತಾದವರಿಂದ ಕೂಡಿದ ಜನತೆಯು ಸಾಮ್ರಾಜ್ಯವಾದವನ್ನು (Imperialism) ಗಾಳಿಗೆ ತೂರುವುದೇ ಹೌದಾದರೆ, ತನ್ನ ಬೆವರುಹನಿಗಳನ್ನು ಸುರಿಸಿ ಗಳಿಸಿದ ರಾಜಕೀಯ ಪ್ರಭುತ್ವವನ್ನು ಅವರು ಬಂಡವಾಳಗಾರರ ಕೈಗೊಪ್ಪಿಸಬೇಕೆಂದು ಸೂಚಿಸುವುದು ಮಹಾಪರಾಧ. ಇಂತಹ ಸಂದರ್ಭದಲ್ಲಿ ಬರುವ ಧನಿಕವರ್ಗದ ಆಳಿಕೆಯೆಂದರೆ ಬೇಕೆಂದು ಮಾಡಿದ ಜನತೆಯ ಹಿತದ ಹೋಮ ಅಥವಾ ಆಹುತಿಯೆಂದು ಖಂಡಿತವಾಗಿ ಹೇಳಬಹುದು. ಆದುದರಿಂದ ಜನತೆ ತನ್ನಲ್ಲಿಯ ಪೂರ್ಣ ಜಾಗೃತವಾದ ಮತ್ತು ವಿಶೇಷ ಕ್ರಾಂತಿಕಾರಕವಾದ ಶ್ರಮಜೀವಿಗಳ ಸಂಗಡದ ಮುಂದಾಳುತನದಲ್ಲಿ ಸ್ವರಾಜ್ಯವನ್ನು ಸ್ಥಾಪಿಸಿ ಸಾಮ್ಯವಾದದ ಕಡೆಗೆ ಸಾಗಬೇಕು. ಇದುವೆ ಸರಿಯಾದ ದಾರಿ.

## ಗಾಂಧಿಯವರ ತತ್ತ್ವಗಳು

ಗಾಂಧಿಯವರು ನಮ್ಮ ಸ್ವರಾಜ್ಯದಲ್ಲಿ ಸಮಾಜದ ಘಟನೆಯು ಹೇಗಿರಬೇಕೆಂಬ ಬಗೆಗೆ ನೇರವಾಗಿ ಮತ್ತು ಪೂರ್ಣವಾಗಿ ಎಂದೂ ವಿವೇಚನೆ ಮಾಡಿಲ್ಲ. ಆದುದರಿಂದ ಗಾಂಧಿಯವಾದಕ್ಕೆ ನಾವು ಯಾವುದ ಮಾನವನ್ನು ಕಲ್ಪಿಸಬಲ್ಲ ಸರಿಯಾದ ಒಸ್ಕಿಂದು ವ್ಯಾಖ್ಯೆಯೆಂದು ಹೇಳಲಿಕ್ಕೆ ಬರುವಂತಿಲ್ಲ. ಆದರೂ ಅವರು ಹಲವು ಸಂದರ್ಭಗಳಲ್ಲಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಮಾಡಿದ್ದಾರೆ. ಅವರ ಬರೆಹಗಳಿಂದ ಅವರ ಆರ್ಥಿಕ ವಿಚಾರಗಳನ್ನು ಆಯ್ದುಕೊಳ್ಳಬಹುದು. ಇವುಗಳು ಗಾಂಧಿಯವರಿಗಲ್ಲದಿದ್ದರೂ ಅವರ ಅನುಯಾಯಿಗಳಿಗೆ ಸಾಮ್ಯವಾದದ ಸ್ಥಾನವನ್ನು ಬದಲಿಸಬಲ್ಲ ಯೋಗ್ಯವಾದ ವಿಚಾರಗಳೆಂದು ಖಂಡಿತವಾಗಿ ತೋರುತ್ತವೆ. "ಹಿಂದುಸ್ಥಾನಕ್ಕೆ ತಕ್ಕುದಾದ ಸಾಮ್ಯವಾದವೆಂದರೆ ಗಾಂಧಿಯವರ ವಿಚಾರಗಳು" ಎಂಬ ಅಭಿಪ್ರಾಯವು ಆಗಾಗ್ಗೆ ಕೇಳಿ ಬರುತ್ತದೆ. ಆದುದರಿಂದ ನನ್ನ ವಿವೇಚನೆಗೆ ಸಂಬಂಧಪಡುವ ಗಾಂಧಿಯವರ ವಿಚಾರಗಳನ್ನು ವಿಮರ್ಶಿಸಬೇಕೆಂದು ನನ್ನ ಅಪೇಕ್ಷೆ.

ಇದಕ್ಕಿಂತ ಮುಂಚೆ ನಾನೆತ್ತಿದ ಪ್ರಮೇಯದ ಪುನರುಚ್ಚಾರವನ್ನು ಮಾಡುವೆನು. ಆರ್ಥಿಕ ಅಸಮತೆ ಅನಾಚಾರಗಳ ಮೂಲವನ್ನೇ ಸಂಪೂರ್ಣವಾಗಿ ಒಮ್ಮೆ ಕಿತ್ತು ನಾಶಗೊಳಿಸುವುದು ನಮ್ಮ ಸಂಕಲ್ಪ. ಉತ್ಪತ್ತಿ ಸಾಧನಗಳ ವ್ಯಕ್ತಿಗತ ಒಡೆತನವನ್ನು ಅಳಿಸುಬಿಡುವುದೇ ಸಾಮ್ಯವಾದವು ಸೂಚಿಸುವ ಉಪಾಯವೆಂದು ಮೊದಲೇ ಹೇಳಿದ್ದೇನೆ. ಆದರೆ ಗಾಂಧಿಯವರು ಈ ಪ್ರಶ್ನೆಯನ್ನು ಹೇಗೆ ಬಿಡಿಸುವರೆಂಬುದನ್ನು ನೋಡೋಣ.

ಕಳೆದ ವರ್ಷ ಸಂಯುಕ್ತ ಪ್ರಾಂತದ ಕೆಲವು ಜಮೀನುದಾರರಿಗೆ ಗಾಂಧೀಜಿಯವರು ಕೊಟ್ಟ ಹೇಳಿಕೆಯಲ್ಲಿ ನಾನೆತ್ತಿದ ಸಮಸ್ಯೆಗೆ ಸಂಬಂಧಪಟ್ಟ ಕೆಲವು ಅಂಶಗಳು ಒಡೆದು ಕಾಣುತ್ತವೆ. ಶ್ರೀ. ಮಹಾದೇವ ದೇಸಾಯಿಯವರು ಆ ಹೇಳಿಕೆಯನ್ನು ಯಥಾವತ್ತಾಗಿ ಪ್ರಕಟಿಸಿದ್ದಾರೆ.

ನನ್ನ ವಿಮರ್ಶೆಯನ್ನು ವಾಚಕರು ಸರಿಯಾಗಿ ತಿಳಿದುಕೊಳ್ಳಲೆಂಬ ಬುದ್ಧಿಯಿಂದ ನಮ್ಮ ಚರ್ಚೆಗೆ ಸಂಬಂಧವಿರದ ಆ ಹೇಳಿಕೆಯ ಕೊನೆಯ ಕೆಲವೇ ಅಂಶವನ್ನುಳಿದು, ಮಿಕ್ಕುದೆಲ್ಲವನ್ನೂ ಈ ಕೆಳಗೆ ಕೊಟ್ಟಿರುವೆನು.

**ಪ್ರಶ್ನೆ ೧:**— ಕರಾಚಿಯ ಕಾಂಗ್ರೆಸಿನಲ್ಲಿ ಜನತೆಯ ಮೂಲಭೂತ ಹಕ್ಕುಗಳನ್ನು ಸಾರುವ ನಿರ್ಣಯವೊಂದಾಗಿದೆ. ಅದು ಸ್ವಂತ ಆಸ್ತಿಯೆಂಬುದನ್ನು ಗುರುತಿಸುವುದರಿಂದ ರಾಷ್ಟ್ರೀಯ ಮನೋಗತಿಯ ಜಮೀನುದಾರರೆಲ್ಲ ಕಾಂಗ್ರೆಸಿಗೆ ಬೆಂಬಲರಾಗಿರುವರು. ಆದರೆ ಸ್ವಂತ ಆಸ್ತಿಯೆಂಬುದಿರಬಾರದೆಂದು ಬಯಸುವ ಸಾಮ್ಯವಾದಿಗಳ ಪಂಗಡವೊಂದು ಕಾಂಗ್ರೆಸಿನಲ್ಲಿ ತಲೆಯೆತ್ತಿದೆ. ಆದುದರಿಂದ ಕಾಂಗ್ರೆಸಿನ ಇನ್ನು ಮುಂದಿನ ಧೋರಣವೇನು? ಸಾಮ್ಯವಾದಿಗಳ ಈ ವಿಚಾರಗಳಿಂದ ವರ್ಗಕಲಹವು ಕೂಡಲೆ ಪ್ರಾರಂಭವಾಗಲಿಕ್ಕಿಲ್ಲವೋ? ಇದನ್ನು ನೀವು ತಡೆಯುವಿರಾ?

**ಉತ್ತರ ೧:**— ಕರಾಚಿಯ ನಿರ್ಣಯವನ್ನು ಮುಂದಿನ ಕಾಂಗ್ರೆಸಿನ ಅಧಿವೇಶನದ ಮಹಾಸಭೆಯು ಬದಲಿಸಬಲ್ಲುದು. ಆದರೆ ನಾನು ನಿಮಗೆ ಇಷ್ಟೊಂದು ನಂಬುಗೆಯನ್ನು ಕೊಡುವೆನು. ನ್ಯಾಯವಾದ ಕಾರಣಗಳಿಲ್ಲದೆ ಸಾವುಕಾರರ ಸ್ವಂತ ಒಡೆತನದ ಆಸ್ತಿಗಳನ್ನು ಕಸಿದುಕೊಳ್ಳುವುದರಲ್ಲಿ ನಾನು ಪಾಲುಗೊಳ್ಳುವುದಿಲ್ಲ. ನಿಮ್ಮ ಹೃದಯವನ್ನು ಹೊಕ್ಕು ಅದನ್ನು ಪರಿವರ್ತನೆಗೊಳಿಸುವುದೇ ನನ್ನ ಉದ್ದೇಶ. ಅಂದರೆ ನಿಮ್ಮ ಸ್ವಂತ ಆಸ್ತಿಗಳನ್ನೆಲ್ಲ ನಿಮ್ಮ ಒಕ್ಕಲುಗಳಿಗೆಂದು (ರೈತರೆಂದು), ಪ್ರಾಮುಖ್ಯವಾಗಿ ಅವರ ಹಿತಕ್ಕೆಂದು ಇಟ್ಟುಕೊಂಡು ನೀವು ಬಳಸುವಿರೆಂದು ನನ್ನ ಆಶೆ. ಕಾಂಗ್ರೆಸಿನ ಬಳಗದಲ್ಲಿ ಸೋಶಾಲಿಸ್ಟ್ ಪಾರ್ಟಿಯೆಂಬುದು ಉದಯವಾಗುತ್ತಿದೆಯೆಂಬುದನ್ನು ನಾನು ಬಲ್ಲೆ. ಕಾಂಗ್ರೆಸನ್ನು ತನ್ನ ದಾರಿಗೆ ಸೆಳೆಯುವುದರಲ್ಲಿ ಅದಕ್ಕೆ ಗೆಲುವು ಸಿಕ್ಕರೆ ಮುಂದೆ ಏನಾಗುವುದೆಂಬುದನ್ನು ನಾನು ಹೇಳಲರಿಯೆ. ಆದರೆ ಇಷ್ಟು ಮಾತ್ರ ನಿಶ್ಚಯ. ನಮ್ಮ ಕೋಟಿಗಟ್ಟಲೆ ಪ್ರಜೆಗಳ ಅತ್ಯಂತ ಪ್ರಾಮಾಣಿಕವಾದ ಮತ್ತು [illegible] ಸಮಾನ ಅಭಿಮತವನ್ನು ಪಡೆದರೆ ಸೊತ್ತುಳ್ಳ ವರ್ಗದವರ ಆಸ್ತಿಗಳನ್ನೆಲ್ಲ ಕಸಿದುಕೊಳ್ಳಲು ಅನುಕೂಲವಾದ ಒಪ್ಪಿಗೆಯು ದೊರೆಯಲಾರದು. ಕೂಲಿಕಾರ ಮತ್ತು ಬಂಡವಾಳಗಾರ, ಒಕ್ಕಲು ಮತ್ತು ವರ್ಗದಾರ ಇವರುಗಳಲ್ಲಿ ಸಹಕಾರ-ಸಹಯೋಗಗಳನ್ನುಂಟು ಮಾಡುವುದಕ್ಕಾಗಿ ನಾನು ಎಡೆಬಿಡದೆ ದುಡಿಯುತ್ತಿದ್ದೇನೆ. ಕಾಂಗ್ರೆಸಿನ ಧ್ಯೇಯ-ಧೋರಣಗಳಿಗೊಪ್ಪಿ ನಾಲ್ಕಾಣೆಗಳನ್ನು ತೆತ್ತು ತೀರ ಬಡವರು ಅದರ ಸದಸ್ಯರಾಗುವಂತೆ ನೀವಾದರೂ ಆಗಬಹುದು. ಆದರೆ ನಿಮಗೆ ನಾನೊಂದು ಎಚ್ಚರಿಕೆಯ ಮಾತನ್ನು ಹೇಳಲೇಬೇಕು. ಗಿರಣಿಕಾರರು ತಮ್ಮ ಗಿರಣಿಗಳ ಪೂರ್ಣ ಯಜಮಾನರಲ್ಲ

ವೆಂದೂ, ಕೆಲಸಗಾರರೂ ಅವುಗಳ ಸಮಾನ ಹಕ್ಕುದಾರರೆಂದೂ ನಾನು ಯಾವಾಗಲೂ ಗಿರಣಿಕಾರರಿಗೆ ಹೇಳಿದ್ದೇನೆ. ಹಾಗೆಯೇ ನಿಮ್ಮ ಆಸ್ತಿಗಳ ಮೇಲೆ ನಿಮ್ಮಷ್ಟೇ ಒಡೆತನವು ಒಕ್ಕಲುಗಳಿಗೂ (ರೈತರಿಗೂ) ಇದೆಯೆಂದು ನಾನು ಹೇಳುವೆನು. ಆದುದರಿಂದ ನಿಮ್ಮ ಕೈಗೆ ಬಂದ ಹುಟ್ಟುವಳಿಯನ್ನೆಲ್ಲ ದುಂದುಗಾರಿಕೆಯಲ್ಲಿಯೂ, ವಿಲಾಸಕ್ಕಾಗಿಯೂ ವಿನಿಯೋಗಿಸಲಾಗದು. ಅದನ್ನು ಕೃಷೀವಲರ ಕಲ್ಯಾಣಕ್ಕಾಗಿ ಉಪಯೋಗಿಸಬೇಕು. ನಿಮ್ಮಲ್ಲಿ ಒಕ್ಕಲುಗಳ ಬಗೆಗೆ ಒಂದು ಆತ್ಮೀಯ ಭಾವವು ಇದೆಯೆಂದು ಅವರ ಅನುಭವಕ್ಕೆ ಬಂದಿತೆಂದರೆ, ಒಂದು ಬಳಗದ ಜನರ ಅನ್ಯೋನ್ಯ ಹಿತಸಂಬಂಧಗಳಂತೆ ನಿಮ್ಮಲ್ಲಿ ಅವರ ಹಿತಸಂಬಂಧಗಳು ಸುರಕ್ಷಿತವಾಗಿವೆಯೆಂದು ಅವರಿಗೆನಿಸಿದರೆ ಒಕ್ಕಲು-ಧನಿಗಳಲ್ಲಿ ವೈಷಮ್ಯವು ತಲೆದೋರಿ ವರ್ಗಕಲಹವು ಎಂದೂ ಆಗಲಾರದು.

ವರ್ಗಕಲಹವು ಭಾರತದ ಜಾಯಮಾನಕ್ಕೆ ತೀರ ಹೊರತು. ಎಲ್ಲರ ಮೂಲಭೂತವಾದ ಹಕ್ಕುಗಳ ವಿಶಾಲವಾದ ತಳಹದಿಯ ಮೇಲೆ ಸಮಾನ ನ್ಯಾಯದ ಮೇರೆಗೆ ಇಲ್ಲಿ ಸಂಘವಾದವನ್ನು ವಿಕಾಸಗೊಳಿಸಬಹುದು. ನನ್ನ ಕನಸಿನ ರಾಮರಾಜ್ಯವು ಬಡವರ ಮತ್ತು ಬಲ್ಲಿದರ ಹಕ್ಕುಗಳನ್ನು ಏಕರೀತಿಯಲ್ಲಿ ಸಾಧಿಸಿ ಪಾಲಿಸುವುದು.

ವರ್ಗಕಲಹವು ಆಗದಂತೆ ನಾನು ನನ್ನ ಪೂರ್ಣ ವರ್ಚಸ್ಸನ್ನು ಉಪಯೋಗಿಸುವೆನೆಂಬ ಬಗೆಗೆ ನಿಮಗೆ ಅನುಮಾನವಿರದಿರಲಿ. ನನ್ನ ಮೇಲೆ ನಾನೇ ಹೇರಿರುವ ನಿರ್ಬಂಧವು ಆಗಸ್ಟ್ ಮೂರನೆಯ ದಿನಾಂಕಕ್ಕೆ ಮುಗಿದ ಬಳಿಕ ಏನು ಮಾಡಲಿರುವೆನೆಂಬುದನ್ನು ನಾನರಿಯೆ. ಮತ್ತೆ ಸೆರೆಮನೆಗೆ ಹೋಗದಂತೆ ಆದಷ್ಟು ಪ್ರಯತ್ನಪಡುವೆ. ಆದರೆ ಖಂಡಿತವಾಗಿ ಮುಂದೆ ಏನಾಗುವುದೆಂಬುವನ್ನು ನನಗೆ ತಿಳಿದಿರುವ ಪರಿಸ್ಥಿತಿಯಲ್ಲಿ ಹೇಳಲು ಸಾಧ್ಯವಿಲ್ಲ. ನಿಮ್ಮ ಸ್ವಂತ ಆಸ್ತಿಗಳನ್ನು ಅನ್ಯಾಯದಿಂದ ಅಪಹರಿಸುವ ಪ್ರಯತ್ನವು ನಡೆಯುವುದೇ ಕಂಡು ಬಂದರೆ ನಿಮಗಾಗಿ ನಾನು ಹೋರಾಡುವೆನೆಂಬುದನ್ನು ನೀವು ನಿಶ್ಚಿತವಾಗಿ ನೋಡುವಿರಿ.

**ಪ್ರಶ್ನೆ ೨:**—ಪರಿಷ್ಕೃತ ನ್ಯಾಯಸಭೆಯ (Assembly) ಬರಲಿರುವ ಚುನಾವಣೆಯಲ್ಲಿ ನಾವು ಕಾಂಗ್ರೆಸಿಗೆ ನೆರವಾಗಬೇಕೆಂದು ನಿರ್ಧರಿಸಿದ್ದೇವೆ. ಆದರೆ ಕಾಂಗ್ರೆಸ್ ಪ್ರತಿನಿಧಿಗಳು ಅಸೆಂಬ್ಲಿಯಲ್ಲಿ ಸ್ವೀಕರಿಸುವ ಧೋರಣದ

ಬಗೆಗೆ ನಮಗೆ ತುಂಬ ಅನುಮಾನವಿದೆ. ನೀವು ಪಾರ್ಲಿಮೆಂಟರಿ ಬೋರ್ಡಿನವರಿಗೆ ಹೇಳಿ ನಮ್ಮ ಅನುಮಾನಗಳ ನಿರಸನ ಮಾಡುವಿರಾ ?

**ಉತ್ತರ ೭:** — ಪಾರ್ಲಿಮೆಂಟರಿ ಬೋರ್ಡಿನ ಸದಸ್ಯರೊಡನೆ ಈ ವಿಷಯವನ್ನು ಚರ್ಚಿಸಲು ನಿಮಗೆ ನಾನು ಆಮಂತ್ರಿಸುವೆನು. ಸ್ವಂತ ಆಸ್ತಿಯೆಂಬುದನ್ನು ಕಸಿದುಕೊಳ್ಳುವ ಅಥವಾ ಕೇಳುವ ಮಾತನ್ನು ಯಾವ ಸದಸ್ಯನೂ ಎತ್ತುವುದಿಲ್ಲೆಂಬುದನ್ನು ನಾನು ಬಲ್ಲೆ. ಆದರೆ ಒಕ್ಕಲಿಗರೊಂದಿಗಿರುವ ನಿಮ್ಮ ಸಂಬಂಧಗಳಲ್ಲಿ ಮಾತ್ರ ಸಂಪೂರ್ಣ ಸುಧಾರಣೆಯಾಗಬೇಕೆಂದು ಅವರು ಹಟ ಹಿಡಿಯುವರು. ಈ ಬೇಡಿಕೆಯು ನಿಮಗೂ ಹೊಸತಲ್ಲ. ಕಾಲಮಹಿಮೆಯನ್ನರಿತು ಅದಕ್ಕನುಸರಿಸಿ ಜೀವನವನ್ನಡೆಸಬೇಕೆಂದು ನಿಮಗೆ ಸರ್ ಮಾಲ್ಕಮ್ ಹೇಲಿ ಮತ್ತು ಲಾರ್ಡ್ ಇರ್ವಿನ್ನರು ಬಿನ್ನವಿಸಿಕೊಂಡರು. ಇಷ್ಟೊಂದು ಕೆಲಸವನ್ನು ನೀವು ನೆರವೇರಿಸಿದರೆ ಅತ್ಯಂತ ಪರಿಶುದ್ಧವಾದ ಸ್ವದೇಶಿ ಪದ್ಧತಿಯ ಸಾಮ್ಯವಾದವನ್ನು ನಾವು ಖಂಡಿತವಾಗಿ ರೂಪುಗೊಳಿಸಬಲ್ಲೆವು. ಪಶ್ಚಿಮದ ಸಂಘವಾದ ಸಾಮ್ಯವಾದಗಳು ನಮಗಿಂತಲೂ ಮೂಲತಃ ಭಿನ್ನವಾದ ಕೆಲವು ಕಲ್ಪನೆಗಳ ಮೇಲೆ ಕಟ್ಟಲ್ಪಟ್ಟಿವೆ. ಮಾನವ ಸ್ವಭಾವವು ಸ್ವಾರ್ಥಮೂಲವಾಗಿದೆಯೆಂಬ ನಂಬುಗೆಯು ಇಂತಹ ಕಲ್ಪನೆಗಳಲ್ಲೊಂದು. ನಾನಿದಕ್ಕೆ ಸಮ್ಮತಿಸುವುದಿಲ್ಲ. ಏಕೆಂದರೆ ನನಗೆ ಪಶು-ಮಾನವರೊಳಗಿನ ಮೂಲಭೇದವು ಗೊತ್ತು. ಮಾನವನು ತನ್ನಲ್ಲಿರುವ ಆತ್ಮನ ಕರೆಗೆ ಓಗೊಡುವನು. ಪ್ರಾಣಿಗಳಲ್ಲಿ ಸಾಮಾನ್ಯವಾಗಿರುವ ವಾಸನೆಗಳನ್ನು ಮೀರಿ ನಿಲ್ಲಬಲ್ಲನು. ಸ್ವಾರ್ಥ ಹಿಂಸೆಗಳು ಪಶುಸ್ವಭಾವವೇ ಹೊರತು ಮಾನವನ ಅಮರನಾದ ಆತ್ಮನ ಗುಣಗಳಲ್ಲ. ಆದುದರಿಂದ ಮಾನವನು ಪಶುಗಳಿಗಿಂತ ಶ್ರೇಷ್ಠನು. ಇದು ಹಿಂದೂ ಧರ್ಮದ ಮೂಲ ತತ್ತ್ವ. ಈ ಸತ್ಯಶೋಧವು ಸಾವಿರಾರು ವರ್ಷಗಳ ನಿಷ್ಠುರ ತಪಸ್ಸಿನ ಫಲ. ಆದುದರಿಂದಲೇ ನಮ್ಮಲ್ಲಿ ಆತ್ಮರಹಸ್ಯವನ್ನು ಅರಿಯುವುದಕ್ಕಾಗಿ ಅನೇಕ ಋಷಿಮುನಿಗಳು ದೇಹವನ್ನು ದಂಡಿಸಿ ಕರಣಗಳನ್ನು ಹಿಂಡಿಸಿ ಪ್ರಾಣಾರ್ಪಣೆಯನ್ನು ಮಾಡಿದ್ದಾರಲ್ಲದೆ, ಪಾಶ್ಚಾತ್ಯರಂತೆ ಭೂಮಿಯ ಅತ್ಯಂತ ದೂರದ ಅಥವಾ ಅತ್ಯುನ್ನತ ಸ್ಥಳಗಳನ್ನು ಕಂಡುಹಿಡಿಯುವುದಕ್ಕಾಗಿ ಜೀವವನ್ನು ಕಳೆದುಕೊಂಡಿಲ್ಲ. ಎಂದ ಬಳಿಕ ನಮ್ಮ ಸಂಘವಾದವಾಗಲಿ, ಸಾಮ್ಯವಾದವಾಗಲಿ, ಅಹಿಂಸೆಯ ಅಸ್ತಿವಾರದ ಮೇಲೆ ನಿಲಿಸಲಾಗಬೇಕು. ಅದನ್ನು

ಕೂಲಿಕಾರ-ಬಂಡವಾಳಗಾರ, ಒಕ್ಕಲು-ಸರ್ದಾರ ಇವರುಗಳ ಮಧುರ ಸಹಕಾರದಿಂದಲೇ ಬೆಳೆಸಬೇಕು.

ಕಾಂಗ್ರೆಸಿನ ಧ್ಯೇಯ-ಧೋರಣೆಗಳಲ್ಲಿ ನಿಮ್ಮನ್ನು ಬೆದರಿಸುವಂಥದೇನೂ ಇಲ್ಲ. ನಾನು ಹೇಳುವುದನ್ನು ದಯೆಯಿಟ್ಟು ಲಾಲಿಸಿ. ನಿಮ್ಮ ಅನುಮಾನ ಭೀತಿಗಳೆಲ್ಲವೂ ಪಾಪಮಯ ಮನಸ್ಸಿನ ಫಲಗಳು. ತಿಳಿದಾಗಲಿ, ತಿಳಿಯದೆ ಆಗಲಿ ಮಾಡಿದ ಅನ್ಯಾಯಗಳಿಗಾಗಿ ನೀವು ಅಪರಾಧಿಗಳಾಗಿರುವಿರಿ. ಅಂತಹ ಅನ್ಯಾಯಗಳನ್ನೆಲ್ಲ ಉಡುಗಿರಿ; ಕಾಂಗ್ರೆಸಿನ ಮತ್ತು ಕಾಂಗ್ರೆಸ್ ಕೆಲಸಗಾರರ ಮಿಮರಿಕೆಯನ್ನು ತೋರಿಯಿರಿ. ಒಕ್ಕಲಿಗರ ಮತ್ತು ಜಮೀನ್ದಾರರ ಸಂಬಂಧಗಳನ್ನಷ್ಟು ನೀವು ಸುಧಾರಿಸಿದರೆ, ನಿಮ್ಮ ಸರಕಾರ ನಿಮ್ಮ ಸ್ವಂತ ಆಸ್ತಿ-ಹಕ್ಕುಗಳನ್ನು ಕಾಪಾಡಲು ನಾವು ಮುಂಗುಡೆಯಿರಿ ಹೋರಾಡುವೆವು. ನಾನು "ನಾವು" ಎಂಬ ಪದವನ್ನುಚ್ಚರಿಸುವಾಗ ನನ್ನ ಕಣ್ಣೆದುರು ಪಂಡಿತ ಜವಾಹರಲಾಲರಿದ್ದಾರೆ. ಈ ಮೂಲಭೂತವಾದ ಅಹಿಂಸೆಯ ವಿಷಯದಲ್ಲಿ ನಮ್ಮಿಬ್ಬರಲ್ಲಿಯೂ ಭೇದವಿಲ್ಲೆಂಬುದು ನನಗೆ ಖಂಡಿತ ಗೊತ್ತು. ಪಂಡಿತರು ಆಸ್ತಿಯ ರಾಷ್ಟ್ರೀಕರಣವಾಗಬೇಕೆಂದು ಮಾತಾಡುತ್ತಿರುವುದು ನಿಜ. ಆದರೆ ನೀವು ಅದಕ್ಕೆ ಬೆದರಬೇಕಾಗಿಲ್ಲ. ವ್ಯಕ್ತಿಗಳ ಸಮ್ಮತಿಯಿಲ್ಲದೆ ಬರಿದೇ ರಾಷ್ಟ್ರಕ್ಕೆ ಆಸ್ತಿಗಳನ್ನಿಟ್ಟುಕೊಳ್ಳುವುದು ಶಕ್ಯವಿಲ್ಲ. ಆಸ್ತಿಯ ಮಾಲು ಮಾನ್ಯಗಳನ್ನು ನಿಲ್ಲಿಸಿ ಅವರ ನ್ಯಾಯವಾದ ಮತ್ತು ಸಮಾನವಾದ ಪ್ರಯೋಜನವಾಗುವಂತೆ ರಾಷ್ಟ್ರವು ವ್ಯವಸ್ಥೆ ಮಾಡುವುದು. ಒಕ್ಕಲುಗಳ ಒಳಿತಿಗಾಗಿ ನಿಮ್ಮ ಆಸ್ತಿಗಳನ್ನಿಟ್ಟು ಬಳಸುವುದಕ್ಕೆ ನಿಮಗೆ ಮನ್ನಣೆದಾರರ ಆಕ್ಷೇಪಣೆಗಳಿರಬಹುದೆಂದು ನನಗೆ ತೋರುವುದಿಲ್ಲ. ಒಕ್ಕಲಿಗರಿಗೆ ಕೊರತೆಯಿಲ್ಲದೆ ಸುಖವಾಗಿ ಬಾಳುವುದಕ್ಕಿಂತ ಹೆಚ್ಚಿನ ಹಂಬಲುಗಳಿಲ್ಲ. ಆಸ್ತಿಯು ಅವರ ಹಿತಕ್ಕಾಗಿರುವ ವರೆಗೆ ಅದರ ಒಡೆತನವು ನಿಮ್ಮದಾಗಿರಲು ಅವರ ತೊಂದರೆಯಿಲ್ಲ.

—ದಿ ಲೀಡರ್, ಆಗಸ್ಟ್ ೩, ೧೯೩೪.

## ಗಾಂಧೀ ಮಾರ್ಗವು ಪೂರ್ಣ ಭಾರತೀಯವಲ್ಲ

ಈ ವಿಲಕ್ಷಣವಾದ ಸಮ್ಮಿಶ್ರಣದ ವಿಮರ್ಶೆ ಮಾಡುವುದಕ್ಕಿಂತ ಮುಂಚೆ, ಗಾಂಧಿಯವರ ವಿಚಾರ ಪ್ರಣಾಲಿಯು ಕೇವಲ ಭಾರತೀಯವಾದುದೋ ಹೇಗೆಂಬುದನ್ನು ಆಲೋಚಿಸುವದೊಳಿತು. ಅದು "ಸ್ವದೇಶೀಯ ಸಾಮ್ಯ

ನಾದ'', '' ಭಾರತದ ಜಾಯಮಾನ'', '' ಹಿಂದೂ ಧರ್ಮದ ಮೂಲಭೂತ ತತ್ತ್ವ''ಗಳ ಹೆಸರೆತ್ತಿದ್ದಾರೆ. ಹಿಂದೂ ಧರ್ಮದ ಕಲ್ಪನೆಗಳಿಂದ ಮೂಲತಃ ಭಿನ್ನವಾದ ಕಲ್ಪನೆಗಳ ಬುನಾದಿಯ ಮೇಲೆ ಪಾಶ್ಚಾತ್ಯ ಸಾಮ್ಯವಾದವನ್ನು ಕಟ್ಟಲಾಗಿದೆಯಂತೆ. ಆದುದರಿಂದ ನಮ್ಮ ವಿದೇಶೀಯ ಸಾಹುಕಾರರಿಗಿಂತ ಅವರ ದೇಶೀಯ ಸಾಮ್ಯವಾದವೇ ಭಾರತಕ್ಕೆ ಹೆಚ್ಚು ಐಕ್ಯವಾಗಿದೆಯೆಂದು ನಾವು ಸಹಜವಾಗಿಯೇ ಇದರಿಂದ ತಿಳಿದುಕೊಳ್ಳಬಹುದು. ಅಂದಬಳಿಕ ಗಾಂಧೀಜಿಯವರ ಈ ಸಮರ್ಥನವು ಎಷ್ಟರಮಟ್ಟಿಗೆ ಸರಿಯಾಗಿದೆಯೆಂಬುದನ್ನು ನೋಡಬೇಕಾಯಿತು.

ನಿಜವಾಗಿ ನೋಡಿದರೆ ಗಾಂಧೀಯವರ ಸಾಮ್ಯವಾದದಲ್ಲಿ ಹೊಸತಾಗಲಿ, ಕೇವಲ ಭಾರತೀಯವಾಗಲಿ ಯಾವುದೂ ತೋರುವುದಿಲ್ಲ. ಅನೇಕ ಪಾಶ್ಚಾತ್ಯ ಲೇಖಕರು ಹೆಚ್ಚುಕಡಿಮೆ ಇದೇ ಬಗೆಯ ಅಭಿಪ್ರಾಯಪಟ್ಟವರಾಗಿದ್ದಾರೆ. ವಿಚಾರಸರಣಿಯು ಆಧಾರದಲ್ಲಿ ಭೇದವಿರಬಹುದಲ್ಲದೆ ಸಾರವು ಬಹುಶಃ ಒಂದೇ ಆಗಿದೆ.

ವರ್ಗಕಲಹವು ಮೂರ್ಖತನದ್ದು; ಕೂಲಿ-ಬಂಡವಾಳಗಳು ಒಂದನ್ನೊಂದು ಅವಲಂಬಿಸಿ ಒಂದಕ್ಕೊಂದು ಅಗತ್ಯವಾಗಿವೆ; ಕ್ರಾಂತಿಯು ವಿನಾಶಕಾರಿ; ಸಮಾಜದ ವಿರೋಧಕ ಶಕ್ತಿಗಳ ಸಮನ್ವಯವು ಕ್ರಾಂತಿಗಿಂತಲೂ ಉನ್ನತವಾದ ಆದರ್ಶ; ಕೂಲಿ, ಬೆಲೆ, ಲಾಭಗಳನ್ನು ಶುದ್ಧಬುದ್ಧಿಯಿಂದ ನಿಯಂತ್ರಿಸುವುದು; ಧರ್ಮದರ್ಶಿತ್ವ ( Trusteeship )ದ ಅಥವಾ ಸಂಚಿತನದ ವಾದ; ಇವುಗಳೆಲ್ಲ ಧನಿಕರಾದ ಪಾಶ್ಚಾತ್ಯ ಪಂಡಿತರು, ಶಾಸ್ತ್ರಜ್ಞರು, ಪಾದ್ರಿಗಳು ಮುಂತಾದವರು ಪ್ರಚಾರ ಮಾಡಿದ ಸರ್ವಸಾಮಾನ್ಯ ವಿಚಾರಗಳು.

ಎಚ್. ಜಿ. ವೆಲ್ಸರು ಸ್ಟಾಲಿನ್ನರಿಗೆ Clissoldism ನ ಬಗೆಗೆ ಬೋಧಿಸಿದುದನ್ನು ನಾನು ಮೊದಲೇ ಹೇಳಿದ್ದೇನೆ. ಅವರಿಬ್ಬರಲ್ಲಿ ನಡೆದ ಸಂವಾದಕತೆಗಳನ್ನು ಯಾರೂ ಓದಬಹುದು. ಮೇಲೆ ತೋರುವ ಭಾಷೆಯ ವ್ಯತ್ಯಾಸವನ್ನಷ್ಟು ಬಿಟ್ಟರೆ ವರ್ಗಕಲಹದ ಒಳಗಿನ ವಿಚಾರಗಳಲ್ಲಿ ಗಾಂಧಿ-ವೆಲ್ಸರಲ್ಲಿ ತುಂಬ ಸಾಮ್ಯವಿದೆಯೆಂದು ಕಾಣುತ್ತದೆ. '' ವರ್ಗಕಲಹವು ತಿಳಿಗೇಡಿತನದ್ದು. ಇಂದು ಒಂದಕ್ಕೊಂದು ವಿರುದ್ಧವಾಗಿರುವ ಹಿತಸಂಬಂಧಗಳಲ್ಲಿ ತಕ್ಕ

ಸ್ನೇಹ-ಸ್ನೇಹಗಳನ್ನುಂಟುಮಾಡಿದರೆ ಬಂಡವಾಳಗಾರಿಕೆಯ ಕೇಡುಗಳನ್ನೆಲ್ಲ ಕೊನೆಗಾಣಿಸಬಹುದು ” ಎಂಬುದೇ ಎಚ್. ಜಿ. ವೆಲ್ಸರ ವಿಚಾರಗಳ ಪಲ್ಲವಿ. ಸರಿಯಾದ ಮುಂದಾಳುಗಳ ಕೊರತೆಯಿದೆಯೆಂದು ಇಬ್ಬರಿಗೂ ತೋರುವುದು. ಗಾಂಧಿಯವರಂತೆ ವೆಲ್ಸರಾದರೂ ಧನಿಕರ ಹೃದಯ ಪರಿವರ್ತನೆಯಲ್ಲಿ ವಿಶ್ವಾಸ ವಿಟ್ಟಿದ್ದಾರೆ.

ರಾಮ್ಸೆ ಮೆಕ್ಡೊನಾಲ್ಡರಾದರೂ ತಾವು ಸಾಮ್ಯವಾದಿಗಳೆಂದು ಹೇಳಿ-ಕೊಳ್ಳುತ್ತಿದ್ದಾಗ ವರ್ಗಕಲಹಕ್ಕೆ ವಿರುದ್ಧವಾಗಿದ್ದರು. “ ಇತ್ತೀಚೆಗೆ ನಡೆದ ಕೂಲಿ-ಬಂಡವಾಳಗಳ ಜಗಳದಿಂದ ಸಾಮ್ಯವಾದಿಗೆ ಬಹಳ ಅವಮಾನವಾಗಿದೆ. ಆತನ ಅಂತಃಕರಣಕ್ಕೆ ಇದು ರುಚಿಸುವುದಿಲ್ಲ. ಈ ಕಲಹಗಳು ಅನೀತಿಯನ್ನೂ ಹಾನಿಯನ್ನೂ ಬೆಳೆಸಿ ಕೇಡಿಗೇಡು ಮಾಡುವುವು. ದೇಹದಿಂದಾಗಲಿ ಬುದ್ಧಿಯಿಂದಾಗಲಿ ದುಡಿಯುವ ಆಳುಗಳು ಸಮಾಜಕ್ಕೆ ತಮ್ಮ ಕೈಲಾದಷ್ಟು ಹಿತವನ್ನು ಮಾಡುವುದರಿಂದಲೇ ಸಮಾಜದಲ್ಲಿ ಕೂಲಿಕಾರರ ಬಗೆಗೆ ತಕ್ಕ ಸಹಾಯ-ಸಹಾನುಭೂತಿಗಳು ತಲೆದೋರುವುವು. ಇವುಗಳಿಲ್ಲದೆ ಕೂಲಿಕಾರರ ಚಳವಳವು ತನ್ನ ಧ್ಯೇಯವನ್ನು ಸಾಧಿಸಲಾರದು. ಕೂಲಿ-ಬಂಡವಾಳಗಳೆರಡೂ ಸಂಘಟಿತವನ್ನು ಮಾಡಬೇಕು. ಆದುದರಿಂದ ಜಗತ್ತಿನ ಇಂದಿನ ಇಂತಹ ಕಲಹಗಳ ಯಥಾರ್ಥ ಜ್ಞಾನವಿದ್ದವರು ಇನ್ನು ಮುಂದೆ ಕೂಲಿ-ಬಂಡವಾಳಗಳಲ್ಲಿ ಮೈತ್ರಿಯನ್ನುಂಟುಮಾಡುವ ಒಂದು ಉಪಾಯವನ್ನು ಯೋಜಿಸಬೇಕು ” ಎಂಬುದಾಗಿ ಅವರು ಅಭಿಪ್ರಾಯಪಟ್ಟಿದ್ದರು. ಇವನ್ನೆಲ್ಲ ನೋಡುವಾಗ, ಇಂಗ್ಲಂಡಿಗೂ ‘ ಸ್ವದೇಶೀ ಸಾಮ್ಯವಾದ ’ದ ಅನುಭವವಾಗಿದೆಯೆಂದು ತೋರುತ್ತದೆ. ಈ ಸ್ವದೇಶೀ ವಾದವರಿಗಳ ಹಣೆಯಬರಹವೋ ಏನೋ, ಮೆಕ್ಡೊನಾಲ್ಡರ ಸಾಮ್ಯವಾದವಂತೂ ಶುದ್ಧ ಟೋರೀ ಪದ್ಧತಿ—ಇದೂ ಒಂದು ಬಂಡವಾಳಗಾರಿಕೆಯ ಪಕ್ಷ-ಯಲ್ಲಿ ಪರಿಸಮಾಪ್ತವಾಯಿತು.

ಧರ್ಮದರ್ಶಿತ್ವದ— ಸಂಚಾಲನದ — ವಿಚಾರದ ಹೊಗಳಿಕೆ ಬಹಳವಾಗಿದೆ. ಇದು ಪೂರ್ಣವಾಗಿ ಭಾರತೀಯ ಪರಂಪರೆಯ ವಿಚಾರವಂತೆ. ನಮ್ಮ ವೇದದ ಅಹಿಂಸಾಧರ್ಮಕ್ಕೆ ಸಹಜವಾದುದಂತೆ. ವಿಲಿಯಮ್ ಗೊಡ್ವಿನ್ನನು ತನ್ನ ಪೊಲಿಟಿಕಲ್ ಜಸ್ಟಿಸ್ - ರಾಜಕೀಯ ನ್ಯಾಯ ಎಂಬ ಪುಸ್ತಕದಲ್ಲಿ “ ಧನ-

ಸಂಗ್ರಹಿಸುವ ಅನ್ಯಾಯವಾದುದೆಂಬ ವಿಚಾರವೇ ಎಲ್ಲ ಧಾರ್ಮಿಕ ನೀತಿಕಲ್ಪನೆಗಳ ಅಡಿಗಲ್ಲು. "ಬೇರೆ ಬೇರೆ ದಾನಧರ್ಮದ ಪುಣ್ಯವಿಚಾರಗಳಿಂದ ಎಲ್ಲರೂ ಪ್ರೇರಿತರಾಗಿ ಈ ಅನ್ಯಾಯವನ್ನು ಹೋಗಲಾಡಿಸಬೇಕೆಂಬುದೇ ಈ ಧಾರ್ಮಿಕ ನೀತಿಯ ಉದ್ದೇಶ. ಈ ಮಹತ್ತ್ವದ ವಿಷಯದ ಬಗೆಗೆ ಅತ್ಯಂತ ಉತ್ಸಾಹಶಾಲಿಗಳಾದ ಧರ್ಮಶಿಕ್ಷಕರು ತಮ್ಮ ನಿಶ್ಚಿತಾಭಿಪ್ರಾಯ-ಅನುಭವಗಳನ್ನು ಹೇಳದೆ ಬಿಟ್ಟಿಲ್ಲ. ಧನಿಕರು ತಮ್ಮ ಧನದ ಸಂಚಕರು ( Trustees ) ಮಾತ್ರ; ತಾವು ಮಾಡುವ ವೆಚ್ಚದ ಪ್ರತಿಯೊಂದು ಕಾಸಿನ ಲೆಕ್ಕವನ್ನೂ ಅವರು ತೋರಿಸಬೇಕು. ಅವರು ಬರಿಯ ಅಧಿಕಾರಗಾರರೇ ಹೊರತು ಎಂದೆಂದಿಗೂ ಅದರ ಒಡೆಯರಲ್ಲ" ಎಂಬುದು ಈ ಧರ್ಮಶಿಕ್ಷಕರ ಬೋಧನೆ.

೧೫೦ ವರ್ಷಗಳ ಮುಂಚೆ ಇದೇ ವಿಚಾರವನ್ನು ಇಲ್ಲಿ ಐತಿಹಾಸಿಕ ರೀತಿಯಿಂದ ಚೆನ್ನಾಗಿ ಮಂಡಿಸಿದ್ದರು. ವಸ್ತುಸ್ಥಿತಿಯು ಹೀಗಿರುತ್ತ, ಭಾರತವು ಇದು ಕೇವಲ ತನ್ನ ವಿಚಾರವೆಂದು ಹೆಮ್ಮೆಪಡಲಾರದು.

ಕ್ರಾಂತಿ–ಸುಧಾರಣೆಗಳ ನಡುವಿನ ಸ್ಪರ್ಧೆ ಮಾನವನ ದುಃಖಗಳಷ್ಟೇ ಪ್ರಾಚೀನವಾಗಿದೆ. ಸಾಮ್ಯವಾದೀಯ ಚರಿತ್ರೆಯಲ್ಲಿ ಗಾಂಧಿಜೀಯವರ ವಿಚಾರಗಳಿಗೆ ವಿಶೇಷವಾಗಿ ಸುಧಾರಣಾಮಾರ್ಗವೆಂದು ( Reformism ) ಹೆಸರು. ಅವರ ಭಾಷೆಯು ಭಾರತೀಯ, ಸಾರವು ಸರ್ವದೇಶೀಯವಾಗಿದೆ. ಸಮಾಜದ ಪ್ರಚಲಿತವಾಗಿರುವ ವ್ಯವಸ್ಥೆಯನ್ನು ಕಾಪಾಡುವುದೇ ಈ ಪಂಥದವರ ಸಂಕಲ್ಪ. ಆದರೆ ಅವರು ಸಾಮಾಜಿಕ ವ್ಯವಸ್ಥೆಯನ್ನು ಶಿಥಿಲವಾಗಿಸಿ ಅಸ್ತವ್ಯಸ್ತಗೊಳಿಸುವ ಶಕ್ತಿಗಳನ್ನು ಕಂಡುಕೊಳ್ಳುವರು. ಇವುಗಳಿಂದಾಗುವ ಅಪಾಯವನ್ನು ಮುಂಗಂಡು, ಮೊನೆಯನ್ನು ಮುರಿದು ಅವುಗಳ ತೀಕ್ಷ್ಣತೆಯನ್ನು ಶಾಂತಗೊಳಿಸುವರು. ಆದುದರಿಂದ ಅವರು ಸಾಮಾಜಿಕ ರೋಗಗಳಿಗೆ ಅಪಶಮನದ ಗುಳಿಗೆಗಳನ್ನು ಕೊಡುವರಲ್ಲದೆ ಅವುಗಳ ಪೂರ್ಣ ಗುಣಕ್ಕಾಗಿ ಪ್ರಯತ್ನಪಡುವುದಿಲ್ಲ. ಜಮೀನುದಾರರು ಮತ್ತು ಬಂಡವಾಳಗಾರರು ರೈತರ, ಕೂಲಿಯಾಳುಗಳ ಬಗೆಗಿರುವ ತಮ್ಮ ನಡತೆ ಸಂಬಂಧಗಳನ್ನು ಸುಧಾರಿಸಬೇಕೆಂಬುದು ಗಾಂಧೀಜಿಯವರ ತಾತ್ಪರ್ಯ. ಹೀಗೆ ಮಾಡಿದರೆ ಎಲ್ಲವೂ ಲೇಸಾಗುವುದು; ಆ ಮೇಲೆ ವರ್ಗಕಲಹವಿಲ್ಲ, ಅತೃಪ್ತಿಯಿಲ್ಲ, ಬಂಡಾಯವಿಲ್ಲ, ಬುಡಮೇಲಿಲ್ಲ ಎಂಬುದೇ ಅವರ ನಂಬುಗೆಯ ಅಭಿಪ್ರಾಯ. ಸುಧಾರಕರು ಸಾಮಾಜಿಕ ನ್ಯಾಯವನ್ನು

ಸ್ಥಾಪಿಸುವವರಲ್ಲ. ಸಮಾಜದ ಅನ್ಯಾಯದ ಹೊಲಸನ್ನು ಮುಚ್ಚಿಬಿಡುವವರು. ಒಳಗೆ ಹೆಗ್ಗಣವಿಟ್ಟು ಹೊರಗೆ ಮಣ್ಣು ಮೆತ್ತುವವರು.

## ದರಿದ್ರರ ರಾಮರಾಜ್ಯ

ಇನ್ನು ಗಾಂಧೀಜಿಯವರು ಕೊಟ್ಟ ಹೇಳಿಕೆಯ ಕಡೆಗೆ ಹೊರಳುವಾ. "ನನ್ನ ಕನಸಿನ ರಾಮರಾಜ್ಯವು ಬಡವ-ಬಲ್ಲಿದರ ಹಕ್ಕುಗಳನ್ನು ಏಕರೀತಿಯಲ್ಲಿ ಕಾಪಾಡುವುದು" ಎಂದು ಗಾಂಧಿಯವರು ಹೇಳುತ್ತಾರೆ. ಮಹಾತ್ಮಾ ಗಾಂಧಿಯವರ ಸಾಮಾಜಿಕ ತತ್ತ್ವಗಳ ತಿರುಳೇ ಇದರಲ್ಲಿದೆ. ಅವರ ಕನಸಿನ ರಾಮರಾಜ್ಯದಲ್ಲಿ ಕೂಡ ದರಿದ್ರರು ಧನಿಕರೊಡನೆ ಇದ್ದೇ ತೀರಬೇಕು! ಗಾಂಧೀಜಿಯವರ ಮನಸ್ಸಿನಲ್ಲಿ ಈ ದರಿದ್ರರ ಹಕ್ಕುಗಳನ್ನು ಕಾಪಾಡಬೇಕೆಂಬ ಅಪೇಕ್ಷೆಯಿದೆಯೆಂಬುದು ನಿಜ. ಆದರೆ ಆ ಹಕ್ಕುಗಳು ಯಾವುವು? ಅವುಗಳಿಂದ ಆತನಿಗೇನು ಪ್ರಯೋಜನ? ಎಂಬುದನ್ನು ಮಾತ್ರ ಅವರು ಎಲ್ಲಿಯೂ ಹೇಳಿಲ್ಲ. ಅದರಲ್ಲಿಯೂ ಅತ್ಯಂತ ವಿನೋದದ—ಹೊಟ್ಟೆ ಕುಟ್ಟು ಹಿಡಿಸಿ ನಗಿಸುವ—ಸಂಗತಿಯೆಂದರೆ ಗಾಂಧೀಜಿಯವರ ಕನಸಿನ ರಾಮರಾಜ್ಯದಲ್ಲಿಯೂ ಬಡವರು ಇದ್ದೇ ಇದ್ದಾರೆ.

ದರಿದ್ರರೂ ಧನಿಕರೂ ಇದ್ದ ರಾಮರಾಜ್ಯ! ಏಕಾಗಬಾರದು? ಬಡವರಿಲ್ಲದಿದ್ದರೆ ದುಡ್ಡಿನವರಿಗೆ ದಾನಧರ್ಮ ಮಾಡಿ ಪುಣ್ಯ ಗಳಿಸುವ ಅವಕಾಶವೆಲ್ಲಿ ದೊರೆಯುವುದು? ಅದಿಲ್ಲದಿದ್ದರೆ ಹಿಂದೂ ಧರ್ಮದ ಮಾನವ ಸ್ವಭಾವದ ಕಲ್ಪನೆಯನ್ನು ಸಿದ್ಧಮಾಡುವುದು ಹೇಗೆ?

ಸಮಾಜದಲ್ಲಿ ದರಿದ್ರರೆಂಬವರು ಏಕಿರಬೇಕೆಂಬುದೇ ಸಾಮ್ಯವಾದದ ಕೇಂದ್ರಪ್ರಶ್ನೆ. ಆದರೆ ಈ ಪ್ರಶ್ನೆಯು ಈ ವರೆಗೂ ಗಾಂಧೀಜಿಯವರ ತಲೆಗೆ ಹೊಳೆದಿಲ್ಲ. ಹೊಳೆಯುವುದು ಸಾಧ್ಯವೂ ಇಲ್ಲ. ಏಕೆಂದರೆ, ಬಡವರಿರುವುದು ಗಾಂಧೀ-ನೀತಿಗಳ ಅನುಷ್ಠಾನಕ್ಕೆ ಅಗತ್ಯವಾಗಿದೆ.

ಇದುವೆ ಗಾಂಧೀವಾದ—ಸಾಮ್ಯವಾದಗಳಲ್ಲಿರುವ ನಿಜವಾದ ಭೇದ. ಅವುಗಳಿಗೆ ಒಂದು ಆಧ್ಯಾತ್ಮವಾದ ಇನ್ನೊಂದು ಭೌತಿಕವಾದವೆಂದು ನಾಮಕರಣ ಮಾಡಿ ಭೇದ ಹುಡುಕುವುದು ಶುದ್ಧ ತಪ್ಪು. ಆಧ್ಯಾತ್ಮವಾದ-ಭೌತಿಕವಾದ ಎಂದು ಸಾಮಾನ್ಯವಾಗಿ ಉಪಯೋಗಿಸುವ ಶಬ್ದಗಳಿಗೆ ನಿಜವಾಗಿ

ಅರ್ಥವೇ ಇಲ್ಲ. ಆರ್ಥಿಕ ವಿಷಮತೆಯ ಕಾರಣಗಳ ಶೋಧವೇ ಸಾಮ್ಯವಾದದ ಮೊದಲ ಕೆಲಸ. ರಾಜರು, ವರ್ಗದಾರರು, ಬಂಡವಾಳಗಾರರು, ಬಡವರು ಈ ವರ್ಗಗಳು ಹೇಗೆ ಉಂಟಾದವು? ಮಾನವನ ಸುಲಿಗೆಯ ಗುಟ್ಟೇನು? ಎಂಬ ಪ್ರಶ್ನೆಗಳನ್ನು ಸರಿಯಾಗಿ ಬಿಡಿಸುವುದೇ ಅವರ ಹಟ. ಶೋಧಾಂತ್ಯದಲ್ಲಿ ಸಾಮ್ಯವಾದಿಗೆ ಇವೆಲ್ಲ ಸಂಗತಿಗಳ ಮೂಲ ಕಾರಣವೇನೆಂಬುದು ಮನವಟ್ಟಾಗುವುದು. ಕೂಡಲೆ ಆತನು ಆ ಕಾರಣದ ನಿವಾರಣೆಗೆ ಕೈ ಹಾಕುವನು. ಸಾಮಾಜಿಕ ಕಷ್ಟಗಳ ಮೂಲಕ್ಕೇ ಚಿಕಿತ್ಸೆಯನ್ನು ಮಾಡಲಾಗುತ್ತದೆ.

ಆದರೆ ಗಾಂಧಿವಾದವು ಈ ಪ್ರಶ್ನೆಗಳ ಕಡೆಗೆ ಕಣ್ಣೆತ್ತಿ ನೋಡುವುದಿಲ್ಲ. ಕೆಲವರು ಹುಟ್ಟು ರಾಜರು, ಧನಿಕರು, ಜಮೀನುದಾರರು ಮುಂತಾದವರಾಗಿ. ಹುಟ್ಟು ಬಡವರೆಲ್ಲ ಬಡವರು ಬಡವರಿಗಿಂತ ನಸುವೆ ಒಳ್ಳೆ ಸ್ಥಿತಿಯಲ್ಲಿರುವವರೂ ಏಕೆ ಆಗಿದ್ದಾರೆ- ಎಂಬ ಪ್ರಶ್ನೆ ಅವರ ದೃಷ್ಟಿಪಥಕ್ಕೆ ಬರುವುದೇ ಇಲ್ಲ. ಅದು ನೆಲೆಗೊಂಡಿರುವ ಸಮಾಜದ ವ್ಯವಸ್ಥೆಯನ್ನು—ಅದರ ಉಚ್ಚನೀಚ ವರ್ಗಭೇದಗಳೊಂದಿಗೆ—ಅಂಗೀಕರಿಸುವುದು. ಉಚ್ಚ ವರ್ಗದವರು ನೀಚ ವರ್ಗದವರನ್ನು ಹೆಚ್ಚು ಒಳ್ಳೆಯ ರೀತಿಯಿಂದ ನಡೆಸಿಕೊಳ್ಳುವಂತೆ ಮಾಡುವುದೇ ಅದರ ಕರ್ತವ್ಯ. ವರ್ಗದಾರರ ಮತ್ತು ಬಂಡವಾಳಗಾರರ ಧನವು ಎಲ್ಲಿಂದ ಬಂತೆಂಬುದನ್ನು ಕೇಳುವ ಎದೆಗಾರಿಕೆಯಿಲ್ಲದೆ ಕೇವಲ ಕೈಲಾಗದ ಕರುಣೆಯಿಂದ ಅದು ಧನಿಕರಿಗೆ, ಬಡವರ ಧರ್ಮದರ್ಶಿಗಳಾಗಿ ಅವರ ಪ್ರಯೋಜನಕ್ಕಾಗಿಯೇ ತಮ್ಮ ಸಂಪತ್ತನ್ನು ವಿನಿಯೋಗಿಸಬೇಕೆಂದು ಆಗ್ರಹದಿಂದ ಬಿನ್ನೈಸುವುದು.

ಸಾಮ್ಯವಾದಿಗೆ ಈ ತತ್ತ್ವಜ್ಞಾನದಲ್ಲಿ ಮೋಸವು ತೋರುವುದು. ಆತ್ಮವಂಚನೆಯೊಂದಿಗೆ ಸುಲಿಗೆಗೊಳಗಾದ ಜನರ ಮೋಸವೂ ಇದರಲ್ಲಿ ಕಂಡುಬರುವುದು. ನಮ್ಮ ಮೇರೆಗೆ ವರ್ಗದಾರ-ಬಂಡವಾಳಗಾರರ ಧನವೆಲ್ಲ ಒಕ್ಕಲಿಗರ-ಕೂಲಿಯಾಳುಗಳ ಶ್ರಮದಿಂದಲೇ ಪ್ರಾಪ್ತವಾದುದು. ಆದುದರಿಂದ ಪ್ರೌಧ್ ಹಾನರ ಅಭಿಪ್ರಾಯದ ಮೇರೆಗೆ ಇದು ಶುದ್ಧ ಕಳ್ಳತನ. ಈ ಕಳ್ಳತನವನ್ನು ಕಂಡು ಕಣ್ಣು ಮುಚ್ಚಿ, ಏಕೆಂಬ ಪ್ರಶ್ನೆಯನ್ನು ಸಹ ಮಾಡದೆ, ಅದನ್ನು ಪವಿತ್ರವಾಗಿಸುವುದು ತೀರ ಮೋಸಗಾರಿಕೆಯ ತತ್ತ್ವಜ್ಞಾನ. ಬುದ್ಧಿಪೂರ್ವಕವಾಗಿ ಮಾಡದಿದ್ದರೂ ಅದರ ಅವಸ್ಥೆಯೊಂದೇ.

ಉಚ್ಚ ವರ್ಗದವರು ಕಳ್ಳರಾಗಿರುವರಲ್ಲದೆ ಹಿಂಸೆಯ ಅಪರಾಧಕ್ಕೂ ಗುರಿಯಾಗಿದ್ದಾರೆ. ಪ್ರಜೆಗಳ ಹುಟ್ಟುವಳಿಯ ಕುಡುಗನ್ನು ಹಿಂಸೆಯ ಬೆದರಿಕೆಯಿಂದ ದಕ್ಕಿಸಿಕೊಳ್ಳುವರಾದ್ದರಿಂದ ಅವರು ಈ ಅಪರಾಧಕ್ಕೆ ಬಾಧ್ಯರಾಗಿದ್ದಾರೆ. ಶಾಸನದ—ವರ್ಗಶಾಸನದ—ಬೆದರಿಕೆ, ಮತ್ತು ಅದರ ಬೆಂಬಲಕ್ಕಿರುವ ಹಿಂಸೆಯ ಸಂಘಟಿತ ಬಲ, ಇವುಗಳಿಲ್ಲದಿದ್ದರೆ ಒಕ್ಕಲಿಗರೂ ಕೆಲಸಗಾರರೂ ಕ್ಷಣಮಾತ್ರದಲ್ಲಿ ಹೊಲಗದ್ದೆಗಳನ್ನೂ ಕರ್ಮಶಾಲೆಗಳನ್ನೂ ಕಸಿದು ವಶಪಡಿಸಿಕೊಳ್ಳುತ್ತಿದ್ದರು. ‘‘ಸೊತ್ತುಳ್ಳವರೂ ಅನುಕೂಲಸ್ಥರೂ ತಮ್ಮ ಪ್ರತಿಷ್ಠೆಯ ಸ್ಥಳಗಳನ್ನೆಲ್ಲ ಬರಿಯ ಬಲುಮೆಯಿಂದಲೇ ಕಾಪಾಡಿಕೊಳ್ಳುತ್ತಿರುವರೆಂಬುದನ್ನು ಲಕ್ಷ್ಯದಲ್ಲಿಡಬೇಕು’’ ಎಂದು ಜವಾಹರಲಾಲರು ಕೂಡ ಅಭಿಪ್ರಾಯಪಟ್ಟಿದ್ದಾರೆ.

ಅರಸರು, ವರ್ಗದಾರರು, ಬಂಡವಾಳಗಾರರು ಇವರೆಲ್ಲ ಈಗಿನ ತಮ್ಮ ಸ್ಥಾನಗಳಲ್ಲಿ ಪಟ್ಟಭದ್ರರಾಗಿರಲು ಕಾರಣವೇನೆಂಬುದನ್ನು—ಅಧಿಕಾರವೇನೆಂಬುದನ್ನು—ಕೇಳುವ ಗೊಡವೆಗೆ ಹೋಗದೆ, ಇವರುಗಳು ನಡೆಸಿರುವ ದೊಡ್ಡ ಪ್ರಮಾಣದ ಸುಸಂಘಟಿತವಾದ ಚೋರತನ ಹಿಂಸೆಗಳಿಗೆ ಗಾಂಧಿಯವರು ಪರ್ಯಾಯವಾಗಿ, ಅಷ್ಟೇಕೆ, ಮನಃಪೂರ್ವಕವಾಗಿ ಮುಚ್ಚುಮರೆಯಿಲ್ಲದೆ ಒಪ್ಪಿಗೆ ಕೊಟ್ಟಿದ್ದಾರೆ. ವರ್ಗದಾರರ ಭೂಮಿಕಾಣಿಗಳನ್ನು ಕಸಿದುಕೊಳ್ಳುವ ಯಾವ ಪ್ರಯತ್ನವೂ ನಡೆಯದಂತೆ ತಾನು ಪ್ರತಿಕಾರವನ್ನು ಮಾಡುವೆನೆಂದು ಅವರು ಮಾತು ಕೊಟ್ಟಿದ್ದಾರೆ. ಅದಲ್ಲದೆ ಅದಕ್ಕೂ ಮೊದಲು ಅಹಮ್ಮದಾಬಾದಿನ ಗಿರಣಿಕಾರರಿಗೆ ಅವರು ಗಳಿಸುವ ಹಣವು ಅವರ ನೈತಿಕ ಹಕ್ಕಿನದೆಂದು ಹೇಳಿದ್ದಾರೆ.

## ಕಪ್ಪೆಗಳಿಗೆ ಕಾಳಿಂಗನ ರಕ್ಷಾಕವಚ

## The Shark a Trustee of the Minnow

ಗಾಂಧಿಯವರು ಒಮ್ಮೆ, ಉಚ್ಚವರ್ಗದವರು ತಮ್ಮ ಆಸ್ತಿಗಳನ್ನು ಆಳು-ಒಕ್ಕಲುಗಳವೆಂದು ತಮ್ಮ ವಶದಲ್ಲಿಟ್ಟುಕೊಳ್ಳಬೇಕೆಂದು ಹೇಳುತ್ತಾರೆ. ಇನ್ನೊಮ್ಮೆ ಆಳು-ಒಕ್ಕಲುಗಳಿಗೆ ಆಸ್ತಿಯಲ್ಲಿ ಸರಿಪಾಲು ಇದೆಯೆಂದು ಹೇಳುತ್ತಾರೆ. ಮತ್ತೊಮ್ಮೆ ಬಡವರ ಹಿತಕ್ಕಾಗಿ ಆಸ್ತಿಗಳನ್ನು ನಡೆಸಬೇಕೆಂದು

ಸಾರುತ್ತಾರೆ. ಬೇರೊಂದು ಸಲ ಆಳು-ಒಕ್ಕಲುಗಳನ್ನು ಒಮ್ಮೆ ಬಳಗದವರಂತೆ ನಡೆಸಬೇಕೆಂದು ಬೋಧಿಸುತ್ತಾರೆ. ಇದುವೆ ಗಾಂಧೀಜಿಯವರ ಶುದ್ಧ ಸ್ವದೇಶೀಯ ಸಾಮ್ಯವಾದ. ಇದುವೆ ಆಳು-ಬಂಡವಾಳಗಳ, ವರ್ಗದಾರ-ಒಕ್ಕಲುಗಳ ನಡುವಿನ ಮಧುರ ಸಹಕಾರದ ವಾದವು.

ಮೊದಲು ಇದೆಲ್ಲಿ ಎಷ್ಟು ಅಸಿದ್ಧವಾಗಿಯೂ, ವಿಸಂಗತವಾಗಿಯೂ ಇದೆಯೆಂಬುದನ್ನು ನೋಡೋಣ. ಉದಾಹರಣೆಗೆ ವರ್ಗದಾರನೊಬ್ಬ ಧರ್ಮದರ್ಶಿ ( Trustee ). ತನ್ನ ಸಂಪತ್ತಿನ ಎಷ್ಟು ಅಂಶವನ್ನು ಆತನು ಧರ್ಮನಿಧಿಯೆಂದು ( Trust Money ) ತಿಳಿಯಬೇಕು ? ಸಕಲ ಸಂಪತ್ತನ್ನೋ ಅಥವಾ ಅದರ ಒಂದು ಭಾಗವನ್ನೋ ? ಒಂದು ಭಾಗವೆಂದಾದರೆ ಅದು ಯಾವುದು ಮತ್ತು ಅದನ್ನು ಗೊತ್ತು ಮಾಡುವವರಾರು ? ಒಕ್ಕಲುಗಳು ಆಸ್ತಿಯ ಸಂಪಾದನೆಯ ಪರಿಪಾಲುಗಾರರಾದರೆ ಆ 'ಪರಿಪಾಲು' ಎಂಬ ಶಬ್ದದ ಅರ್ಥವೇನು ? ಅರ್ಧ ಆಸ್ತಿಯು ಒಕ್ಕಲುಗಳಿಗೆ ಹಾಗೂ ಉಳಿದ ಅರ್ಧವು ಒಡೆಯನಿಗೆಂದೋ ? ಅಥವಾ ಒಡೆಯ-ಒಕ್ಕಲುಗಳೆಲ್ಲ ಸೇರಿ ಒಬ್ಬೊಬ್ಬನೂ ಪರಿಪಾಲುಗಾರನೆಂದೋ ? ಪಾಲುಗಾರನು ಹೇಗೆ ಪಂಚನಾಗಬಲ್ಲನು ? "ಬಳಗದವರು" ಎಂಬುದರ ತಾತ್ಪರ್ಯವೇನು ? ತಾಲೂಕುದಾರರ ಅರಮನೆಗಳನ್ನು ವಿಲಾಸಕ್ಕಾಗಿಯೂ ಅವರ ಮೋಟಾರ್ ಕಾರುಗಳನ್ನು ಪ್ರವಾಸಕ್ಕಾಗಿಯೂ ಒಕ್ಕಲುಗಳು ಬಳಸಬಹುದೆಂದು ಇದರ ಅರ್ಥವೋ ? ಮತ್ತು ಮಧುರ ಸಹಕಾರವೆಂದರೆ ಎಂತಹದು ? ಇದನ್ನುಂಟುಮಾಡುವವರಾರು ?

ಈ ಪ್ರಶ್ನೆಗಳನ್ನು ಹಾಗೆಯೇ ತಳ್ಳಿಬಿಡುವಂತಿಲ್ಲ. ಇವಕ್ಕಿಂತಲೂ ಹೆಚ್ಚು ಮಹತ್ವದ ಬೇರೆ ಪ್ರಶ್ನೆಗಳೂ ಇವೆ.

ಆಳಾಗಲಿ ಒಕ್ಕಲಾಗಲಿ ತನ್ನ ಒಡೆಯನ ಪರಿಪಾಲುಗಾರನೇಕಾಗುವನು? ಇದಕ್ಕೆ ಗಾಂಧಿಯವರಲ್ಲಿ ಯಾವ ಆಧಾರವಿದೆ ?

ಒಡೆಯನ ಹುಟ್ಟುವಳಿಯನ್ನು ಮಾಡಿದವರು ಆಳು-ಒಕ್ಕಲುಗಳಾದುದರಿಂದ ಅವರು ಪರಿಪಾಲುಗಾರರೆಂದಾದರೆ ತಾವು ಹುಟ್ಟಿಸಿದ ಉತ್ಪತ್ತಿಯನ್ನು ಅವರು ಏಕೆ ಇಟ್ಟುಕೊಳ್ಳಲಾಗದು? ಅವರು ಅದನ್ನು ಬೇರೆಯವರ ಕೈಗೊಪ್ಪಿಸಿ ನಂತರ ಅವರನ್ನು ತಮ್ಮ ಕೈವಾರಿಗಳನ್ನಾಗಿ ಮಾಡಿಕೊಳ್ಳುವುದೇಕೆ? ಬೇರೆ

ಯವರಿಗೆ ಪರೋಪಕಾರದ ಪುಣ್ಯಾತ್ಮರ ಪಾತ್ರಗಳನ್ನು ವಹಿಸಲು ಅನುಕೂಲ ಮಾಡಿಕೊಡುವುದಕ್ಕೋ ?

ಇದೇ ಪ್ರಶ್ನೆಯನ್ನು ನಾವು ಇನ್ನೊಂದು ದೃಷ್ಟಿಯಿಂದಲೂ ಆಲೋಚಿಸಬಹುದು. ಉಚ್ಚ ವರ್ಗದವರು ಧರ್ಮದರ್ಶಿಗಳಾಗಬೇಕೇಕೆ ? ಅವರು ಈಗ ಸಾರುವಂತೆ " ಸಂಪತ್ತೆಲ್ಲ ನಮ್ಮ ಒಡೆತನದ್ದು. ನಾವು ಬುದ್ಧಿ-ಬಂಡವಾಳಗಳನ್ನು ತೊಡಗಿಸಿ ಗಳಿಸಿದ್ದು. ಇದರ ಮೇಲೆ ಯಾರ ಹಕ್ಕೂ ಇಲ್ಲ " ಎಂದು ಏಕೆ ಸಾಧಿಸಬಾರದು ?

ಧನಿಕರ ವಶದಲ್ಲಿರುವ ಸಂಪತ್ತು ಅವರದಲ್ಲವಾದರೆ, ಅದನ್ನು ಅವರ ಕೈಯಲ್ಲಿರಿಸಿ ತಿರುಗಿ ಅವರಿಂದ ದಾನಧರ್ಮದ ಪ್ರದರ್ಶನವನ್ನು ಮಾಡಿಸಲು ಯಾರಿಗೂ ಅಧಿಕಾರವಿಲ್ಲ. ಆದರೆ ಅವರ ಸಂಪತ್ತೆಲ್ಲ ಅವರು ಸ್ವಂತ ಬೆವರು ಸುರಿಸಿ ಗಳಿಸಿದುದಾದರೆ ಅದನ್ನು ಬೇರೆಯವರಿಗೆ ಕೊಡಿರೆಂದು ಅವರಿಗೆ ಕೇಳಲು ಯಾರಿಗೂ ದಾರಿಯಿಲ್ಲ. ಬಡವರು ಕೂಳುಗೇಡಿಗಳಾಗಿ ಸಾಯುತ್ತಿದ್ದರೆ ಸಾಯಲಿ. ಅದು ಬಂಡವಾಳಗಾರರ ತಪ್ಪಲ್ಲ.

ಅಂತೂ ಗಾಂಧೀವಾದವು ಸದುದ್ದೇಶ ಪರಿಣಾಮಕಾರಿಯಲ್ಲದ ನೀತಿ-ಘೋಷೆ, ಭೀತಿಬದ್ಧವಾದ ಆರ್ಥಿಕ ಪೃಥಕ್ಕರಣಗಳ ಕಂತೆಯೆಂದು ನಮಗೆ ಕಾಣುವುದು.

ಸರಿಯಾದ ದಾರಿಗಳು ಎರಡೇ — ಹಣಗಾರರ ಹಣವೆಲ್ಲ ಅನ್ಯಾಯದ್ದೆಂದು ತಿಳಿದು ಅವರಿಂದ ಅದನ್ನು ಕಸಿದುಕೊಳ್ಳಬೇಕು. ಇಲ್ಲವೆ ಅವರ ಸೊತ್ತೆಲ್ಲ ನಿಜವಾಗಿಯೇ ಅವರದೆಂದು ಒಪ್ಪಿಕೊಂಡು ತೆಪ್ಪಗೆ ಸುಮ್ಮನಿದ್ದು ಬಿಡಬೇಕು. ಹೀಗೆ ಮಾಡುವುದರಲ್ಲಿ ಸೊಗಸಿದೆ. ತಮ್ಮನ್ನು ತಿರಸ್ಕಾರದಿಂದ ತಳ್ಳಿಬಿಡುವುದಿಲ್ಲವೆಂದು ಬಡವರು ತಿಳಿಯುವಂತೆ ಅವರಿಗೆ ರುಚಿನೋಡಲಿಲ್ಲದ ಗುಡ್ಡದಂತಹ ವಚನಗಳನ್ನು ಕೊಟ್ಟೇನು ಪ್ರಯೋಜನ ?

ಇದು ಆಚಾರದ ಅಥವಾ ನೀತಿಯ ಪ್ರಶ್ನೆಯಲ್ಲ. ಇದರಲ್ಲಿ ಸಂಪತ್ತಿನ, ಮತ್ತು ಅದರ ಉತ್ಪಾದನ-ವಿತರಣೆಗಳ ಪದ್ಧತಿಯ ಶಾಸ್ತ್ರೀಯವಾದ ವಿಮರ್ಶೆಯಿದೆ. ಈ ಸಮಸ್ಯೆಯನ್ನು ಧೈರ್ಯದಿಂದ ಎದುರಿಸಬೇಕಲ್ಲದೆ ಭಾವನೆಯ ಮರುಳತನದಿಂದ ಬದಿಗಿರಿಸಲಾಗದು. ಕಾರ್ಲ್ ಮಾರ್ಕ್ಸನು, ಧನಿಕರ

ಸಂಪತ್ತಿನ ಸಂಶೋಧನವನ್ನು ಕೈಕೊಂಡು ಆಳುಗಳ ಶ್ರಮ-ಶಕ್ತಿಯ ಸುಲಿಗೆಯಿಂದಲೇ ಅವರ ಉಗಮಸಂಬಂಧವನ್ನು ಸಿದ್ಧಪಡಿಸಿ ಜಗತ್ತಿಗೆ ಮಹದುಪಕಾರವನ್ನು ಮಾಡಿದ್ದಾನೆ. ಈ ಮೊದಲು ನೀತಿಯ ಕೋಪದ ರಭಸದಿಂದ ಸಾರಲ್ಪಟ್ಟುದನ್ನೇ ಈತನು ಶಾಸ್ತ್ರೀಯವಾಗಿ ಸಿದ್ಧಾಂತಪಡಿಸಿದನಾದ್ದರಿಂದ ಸಧನರಾದ ಪಂಡಿತರು ಈತನನ್ನು ಇನ್ನೂ ಕ್ಷಮಿಸಿಲ್ಲ.

ಆದುದರಿಂದಲೇ ಶ್ರಮ-ಶಕ್ತಿಯ ಮೌಲ್ಯದ ವಿಷಯಕ್ಕಿರುವ ಆತನ ಸಿದ್ಧಾಂತವನ್ನು ಖಂಡಿಸುವ ಅನೇಕ ಪ್ರತಿಪಾದನೆಗಳಾಗಿವೆ.

ಈ ಸಿದ್ಧಾಂತವನ್ನು ಅಂಗೀಕರಿಸಬಿಟ್ಟರೆ ಸಂಪತ್ತನ್ನು ಬೆಳೆಯುವರಿಗಾಗಿ ಕೊಟ್ಟುಬಿಡಬೇಕೆಂದು ಯಾವನನ್ನೂ ಒತ್ತಾಯಪಡಿಸಲಿಕ್ಕೆ ಬಾರದು. ಆತನೇ ದಾನವಾಗಿ ಬೇಕಾದರೆ ನೀಡಬಹುದು.

## ಧರ್ಮದರ್ಶಿತ್ವದ ನಗ್ನದರ್ಶನ

ಈ ಧರ್ಮದರ್ಶಿತ್ವದ ತತ್ತ್ವದ ಅನುಷ್ಠಾನವನ್ನು ಹೇಗೆ ಮಾಡುವುದು? ಉಚ್ಚ ವರ್ಗದವರು ನಿಮ್ನ ವರ್ಗದವರ ಧರ್ಮದರ್ಶಿಗಳಾಗುವಂತೆ ಗಾಂಧಿಯವರು ಏನು ಮಾಡುವರು?

ಅವರ ಹೃದಯವನ್ನು ಹೊಕ್ಕು, ಅವರ ನೀತಿಯ ಭಾವನೆಗೆ ಬಿನ್ನವಿಸುವರು. ಗಾಂಧೀಜಿಯವರು ಸಂಯುಕ್ತ ಪ್ರಾಂತದ ಜಮೀನುದಾರರಿಗೆ ಹೀಗೆಯೇ ಹೇಳಿಕೊಂಡಿದ್ದಾರೆಂಬುದು ಅವರ ಸಂದರ್ಶನದಲ್ಲಾದ ಸಂಭಾಷಣದಿಂದ ಒಡೆದುಕಾಣುತ್ತದೆ.

ಇದು ಸಹ ವಿಶಿಷ್ಟವಾದ ಭಾರತೀಯ ಪದ್ಧತಿಯೋ ಏನೋ ಎಂದು ನನಗೆ ಆಶ್ಚರ್ಯವಾಗುತ್ತದೆ. ಎಲ್ಲ ಧಾರ್ಮಿಕ ಗುರುಗಳಿಗೂ ಈ ಪದ್ಧತಿಯು ಸಾಮಾನ್ಯವಾದುದು. ಜೇಸೂ ಕ್ರಿಸ್ತ ಮುಂತಾದ ಮುಂಚಿನ ಗುರುಗಳಿಗೆಲ್ಲ ಈ ವಿಷಯದಲ್ಲಿ ಎಷ್ಟು ಗೆಲವು ಸಿಕ್ಕಿದೆಯೆಂಬುದನ್ನು ಚರಿತ್ರೆಯೇ ಬಲ್ಲದು. ಗಾಂಧೀಜಿ ಈಗ ಮತ್ತೊಮ್ಮೆ ಅದೇ ಮಹೇಂದ್ರಜಾಲವನ್ನು ಮಾಡುವೆನೆಂಬ ನಂಬುಗೆಯಿಂದ ಮುಂದೆ ಬಂದಿದ್ದಾರೆ. ಲಾರ್ಡ್ ಹ್ಯಾಲಿಫಾಕ್ಸ್ ಮತ್ತು ಸರ್ ಮಾಲ್ಕಮ್ ಹೇಲಿಯವರಿಂದ ಉಪದಿಷ್ಟರಾದುದಲ್ಲದೆ ಗಾಂಧಿಯವರಿಂದಲೂ ಕಾನಪುರದಲ್ಲಿ ಬೋಧೆಯನ್ನು ಪಡೆದ ಆ ಏಳು ಜಮೀನುದಾರರು

ಎಷ್ಟರಮಟ್ಟಿಗೆ ತಮ್ಮ ಒಕ್ಕಲುಗಳ ಕೈವಾರಿಗಳಾಗಿದ್ದಾರೆಂಬುದನ್ನು ನಾನರಿಯೆ. ಅದು ಏನೇ ಇರಲಿ. ನನಗೆ ಇಷ್ಟು ಮಾತ್ರ ಗೊತ್ತು. ಉಚ್ಚ ವರ್ಗದವರು ಗಾಂಧೀಜಿಯವರ ವಿಚಾರಗಳನ್ನು ನಲಿಯುತ್ತ ಸ್ವಾಗತಿಸಿದ್ದಾರೆ. ಅವರಲ್ಲಿ ಕೆಲವರಂತೂ ಈ ವಿಚಾರಗಳನ್ನು ವಿಪುಲವಾಗಿ ಪುರಸ್ಕರಿಸಿ ಸಮರ್ಥಿಸುತ್ತಿರುವರು. ಇದು ಸಹಜವಾಗಿದೆ. ಏಕೆಂದರೆ, ಈ ತತ್ತ್ವಜ್ಞಾನದಿಂದ ಅವರಿಗೇನು ನಷ್ಟ ? ಯಾವುದಾದರೊಂದು ಸಾರ್ವಜನಿಕ ಕಾರ್ಯಕ್ಕೆ ಎಂದಾದರೊಮ್ಮೆ ಹಿಡಿತುಂಬ ಹಣವನ್ನು ತೆತ್ತು ಬಾಯಿತುಂಬ ಮಾತನಾಡಿದರೆ ತೀರಿತು, ಅವರ ಹೆಸರು ಹತ್ತು ದಿಕ್ಕುಗಳಲ್ಲಿ ಹಬ್ಬಿ, ಅವರಿಗೆ ಕಳಕೊಂಡ ಹಣವನ್ನು ಸೆಳೆದುಕೊಳ್ಳಲಿಕ್ಕೆ ಅನುಕೂಲವಾಗುವುದು. ಇಲ್ಲವೆ ಅವರು ತೆತ್ತ ಹಣವನ್ನು ಯಾವುದಾದರೂ ವ್ಯವಹಾರ ತಂತ್ರದಿಂದ ಮತ್ತೆ ಪಡೆಯುವರು. ಇದಲ್ಲದೆ ಈ ತತ್ತ್ವಜ್ಞಾನದಿಂದ ನೀತಿಯ ಬೆಂಬಲವೂ ದೊರೆತು ಅವರ ಸ್ಥಾನಮಾನಗಳು ಬಹು ಭದ್ರವಾಗುವುವು.

“ಗಿರಣಿಕಾರರು ತಮ್ಮ ಗಿರಣಿಗಳ ಪೂರ್ಣ ಯಜಮಾನರಲ್ಲ. ಆಳುಗಳಿಗೂ ಅವರ ಒಡೆತನದಲ್ಲಿ ಸರಿಪಾಲು ಇದೆ” ಮುಂತಾಗಿ ಗಾಂಧಿಯವರು ತಮ್ಮ ಸಂದರ್ಶನದಲ್ಲಿ ಹೇಳಿದ್ದಾರೆ. ಆದರೆ ಈ ಸಂಗತಿಯಲ್ಲಿ ತಮಗೆ ಎಷ್ಟರಮಟ್ಟಿನ ಯಶ ದೊರಕಿದೆಯೆಂಬುದನ್ನು ಅವರು ಹೇಳಿಲ್ಲ. ನಮ್ಮ ಮಟ್ಟಿಗೆ ಅದುವೆ ಮಹತ್ತ್ವದ ಪ್ರಶ್ನೆ. ಗಾಂಧೀಜಿಯವರು ಅಹಮ್ಮದಾಬಾದಿನ ಕೂಲಿಕಾರರ ಸಂಘದ ಸಂಬಂಧವುಳ್ಳವರು. ಅದನ್ನು ನೆಲೆಗೊಳಿಸಿ ಬೆಳೆಸಿದವರಲ್ಲೊಬ್ಬರು. ಅವರಾಗಲಿ ಬೇರೊಬ್ಬರಾಗಲಿ, ಸಂಘದ ಮತ್ತು ಗಿರಣಿಯೊಡೆಯರ ಸಂಘರ್ಷಣಗಳಿಂದ ಹೃದಯಪರಿವರ್ತನವೇನಾದರೂ ಕಂಡುಬಂದಿದೆಯೆಂದು ಹೇಳಬಲ್ಲರೋ ? ಸಂಘದ ಬಲದ ಬೆದರಿಕೆ, ಪೂರ್ಣ ಮುಷ್ಕರದ (ಸಂಪು) ಗಂಡಾಂತರ, ಮಹಾತ್ಮಾಜಿಯವರಂತಹ ಪಂಚಸ್ಥರು, ಸದ್ಗೃಹಸ್ಥರ ಸಂಧಾನವನ್ನು ತಿರಸ್ಕರಿಸುವುದರಿಂದ ಆಗುವ ಅವಮಾನ ಮತ್ತು ನಿಂದೆ, ಇವುಗಳೇ ಆಗಾಗ ನಡೆದ ಒಡಂಬಡಿಕೆಗಳ ಮೂಲ ಕಾರಣಗಳಲ್ಲವೋ ? ಇದಲ್ಲದೆ ಆ ಒಪ್ಪಂದಗಳಿಂದ ಬಂಡವಾಳಗಾರರ ನಿಜವಾದ ಸ್ವಾರ್ಥತ್ಯಾಗವೇನಾದರೂ ಆಗಿದೆಯೋ ? ಅದನ್ನು ಮನಃಪೂರ್ವಕವಾಗಿ ಆಳುಗಳ ಕಲ್ಯಾಣಕ್ಕಾಗಿಯೇ ಮಾಡಲಾಗಿದೆಯೋ ? ಕೆಲಸ ಮಾಡುವ ಕಾಲದ ಮತ್ತು ಕೂಲಿಗಳ

ನಿಯಮಕ್ಕಾಗುವ ಒಪ್ಪಂದಕ್ಕೂ ಧರ್ಮದರ್ಶಿತ್ವ ಮತ್ತು ಬಳಗದ ಬಾಂಧವ್ಯ ಇವುಗಳ ಕಲ್ಪನೆಗೂ ನೆಲಮುಗಿಲಿನಷ್ಟು ವ್ಯತ್ಯಾಸವಿದೆ.

## ಯೋಗಪಂಥ

ಉಚ್ಚ ವರ್ಗದವರ ಹೃದಯವನ್ನು ಹೊಗುವ ಕಾರ್ಯವು ಗಾಂಧಿಯವರ ಜೀವನಕಾಲದಲ್ಲಿ ನೆರವೇರದಿದ್ದರೆ ಅವರು ಈ ಜಗತ್ತಿನಿಂದ ಮರೆಯಾದ ಬಳಿಕ ಇದು ಕೈಗೂಡುವುದೆಂದು ನಂಬುವುದು ಹೇಗೆ? ದೊಡ್ಡ ಗುರುವಿನ ಹಿಂದಿನಿಂದಲೇ ಸಮಸಾಮರ್ಥ್ಯದ ಶಿಷ್ಯನೊಬ್ಬನು ಉದಯಿಸಿದುದನ್ನು ಕಂಡವರಿಲ್ಲ. ಅನುಯಾಯಿಗಳೆಂಬವರು ಯಾವಾಗಲೂ ಸಂಕುಚಿತ ದೃಷ್ಟಿಯುಳ್ಳವರು. ಗ್ರಂಥಗಳನ್ನು ಕಂಠಪಾಠ ಮಾಡಿ, ವಾಕ್ಯಾರ್ಥಗಳಿಗಾಗಿ ಘನಘೋರ ವಾಗ್ವಾದವನ್ನು ಮಾಡುವವರು. ತನ್ನ ನಂತರ ಈ ಹೃದಯ ಪರಿವರ್ತನದ ಕಾರ್ಯವನ್ನು ಫಲೋದರ್ಕವಾಗುವಂತೆ ಮಾಡುವ ಕೆಲಸಗಾರರ ಒಂದು ಗುಂಪನ್ನು ತಾನು ಸಿದ್ಧಪಡಿಸಿ ಹೋಗುವೆನೆಂದು ಗಾಂಧಿಯವರು ನಂಬಿಕೊಂಡಿದ್ದಾರೋ? ಇಲ್ಲವಾದರೆ ಈ ಕೆಲಸದ ಗೆಲವಿಗಾಗಿ ಅವರು ಯಾವ ಏರ್ಪಾಟನ್ನು ಮಾಡಲಿರುವರು?

ಅದು ಯಾವ ಏರ್ಪಾಟೇ ಇರಲಿ. ಅದರಲ್ಲಿ ಎರಡು ಗುಣಗಳಿರಬೇಕು. ಅದು ಪರಿಣಾಮಕಾರಕವಾಗಿಯೂ ಸ್ವಯಂ-ಜನಕವಾಗಿಯೂ ಇರಬೇಕು. ಹೃದಯಪರಿವರ್ತನವು ಒಂದು ವ್ಯಕ್ತಿಯದಲ್ಲ. ಇಡಿಯ ವರ್ಗದ್ದೇ ಆಗಬೇಕು. ಇದಲ್ಲದೆ ಹೃದಯಪರಿವರ್ತನೆಯಾದವರು ಇನ್ನು ಮುಂದಿನ ಹಲವು ತಲೆಮಾರುಗಳ ವರೆಗೂ ಎಡೆಬಿಡದೆ ಇರಬೇಕು. ಆದರೆ ಹೃದಯದ ಗುಣಗಳು ಪಿತ್ರಾರ್ಜಿತ ಸೊತ್ತಿನಂತೆ ತಂದೆಯಿಂದ ಮಗನಲ್ಲಿ ತೋರಿಬರುತ್ತವೆಂಬ ನಿಯಮವಿಲ್ಲ. ಒಳ್ಳೆಯ ತಂದೆಗೆ ಒಮ್ಮೊಮ್ಮೆ ಸುಳ್ಳನಾದ ಮಗನು ಹುಟ್ಟುವುದುಂಟು. ಆದುದರಿಂದ ಈ ಧರ್ಮದರ್ಶಿತ್ವದ ಭಾವನೆಯನ್ನು ವರ್ಗದಾರ-ಬಂಡವಾಳಗಾರರ ಪೀಳಿಗೆಯಿಂದ ಪೀಳಿಗೆಗಿಳಿಸುವಂತಹ ಸ್ಥಿರತ್ವವುಳ್ಳ ಯೋಜನೆ ಅಗತ್ಯವಾಗಿ ಬೇಕು.

ಇದರಲ್ಲಿ ಇನ್ನೊಂದು ಸಂಗತಿಯನ್ನು ಗಮನಕ್ಕೆ ತರಬೇಕು. ಈ ಹೃದಯ ಪರಿವರ್ತನದ ಕಾರ್ಯವು ಜರುಗತಕ್ಕ ವಾತಾವರಣವನ್ನು ನೋಡಿದರೆ ನಮಗೇನು ತೋರುವುದು? ಈ ಧರ್ಮದರ್ಶಿತ್ವದ ಕಲ್ಪನೆಯೇ ತೀರ ನೂತನ

ಮಾಡುಗರು. ಸ್ವಾರ್ಥ, ಸ್ವಂತ ಲಾಭಗಳೇ ಅದರ ಸ್ಫೂರ್ತಿಗಳು. ಅಲ್ಲಿ ಸಮಷ್ಟಿ ದೃಷ್ಟಿಯೆಂಬುದು ಸೊನ್ನೆ. ಇದಲ್ಲದೆ ಒಬ್ಬನು ಇಂದು ಧರ್ಮದರ್ಶಿಯಾದಂತೆ ನಟಿಸಿ ನಾಳೆಯೇ ಎಂದಿನಂತೆ ಬಂಡವಾಳಗಾರಿಕೆಯ ಸುಲಿಗೆ-ಪೀಡೆಗಳನ್ನು ನಡೆಸತೊಡಗಿದನೆಂದರೆ ಆತನಿಗೆ ತಕ್ಕ ಶಿಕ್ಷೆಯನ್ನು ಕೊಟ್ಟು ತಿದ್ದುವ ಶಾಸನದ ಅನುಕೂಲವಾಗಲಿ, ಹೊರಗಿನ ಹೆದರಿಕೆಯಾಗಲಿ ಅಲ್ಲಿ ಇಲ್ಲ. ಅದೇಕೆ, ಧರ್ಮದರ್ಶಿಗಿಂತ ಮುಂಚಿನ ಧನಿಕನ ದೌಲತ್ತೇ ಚೆನ್ನಾಗಿತ್ತೆಂದು ಆತನಿಗೆನಿಸುವುದು. ಇಂತಹ ಪರಿಸ್ಥಿತಿಯಲ್ಲಿ ಈ ಪರಿವರ್ತನದ ಕ್ರಿಯೆಯು ನಡೆಯುವುದು ಬಹು ಕಷ್ಟ.

ಈ ಹೃದಯಪರಿವರ್ತನದ ಅಸಾಧ್ಯ ಕಾರ್ಯವನ್ನು ಜಯಶೀಲವಾಗಿ ಜರುಗಿಸಬಲ್ಲ ಒಂದು ಯೋಜನೆಯನ್ನು ಸಿದ್ಧಪಡಿಸುವುದು ಸಾಧ್ಯವೋ? ಡಾಕ್ಟರ್ ಭಗವಾನದಾಸರು ಯೋಗಶಾಲೆಯನ್ನು ಸೂಚಿಸುವರು. ಮಹಾ ಮುಂದಾಳುವೊಬ್ಬನು ಇಂತಹ ಶಾಲೆಯೊಂದನ್ನು ಸ್ಥಾಪಿಸಬಹುದು. ಆದರೆ ಅದರಿಂದ ಇಷ್ಟಸಿದ್ಧಿಯಾದೀತೆಂದು ನಂಬುವುದು ಕಷ್ಟ.

ಇದು ಮಾನವ ಸ್ವಭಾವದ ಸಂಗತಿಯಲ್ಲ. ಹೃದಯಪರಿವರ್ತನದ ಈ ತತ್ತ್ವಜ್ಞಾನವು ವ್ಯವಹಾರ್ಯವಲ್ಲವೆಂದು ಸಾಮ್ಯವಾದಿಯು ಹೇಳುವುದು ಮಾನವ ಸ್ವಭಾವದಲ್ಲಿ ವಿಶ್ವಾಸವಿಲ್ಲವೆಂದಲ್ಲ. ಪಾಶ್ಚಾತ್ಯ ಸಾಮ್ಯವಾದವು, ಮಾನವ ಸ್ವಭಾವದ ಅಂಗಭೂತವಾದ ಸ್ವಾರ್ಥದ ಬುನಾದಿಯ ಮೇಲೆಯೇ ಕಟ್ಟಲ್ಪಟ್ಟಿದೆಯೆಂದು ಹೇಳುವ ಗಾಂಧೀಜಿಯವರಿಗೆ ಅದರ ಸರಿಯಾದ ಅರಿವಿಲ್ಲ. ಇದಕ್ಕಿಂತ ಹೆಚ್ಚಿನ ತಪ್ಪುತಿಳುವಳಿಕೆ ಬೇರೆ ಇಲ್ಲ. ಮಾನವ ಸ್ವಭಾವದ ಬಗೆಗೆ ಸಾಮ್ಯವಾದಿಗಳಿಗೆ ಇಂತಹ ಸಂಕುಚಿತ ಕಲ್ಪನೆಗಳಿದ್ದರೆ, ಸಾಮುದಾಯಿಕ ಹಿತದ ಹಂಬಲುಳ್ಳ ಸಮಾಜದ ನಿರ್ಮಾಣವೇ ತಮ್ಮ ಧ್ಯೇಯವೆಂದು ಸಾರುವ ಸಾಹಸಕ್ಕೆ ಅವರು ಕೈಹಾಕುತ್ತಿರಲಿಲ್ಲ. ಮಾನವ ಸ್ವಭಾವದಲ್ಲಿ ಅಸಾಧ್ಯವಾದ ಸುಸಂಸ್ಕರಣಗಳನ್ನುಂಟು ಮಾಡಬಹುದೆಂದು ಸಾಮ್ಯವಾದದ ಗ್ರಹಿಕೆ ಎಂಬುದು ಅವನ್ನೆದುರಿಸುವ ಎಡೆಬಿಡದ ಪ್ರಶ್ನೆಯಾಗಿದೆಯಲ್ಲವೆ ?

ಗಾಂಧಿಯವರ ಅಭಿಪ್ರಾಯದ ತೀರ ವಿರುದ್ಧವಾಗಿ, ಸಾಮ್ಯವಾದಿಗೆ ಮಾನವ ಸ್ವಭಾವದಲ್ಲಿ ನಿಶ್ಚಯವಾದ ನಿಷ್ಠೆಯಿದೆ. ಆದುದರಿಂದಲೆ ಆತನ

ವಿಧಾಯಕ ಕಾರ್ಯಕ್ರಮದಲ್ಲಿ ಅದರ ಸಂಸ್ಕರಣಕ್ಕಾಗಿ ಪ್ರಧಾನ ಸ್ಥಾನವಿದೆ. ರಶಿಯದ ಪ್ರಾಥಮಿಕ ಪದ್ಧತಿಗಳ ಬಗೆಗೆ ಲೆಕ್ಕವಿಲ್ಲದಷ್ಟು ಹುರುಳಿಲ್ಲದ ಟೀಕೆ ನಡೆದಿರುವುದು ನಿಜವಾದರೂ, ಈ ವಿಷಯದಲ್ಲಿ ರಶಿಯವು ಹೊಗಳಿಕೆಗೆ ತಕ್ಕುದಾದ ಗೆಲವನ್ನು ಈಗಾಗಲೇ ಪಡೆದಿರುವುದು. ನಿಷ್ಪಕ್ಷಪಾತ ದೃಷ್ಟಿಯ ಶೆರ್ವುಡ್ ಎಡ್ಡಿಯವರು ಸ್ವಾನುಭವದಿಂದ ರಶಿಯದ ಬಗೆಗೆ ಈ ಕೆಳಗಿನ ಪ್ರಶಸ್ತಿಯನ್ನು ಕೊಟ್ಟಿದ್ದಾರೆ. "ರಶಿಯದಲ್ಲಿ ಉದ್ದೇಶಗಳೇ ಅಪೇಕ್ಷಿತ ಫಲಗಳು. ಅಂತಿಮ ಆದರ್ಶದ ಅದ್ಭುತ ಸ್ವರೂಪವೇ ಸಾಮಾನ್ಯ ಉದ್ದೇಶ-ಉಪಾಯಗಳನ್ನೆಲ್ಲ ನಿರ್ಧರಿಸುವುದು. ಮುಂದಿನ ಮಹತ್ತ್ವವನ್ನರಿತು ಇಂದಿನ ತ್ಯಾಗಗಳು ನಿಯಂತ್ರಣವಾಗುವುವು. ಹೊಲಗದ್ದೆಗಳು ಮತ್ತು ಉತ್ಪಾದನ ಸಾಧನಗಳು ಸ್ವಂತ ಆಸ್ತಿಯೆಂಬುದಿಲ್ಲ. ಇದಲ್ಲದೆ ಸ್ವಂತ ಸಂಪತ್ತಿಯನ್ನು ಕೂಡಿಡಲು ಸಾಧ್ಯವೇ ಇಲ್ಲ. ಆದರೆ ಇಂದಿನ ವರೆಗೆ ಎಲ್ಲಿಯೂ ಕಾಣದ ಪ್ರಮಾಣದಲ್ಲಿ ಮಾನವ ಸೇವಾಸಂಕಲ್ಪವು ಸ್ವಲಾಭ ಪ್ರವೃತ್ತಿಯ ಸ್ಥಾನವನ್ನಾಕ್ರಮಿಸುತ್ತಲಿದೆ. ಭೂತದಯೆಯು, ನೀತಿಯ ಉನ್ನತ ಆದರ್ಶಗಳೇ ಹೆಚ್ಚು ಹೆಚ್ಚು ಪ್ರಮಾಣದಲ್ಲಿ ಸೋವಿಯೆಟ್ ರಶಿಯಕ್ಕೆ ಪ್ರಚೋದಕಗಳಾಗತೊಡಗಿವೆ. ಮಾನವ ಸ್ವಭಾವದಲ್ಲಿ ವಿಶೇಷತಃ ಸಾಮಾನ್ಯ ಮಾನವನಲ್ಲಿ ಪರಿಸ್ಥಿತಿಯ ಪ್ರಭಾವಕ್ಕೆ ತಕ್ಕಂತೆ ಅನುಕೂಲವಾದ ಮಾರ್ಪಾಟಾಗುವುದೆಂಬುದನ್ನು ಇತ್ತೀಚಿನ ಪರಿಣಾಮಗಳಿಂದ ರಶಿಯದವರು ನೆಚ್ಚಿನಂಬಿರುವರು."

## ಹೃದಯಪರಿವರ್ತನವಲ್ಲ, ಸಾಮಾಜಿಕ ಕ್ರಾಂತಿ

ಸಾಮ್ಯವಾದಿಯು ಮಾನವನ ಸ್ವಭಾವದ ಅವಿಶ್ವಾಸಕ್ಕಿಂತಲೂ ಮನಃಶಾಸ್ತ್ರದ ಗಾಢ ಪರಿಚಯದಿಂದಲೇ ಹೃದಯಪರಿವರ್ತನದ ತತ್ತ್ವಜ್ಞಾನವನ್ನು ವಿರೋಧಿಸುವನು. ಆಚಾರ ಮತ್ತು ಪರಿಸ್ಥಿತಿಗಳ ಅನ್ಯೋನ್ಯ ಸಂಬಂಧವನ್ನು ಆತನು ಬಲ್ಲನಾದುದರಿಂದ ಹೀಗೆ ಮಾಡುವನು. ಸಾಮಾಜಿಕ ಪರಿಸ್ಥಿತಿಯ ಒತ್ತಾಯವೇ ಮಾನವನ ಆಚಾರವನ್ನು ರೂಪುಗೊಳಿಸುವುದು. ಧನಿಕನು ದುಷ್ಟನೆಂದು ಆಳುಗಳ ದುಡಿತದ ಸುಲಿಗೆಯನ್ನು ಮಾಡುವುದಿಲ್ಲ; ಆದರೆ ತಾನಿರುವ ಸಮಾಜದ ಒತ್ತಾಯದಿಂದ ಆತನು ಹಾಗೆ ಮಾಡಬೇಕಾಗುವುದು. ಆತನು ಇನ್ನೇನಾದರೂ ಮಾಡಹೋದರೆ, ಆತನನ್ನು ಬದಿಗಿರಿಸಿ ಇತರರು ಆತನ ಸ್ಥಾನವನ್ನಾಕ್ರಮಿಸುವರು.

ಆದುದರಿಂದ ಇಡಿ ಪಂಗಡಗಳ ಮತ್ತು ವರ್ಗಗಳ ನಡತೆಯನ್ನು ಬದಲಿಸಬೇಕಾದರೆ ಸಮಾಜದ ಸಂಘಟನೆಯಲ್ಲಿಯೇ ತಕ್ಕ ವ್ಯತ್ಯಾಸವನ್ನು ಮಾಡಬೇಕು. ಉದಾಹರಣೆಗೆ, ಬಂಡವಾಳಗಾರರು ಕೂಲಿಯಾಳುಗಳ ಸುಲಿಗೆಯನ್ನು ನಿಲ್ಲಿಸಬೇಕಾದರೆ ಇಂತಹ ಸುಲಿಗೆಯನ್ನು ಅವರು ಮಾಡಲು ಬಾರದಂತೆ ಸಮಾಜದ ವ್ಯವಸ್ಥೆಯನ್ನು ಬದಲಿಸಬೇಕು. ಆದುದರಿಂದಲೇ ಶೆರ್ವುಡ್ ಎಡ್ಡಿಯವರ ಅವತರಣಿಕೆಯಲ್ಲಿ “ ರಸಿಯದಲ್ಲಿ ಸ್ವಂತ ಆಸ್ತಿಯಾಗಲಿ ಸ್ವಂತ ಲಾಭದ ಸಂಭವವಾಗಲಿ ಇರದಿರುವುದರಿಂದ ಮಾನವ ಸೇವಾಸಂಕಲ್ಪವು ಹೆಚ್ಚು ಹೆಚ್ಚು ಪ್ರಮಾಣದಲ್ಲಿ ವ್ಯಕ್ತವಾಗುತ್ತಿದೆ ” ಎಂಬ ಅಂಶವು ಒಡೆದು ಕಾಣುತ್ತದೆ. ಮಾನವ ಸ್ವಭಾವವು, ನಮ್ಮಲ್ಲಿದೆಯೆಂದು ಹೇಳಲ್ಪಡುವ ಆತ್ಮದ ಕರೆಗೆ ಓಗುಡುವುದಿಲ್ಲ.

ಅದು ಪರಿಸ್ಥಿತಿಯ ಪ್ರಭಾವದಿಂದ ಮಾರ್ಪಡುವುದು. ಎಡ್ಡಿಯವರ ರಸಿಯದ ಅನುಭವದ ಮೇರೆಗೆ ಅದು ಅನುಕೂಲ ವಾತಾವರಣದ ಉತ್ತೇಜನಕ್ಕೆ ಅನುಕೂಲವಾಗಿಯೇ ಉತ್ತರ ಕೊಡುವುದು.

ಪರಿಸ್ಥಿತಿಯು, ತನ್ನ ನಿಯಮಕ್ಕನುಸರಿಸಿ, ಮಾನವನು ಮಾನವನ ಸುಲಿಗೆ ಮಾಡುವುದನ್ನು ಉತ್ತೇಜಿಸುವಾಗ, ಅದೇಕೆ ಒತ್ತಾಯಪಡಿಸುವಾಗ, ನೀತಿಪಾಠವು ಎಲ್ಲಿಯೋ ಒಬ್ಬನ ಅಂತಃಕರಣವನ್ನು ಪ್ರವೇಶಿಸಬಹುದೇ ಹೊರತು ಸಮಗ್ರ ಸಮಾಜವನ್ನೇ ಸಂಸ್ಕರಿಸಲಾರದು.

ಆದುದರಿಂದ ಸಮಾಜದ ವಾತಾವರಣವನ್ನು ಮುಂಚೆ ಪಲ್ಲಟಿಸಬೇಕೆಂದು ಸಾಮ್ಯವಾದಿಯು ಬಯಸುವನು. ಪ್ರಚಾರದ ಮತ್ತು ವಿದ್ಯಾಭ್ಯಾಸದ ಸಾಧನಗಳನ್ನು ವಶಪಡಿಸಿಕೊಳ್ಳುವುದಕ್ಕಾಗಿ ರಾಷ್ಟ್ರದ ಮೇಲೆ ಪೂರ್ಣ ಒಡೆತನವನ್ನು ಸಂಪಾದಿಸಬೇಕೆಂದು ಕೋರುವನು. ಮೊದಲು ಅವನು ತಕ್ಕ ಪರಿಸ್ಥಿತಿಯನ್ನು ಉಂಟುಮಾಡುವನು. ಆ ಮೇಲೆ ಕ್ರಮಬದ್ಧವಾದ ಶಿಕ್ಷಣ ಪದ್ಧತಿಯನ್ನು ಪ್ರಾರಂಭಿಸುವನು. ಅವನು ಪರಿಸ್ಥಿತಿಯನ್ನು ಪಲ್ಲಟಿಸುವುದು ಹೇಗೆ? ಅಧಿಕಾರ ವಶಕ್ಕಾಗಿ ಮತ್ತು ಪ್ರಚಲಿತವಾದ ವ್ಯವಸ್ಥೆಯನ್ನು ಕಿತ್ತೊಗೆಯುವುದಕ್ಕಾಗಿ. ದಬ್ಬಾಳಿಕೆ ಸುಲಿಗೆಗಳಿಗೊಳಪಟ್ಟವರ ಸಂಘಟನೆಯನ್ನು ಮಾಡುವನು. ಬಳಿಕ ಹೊಸ ಬುನಾದಿಯ ಮೇಲೆ ನೂತನ ಸಮಾಜದ ನಿರ್ಮಾಣದಲ್ಲಿ ತೊಡಗುವನು.

ಗಾಂಧಿಯವರ ಸಂದರ್ಶನದ ಸಮಯದಲ್ಲಿ ಪ್ರಕಟವಾದ ಇನ್ನೂ ಅನೇಕ ಸಣ್ಣ ವಿಷಯಗಳ ವಿಚಾರವು ಉಳಿಯಿತು. ಅವುಗಳಿಂದ ಏನೂ ಪ್ರಯೋಜನವಿಲ್ಲ. ಅದಲ್ಲದೆ ಅವುಗಳ ಆಲೋಚನೆಯಿಂದ ಮುಖ್ಯ ವಿಷಯದ ಮೇಲಿನ ಲಕ್ಷ್ಯವೂ ಹಾರಿಹೋಗಬಹುದು. ಆದರೂ ಕೆಲವು ಸಂಗತಿಗಳನ್ನು ಆಲೋಚಿಸುವುದು ಉಚಿತವೆಂದು ತೋರುವುದು.

## ಮುಂದಾಳುತನ ಅಥವಾ ಬಾಲಗಾರಿಕೆ (Tailism)

ನಮ್ಮ ಲಕ್ಷೋಪಲಕ್ಷ ಪ್ರಜೆಗಳ ಪ್ರಾಮಾಣಿಕ ಮತವನ್ನು ತೆಗೆದುಕೊಂಡರೆ ಧನಿಕರ ಸಂಪತ್ತನ್ನು ಕಸಿದುಕೊಳ್ಳಲು ಅನುಕೂಲವಾದ ಅಭಿಪ್ರಾಯವು ದೊರೆಯಲಾರದೆಂದು ಗಾಂಧೀಜಿಯವರು ಹೇಳುತ್ತಾರೆ. ಒಂದು ಗಳಿಗೆ ಈ ವಿಚಾರವು ಹೌದೆಂದು ಒಪ್ಪಿದರೂ ಅದರಿಂದ ಬರುವ ತೊಂದರೆ ಏನು? ಸದ್ಯದ ಸಮಾಜದ ಶಾಸ್ತ್ರೀಯವಾದ ಪರಿಜ್ಞಾನವನ್ನು ಪಡೆದು, ಈಗಿನ ಸಾಮಾಜಿಕ ಸಂಕಟಗಳು ತಪ್ಪಿ ಎಂದೆಂದೂ ತಲೆಯೆತ್ತಲು ಬಾರದಂತಹ ಸಾಮಾಜಿಕ ಘಟನೆಯ ಯೋಜನೆಯನ್ನು ಮಾಡುವ ಸಮಾಜ-ವಿಜ್ಞಾನಿಯು ಆ ಅಭಿಪ್ರಾಯಕ್ಕೆ ಯಾವ ಬೆಲೆಯನ್ನು ಕೊಡುವನು? ತಿಳಿಗೇಡಿಗಳಾದ, ಹಿಂದುಳಿದ ದಬ್ಬಾಳಿಕೆಯಲ್ಲಿ ನರಳುತ್ತಿರುವ ಜನರ ಮತಕ್ಕೆ ಎಷ್ಟು ಮಹತ್ವವನ್ನು ಕೊಡಬಹುದು? ನಿನ್ನೆ ಮೊನ್ನೆಯ ವರೆಗೆ ಬ್ರಿಟಿಷ್ ಕೂಲಿಕಾರರಲ್ಲಿ ಬಹು ಪಾಲಿನವರು ಸಂಪ್ರದಾಯವಾದಿಗಳಿಗೆ (Conservatives) ತಮ್ಮ ಮತವನ್ನು ಕೊಡುತ್ತಿದ್ದರೆಂಬುದು ಗಾಂಧೀಜಿಗೆ ಗೊತ್ತಿಲ್ಲವೇ? ಅಮೇರಿಕೆಯ ಕೂಲಿಕಾರರು ಇಂದಿಗೂ ಪ್ರಜಾಪ್ರಭುತ್ವ ಪಕ್ಷದ ಹುರಿಯಾಳುಗಳಿಗೆ ಹಿಂಡುಹಿಂಡಾಗಿ ಮತ ಕೊಡುವರಲ್ಲದೆ ಸಾಮ್ಯವಾದಿಯಾದ ನಾರ್ಮನ್ ಥೊಮಸ್ಸನಿಗಾಗಲಿ ಸಂಘವಾದಿಯಾದ ಫಾಸ್ಟರನಿಗಾಗಲಿ ನೆರವಾಗುವರೋ? ಆದರೆ ಅಲ್ಲಿಯ ಪ್ರಜಾಪ್ರಭುತ್ವ ಪಕ್ಷದವರಂತೂ ಉಚ್ಚ ವರ್ಗದವರ ಸೂತ್ರಗಳಿಗೆ ಒಳಗಾದವರು. ಎಂದಬಳಿಕ ಈ ಕೂಲಿಕಾರರ ಅಭಿಮತವು ಅವರ ಆತ್ಯಂತಿಕ ಹಿತಕ್ಕಾಗಿಯೇ ಇದೆಯೆಂದು ನಾವು ಹೇಳಬಹುದೋ ?

ತಾವಾಗಿಯೇ ಕರೆದು ಉಣ್ಣಲು ಒಡಿಸಿದರೂ ಬ್ರಾಹ್ಮಣನ ಆಹಾರವನ್ನು ಮುಟ್ಟುವುದು ಮಹಾಪಾಪವೆಂದು ಖಂಡಿತವಾಗಿ ತಿಳಿಯುವ ಸಾವಿರಾರು ಹರಿಜನರು ಹಿಂದುಸ್ಥಾನದಲ್ಲಿಲ್ಲವೇ? ಘೋಷಾಪದ್ಧತಿಯನ್ನು ತೆಗೆದುಹಾಕಲು

ನಡೆದ ಚಳವಳವು ಅಸ್ಥಿತಿಯ ಪೊಳ್ಳಿನದೆಂದು ತಿರಸ್ಕರಿಸುವ ಹೆಂಗುಸರು ಬಿಹಾರ ಸಂಯುಕ್ತ ಪ್ರಾಂತಗಳಲ್ಲಿಲ್ಲವೆ ?

ಜನಸಾಮಾನ್ಯರು ಯಾವುದಕ್ಕೆ ಅನುಕೂಲ ಮತ ಕೊಡುವರು, ಯಾವುದಕ್ಕೆ ಕೊಡರು ಎಂಬುದು ಅಂತಹ ಮಹತ್ತ್ವದ ಮಾತಲ್ಲ. ಅವರ ಅಭಿಪ್ರಾಯವು ಅವರಿಗೆ ತಮ್ಮ ಸುಪ್ತಶಕ್ತಿಗಳ ಮತ್ತು ಜನ್ಮಸಿದ್ಧ ಹಕ್ಕುಗಳ ಬಗೆಗೆ ಇರುವ ತಿಳುವಳಿಕೆಯನ್ನೇ ಅವಲಂಬಿಸುವುದು. ಜನತೆಗೆ ನಿಜವಾಗಿಯೂ ತನ್ನ ಕಲ್ಯಾಣವು ಯಾವುದರಲ್ಲಿದೆಯೆಂಬುದು ಗೊತ್ತಾಗಿದ್ದರೆ ಸಾಮಾಜಿಕ ಸಮಸ್ಯೆಗಳೆಲ್ಲವೂ ಕ್ಷಣಮಾತ್ರದಲ್ಲಿ ಮರೆಯಾಗುತ್ತಿದ್ದವು.

ರಶಿಯದಲ್ಲಿ ಅರ್ಥಶಿಕ್ಷಾವಾದರೆಂಬ ಪಂಡಿತರ ಪಂಗಡವೊಂದಿತ್ತು. ಇವರು ಕೂಡ ಕೂಲಿಕಾರರಿಗೆ ತಮ್ಮ ಹಕ್ಕುಗಳ ಜ್ಞಾನವು ಮೊದಲೇ ಇದೆಯೆಂದು ನಂಬುತ್ತಿದ್ದರು. ಆದುದರಿಂದ ಅವರ ಇಷ್ಟಸಿದ್ಧಿಯ ಪ್ರಯತ್ನಗಳಲ್ಲಿ ನೆರವಾಗುವುದೇ ಮುಂದಾಳುತನದ ಕೆಲಸವಲ್ಲದೆ, ಅವರ ಅಪೇಕ್ಷೆಗಳನ್ನು ಬೆಳೆಸುವುದಾಗಲಿ ಅವುಗಳನ್ನು ಶಾಸ್ತ್ರೀಯವಾಗಿ ಮಂಡಿಸುವುದಾಗಲಿ ಅಲ್ಲವೆಂದು ಇವರ ಅಭಿಪ್ರಾಯ. ಲೆನಿನ್ನನು 'ಮಾಡತಕ್ಕುದೇನು ?' ಎಂಬ ಹೆಸರಿನ ಚಿಕ್ಕ ಪ್ರಕಟನೆಯಲ್ಲಿ ಇವರ ವಿಚಾರಗಳನ್ನೆಲ್ಲ ಚೆನ್ನಾಗಿ ಖಂಡಿಸಿದ್ದಾನೆ. ಕ್ರಾಂತಿಕಾರರಾದ ಪ್ರಾಜ್ಞರು ಜನತೆಗಾಗಿ ಒಂದು ನಿರ್ದಿಷ್ಟ ಕಾರ್ಯಕ್ರಮವನ್ನು ಗೊತ್ತುಪಡಿಸಿ ಅದರ ಸಾಧನೆಗಾಗಿ ಅವರ ನೇತೃತ್ವವನ್ನು ವಹಿಸಬೇಕೆಂದು ವಾದಿಸಿದ್ದಾನೆ. ಸಾಮ್ಯವಾದವು ಕೂಲಿಯಾಳುಗಳಿಂದ ಹುಟ್ಟಿ ಬಂದುದಲ್ಲ. ಆದರೆ ಅದು ಬಂಡವಾಳಗಾರಿಕೆಯಿಂದ ಉತ್ಪನ್ನವಾದ ಸಮಸ್ಯೆಗಳನ್ನೆದುರಿಸಿ, ಅವುಗಳ ಪರಿಹಾರಕ್ಕಾಗಿ ಧನಿಕ ವರ್ಗದ ಧೀಮಂತರು ಹೊರಡಿಸಿದ ಒಂದು ಯೋಜನೆ. "ಎಲ್ಲ ದೇಶಗಳ ಚರಿತ್ರೆಯಲ್ಲಿ ಕಂಡುಬರುವುದೇನೆಂದರೆ, ಕೂಲಿಕಾರ ವರ್ಗದವರು ಬಹಳವಾದರೆ ತಮ್ಮಲ್ಲಿ ಟ್ರೇಡ್ ಯೂನಿಯನ್ ಜಾಗ್ರತಿಯನ್ನು ಉಂಟುಮಾಡಿಕೊಳ್ಳಬಹುದು. ಎಂದರೆ ತಮ್ಮನ್ನು ದುಡಿಸುವ ಒಡೆಯರೊಡನೆ ಹೋರಾಡಲಿಕ್ಕೂ, ತಮಗೆ ಅನುಕೂಲವಾದ ಕಾನೂನುಗಳನ್ನು ಸರಕಾರದಿಂದ ಮಾಡಿಸಿಕೊಳ್ಳಲಿಕ್ಕೂ, ತಮ್ಮಲ್ಲಿ ಸಂಘಟನೆಯನ್ನು ಮಾಡಿಕೊಳ್ಳುವುದು ಅವಶ್ಯ ಎಂಬ ಸಂಗತಿಯನ್ನು ಕೂಲಿಕಾರರು ಕಂಡುಕೊಳ್ಳಬಹುದು. ಆಸ್ತಿಯುಳ್ಳ ವರ್ಗಗಳ ಸುಶಿಕ್ಷಿತರು ಎಂದರೆ ಬುದ್ಧಿಶಾಲಿಗಳು ಪ್ರತಿಪಾದಿಸಿದ ತತ್ತ್ವಜ್ಞಾನ, ಇತಿಹಾಸ

ಅರ್ಥಶಾಸ್ತ್ರಗಳ ಸಿದ್ಧಾಂತಗಳಿಂದಲೇ ಸಾಮ್ಯವಾದದ ಉದಯವಾಯಿತು" ಎಂಬುದಾಗಿ ಲೆನಿನ್ನನು ಸ್ಪಷ್ಟಪಡಿಸಿದ್ದಾನೆ. ಜನತೆಯ ಅಭಿಪ್ರಾಯವಾದ ಲೋಕಮತವು ಸಮಾಜಶಿಲ್ಪಿಯ ದೃಷ್ಟಿಯಿಂದ ನಿಷ್ಪ್ರಯೋಜಕವೂ ನಂಬಿಗೆಗೆ ಯೋಗ್ಯವಲ್ಲದುದೂ ಆಗಿದೆ.

## ರಾಷ್ಟ್ರೀಕರಣ

"ಜವಾಹರಲಾಲರು ಆಸ್ತಿಯ ರಾಷ್ಟ್ರೀಕರಣವನ್ನು ಪ್ರತಿಪಾದಿಸಿ ಮಾತಾಡುವುದು ನಿಜ. ಅದರಿಂದ ನೀವು ಬೆದರಬೇಕಾಗಿಲ್ಲ. ವ್ಯಕ್ತಿಗಳ ವಶದಲ್ಲಿರಿಸದೆ ಜನಾಂಗಕ್ಕೆ ಆಸ್ತಿಗಳನ್ನಿಟ್ಟುಕೊಳ್ಳುವುದು ಸಾಧ್ಯವಿಲ್ಲ" ಎಂದು ಮುಂತಾಗಿ ಗಾಂಧಿಯವರು ಹೇಳಿದರು. ಕೆಲವು ಪತ್ರಗಳಿಂದೀಚೆಗೆ ಈ ಹೇಳಿಕೆಯನ್ನು ಆಶ್ಚರ್ಯವನ್ನು ನನಗೆ ಇನ್ನೊಂದು ಸಂಗತಿ ಉಂಟುಮಾಡಿಲ್ಲೆಂಬುದನ್ನು ನಾನು ಒಪ್ಪಿಕೊಳ್ಳುವೆನು. ನನಗೆ ವಿಚಾರ-ಸಾಮ್ಯಗಳ ಇಂತಹ ವಿಲಕ್ಷಣವಾದ ಕಲಸುಮೇಲೋಗರವನ್ನು ನೋಡುವ ಸುಯೋಗ ಲಭಿಸಿದುದು ತೀರ ವಿರಳ. ಪಂಡಿತ ಜವಾಹರಲಾಲರ ಪರವಾಗಿ ಏನಾದರೂ ಮಾತನಾಡಬೇಕೆಂದು ನನ್ನ ಮನಸ್ಸಿನಲ್ಲಿಲ್ಲ. ಅವರ ಬಿಡುಗಡೆಯಾದ ಬಳಿಕ ಅವರು ಗಾಂಧೀಜಿಯವರಿಗೆ ಜಮೀನುದಾರರುಗಳ ತಮ್ಮ ಅಭಿಪ್ರಾಯ ಸ್ಪಷ್ಟಪಡಿಸುವರೆಂಬಲ್ಲಿ ನನಗೆ ಸಂದೇಹವಿಲ್ಲ. ಆದರೆ ಗಾಂಧಿಯವರು ಈ ಹೇಳಿಕೆಯನ್ನು ಕೊಡುವ ಮುಂಚೆಯೇ ಜವಾಹರಲಾಲರ Whither India 'ಭಾರತವೇ ನೀನೆತ್ತ ?' ಎಂಬ ಪುಸ್ತಕ ಮತ್ತು ಅದಕ್ಕೆ ಸಂಬಂಧಪಟ್ಟ ಇತರ ಬರಹಗಳೆಲ್ಲ ಪ್ರಕಟವಾಗಿದ್ದುವು. ಅದನ್ನೋದಿದವರು ಅವುಗಳ ಬರಹಗಾರನ ಬಗೆಗೆ ಹೀಗೆ ಅಭಿಪ್ರಾಯಪಡಲು ಕಾರಣವೇನೆಂಬುದನ್ನು ನಾನರಿಯೆ.

ಜವಾಹರಲಾಲರಿಗೂ ತನಗೂ ಅಹಿಂಸೆಯ ಬಗೆಗೆ ಏಕಮತವಿರುವುದರಿಂದ ಜಮೀನುದಾರರ ಸ್ವಂತ ಸೊತ್ತು-ಹಕ್ಕುಗಳಿಗಾಗಿ ಅವರೂ ಹಂಗು ದೊರೆದು ಹೋರಾಡುವರೆಂದು ಗಾಂಧಿಯವರು ನೆರೆನಂಬಿದ್ದಾರೆ. 'ಕೆಲವು ಟೀಕೆಗಳ ವಿಚಾರ' ( Some Criticisms Considered ) ಎಂಬ ಪ್ರಕಟನೆಯಲ್ಲಿ ಜವಾಹರರು ಅಹಿಂಸೆಯ ವಿಷಯವನ್ನೆತ್ತಿ ಚರ್ಚಿಸುವಾಗ, ಉಪಾಯಕ್ಕೆ ತಾವೆಷ್ಟು ಮಹತ್ತ್ವವನ್ನು ಕೊಡುವವನಲ್ಲನೆಂದು ಖಂಡಿತವಾಗಿ ಹೇಳಿದ್ದಾರೆ. "ಉಪಾಯವು ಅದೆಷ್ಟೇ ಮಹತ್ತ್ವದ್ದಿರಲಿ, ಅದು ಉದ್ದೇಶದ

ಸ್ಥಾನವನ್ನು ಹೇಗೆ ಆಕ್ರಮಿಸಬಲ್ಲುವೆಂಬುದನ್ನು ನಾನು ತಿಳಿಯಲಾರೆ. ಒಂದು ಅಡಿಯನ್ನಿಡುವ ಮೊದಲು, ಉದ್ದೇಶವೇನು ಅವರ ದಾರಿಯೆತ್ತ ಎಂಬುದನ್ನು ನಾನು ತಿಳಿಯದೆ ಗತ್ಯಂತರವಿಲ್ಲ" ಎಂಬುದಾಗಿ ಸಾರಿದ್ದಾರೆ. ಇನ್ನು ಅಹಿಂಸೆಯ ಮಟ್ಟಿಗೆ, ತಾನದನ್ನು ಸಾಮ್ರಾಜ್ಯವಾದದೊಡನೆ ನಡೆದ ಕಾಳಗದಲ್ಲಿ ಒಂದು ಆಯುಧವನ್ನಾಗಿಯೇ ಅಂಗೀಕರಿಸಿದ್ದೇನೆಂದೂ ಹೇಳಿದ್ದಾರೆ. ಈ ಅಂಗೀಕಾರವು ಸಹ ನಿರ್ದುಷ್ಟವಾಗಿದೆಯೆಂದು ಅವರು ಹಟ ಹಿಡಿಯುವುದಿಲ್ಲ. "ನಾನು ಅನೇಕ ಪ್ರಸಂಗಗಳಲ್ಲಿ ಒಂದು ಮಾತನ್ನು ಸ್ಪಷ್ಟಪಡಿಸಿದ್ದೇನೆ. ಅಹಿಂಸೆಯು ನನ್ನ ನಿಷ್ಠಾಮಾರ್ಗವೆಂದು ತಿಳಿಯಲಾಗದು. ಹಿಂಸೆಗಿಂತ ನನಗೆ ಅಹಿಂಸೆಯಲ್ಲಿ ಒಲವು ಹೆಚ್ಚೆಂಬುದು ನಿಜ. ಆದರೂ ಅಹಿಂಸೆಗೆ ನೇತಾಡಿ ದಾಸ್ಯದಲ್ಲಿರುವುದಕ್ಕಿಂತ ಹಿಂಸಾಸಹಿತವಾದ ಸ್ವಾತಂತ್ರ್ಯವು ಸಾವಿರ ಪಾಲಿಗೆ ಲೇಸು" ಎಂದು ಪಂಡಿತರು ಗಟ್ಟಿಯಾಗಿ ಹೇಳಿದ್ದಾರೆ. ಜನಾಂಗದೊಳಗಿನ ಹಲವು ಪಂಗಡಗಳ ಹಿತಸಂಬಂಧಗಳನ್ನು ಸ್ವರಾಜ್ಯ ಸಂಪಾದನೆಯಾದ ಬಳಿಕ ಅನ್ಯೋನ್ಯವಾಗಿ ನಿರ್ಣಯಿಸುವ ಸಾಧನದ ದೃಷ್ಟಿಯಿಂದ ಗಾಂಧಿಯವರು ಈ ಅಹಿಂಸೆಯ ಮಾತನ್ನೆತ್ತಿದುದು ಎಂದು ನನಗೆ ತೋರುತ್ತದೆ. ಈ ವಿಷಯದಲ್ಲಿ ರಾಷ್ಟ್ರದ ದಮನಶಕ್ತಿಯನ್ನು ಉಪಯೋಗಿಸಲು ಪಂಡಿತರು ಅನುಮಾನಿಸುವುದಿಲ್ಲೆಂಬುದು ಅವರ ಬರೆಹದಿಂದ ತೋಚುವುದು. "ರಾಷ್ಟ್ರಶಕ್ತಿಯು ಸ್ವಾಧೀನಕ್ಕೆ ಬಂದ ಬಳಿಕ ಹಿಂಸಾಹಿಂಸೆಗಳ ಪ್ರಶ್ನೆಯು ಇನ್ನೊಂದು ವೇಷದಲ್ಲಿ ತಲೆದೋರಬಹುದು— ಅದೇಕೆ ಖಂಡಿತವಾಗಿಯೂ ತಲೆದೋರದಿರದು. ನೂತನವಾಗಿ ಸ್ಥಾಪನೆಯಾದ ಪ್ರಭುತ್ವವನ್ನು ಮುಗುಚಿಹಾಕಲು ಪ್ರತಿಗಾಮೀ ಪಕ್ಷದವರು ಪ್ರಯತ್ನಿಸಬಹುದು. ಇಂತಹ ಸಂದರ್ಭದಲ್ಲಿ 'ಜಿ' ಯವರು ಏನು ಮಾಡಬೇಕೆನ್ನುವರು ? ನೂತನ ಪ್ರಭುತ್ವದವರು ಈ ವಿರೋಧಿಗಳನ್ನು ರಾಜದಂಡದಿಂದ ಹಣಿದು ಮಣಿಸಬೇಕೆನ್ನುವರೋ ? ಅಥವಾ ಧರ್ಮ-ತತ್ತ್ವಜ್ಞಾನಗಳ ಬೋಧೆಯಿಂದ ಅವರ ಹೃದಯಪರಿವರ್ತನ ಮಾಡಬೇಕೆನ್ನುವರೋ ? ಅಲ್ಲದೆ ನೂತನ ಸರಕಾರದವರು ಕೆಲವು ಶಾಸನಗಳನ್ನೂ ಮಾಡಬಹುದು. ಜನತೆಯ ಬಹುಮತದ ಬೆಂಬಲದಿಂದಾದ ಆ ಶಾಸನಗಳಿಂದ ಸೊತ್ತುಳ್ಳವರ ಆಸ್ತಿ-ಪಾಸ್ತಿಗಳನ್ನು ಕಸಿದುಕೊಳ್ಳುವ ಪ್ರಸಂಗವು ಬರಬಹುದು. ಆಗ 'ಜಿ' ಯವರು ಬಹು

ಜನರ ಅಭಿಪ್ರಾಯಕ್ಕೆ ತಲೆಬಾಗಬೇಕೆನ್ನುವರೋ ಪ್ರತಿಭಟಿಸಬೇಕೆನ್ನುವರೋ? ಅಥವಾ ಅದನ್ನು ಪ್ರತಿಭಟಿಸಿದರೆ ರಾಷ್ಟ್ರವು ಅವರನ್ನು ಹೇಗೆ ಎದುರಿಸಬೇಕು ?" ಎಂದು ಪಂಡಿತರು ನೇರವಾಗಿ ಪ್ರಶ್ನೆಗಳನ್ನು ಕೇಳಿದ್ದಾರೆ.

ಇದಕ್ಕೆ " ಜಿ "ಯವರ ಎದುರುತ್ತರವೇನೂ ಇರಲಿ, ಪಂಡಿತರ ಅಭಿಪ್ರಾಯವಂತೂ ಒಡೆದುಕಾಣುತ್ತದೆ.

ಜವಾಹರಲಾಲರ ಇಷ್ಟೆಲ್ಲ ಬರೆಹಗಳನ್ನು ಕಂಡರೂ ಗಾಂಧೀಜಿಯವರು, ಅವರದೂ ತಮ್ಮದೂ ಏಕಾಭಿಪ್ರಾಯವೆಂದು ಸಾರಲು ಕಾರಣವೇನೆಂದು ತಿಳಿಯುವುದು ತುಂಬ ಕಷ್ಟ.

ಆದರೆ ಆಸ್ತಿಗಳ ರಾಷ್ಟ್ರೀಕರಣದ ವಿಷಯದಲ್ಲಿ ಪಟ್ಟ ಅಭಿಪ್ರಾಯಗಳಿಗೆ ಗಾಂಧೀಜಿಯವರಿಗೆ ಸಂಭಾವನೆಯನ್ನು ಕೊಡಬಹುದು. " ವ್ಯಕ್ತಿಗಳ ವಶದಲ್ಲಿರಿಸದೆ ಜನಾಂಗಕ್ಕೆ ಆಸ್ತಿಗಳನ್ನಿಟ್ಟುಕೊಳ್ಳಲು ಸಾಧ್ಯವಿಲ್ಲ " ಎಂದು ಗಾಂಧೀಜಿ ಹೇಳಿದ್ದಾರೆ. ಇಂತಹ ಶುದ್ಧ ತಿಳಿಗೇಡಿತನದಲ್ಲಿ ಗಾಂಧೀಜಿಗೆ ನಿಜವಾಗಿಯೂ ನಂಬುಗೆ ಇರುವುದು ಸಾಧ್ಯವೇ ? ಆಧುನಿಕ ಅರ್ಥಶಾಸ್ತ್ರದ ತೀರ ಹೆಡ್ಡನಿಗೂ ರಾಷ್ಟ್ರೀಕರಣವೆಂದರೇನೆಂಬುದು ಗೊತ್ತು. ಸ್ಟೇಟ್ ರೇಲ್ವೆಗಳ ಒಡೆತನವು ಯಾರದು ? ಸೋವಿಯಟ್ ರಸಿಯದಲ್ಲಿ ರಾಷ್ಟ್ರೀಕೃತ ಖನಿ, ಕುಸೀದಾಲಯ ( Bank ), ಕಾರಖಾನೆ ಇವುಗಳಿಗೆ ಯಜಮಾನರಾರು ? ಎಂಬುದನ್ನು ಗಾಂಧಿಯವರು ನಮಗೆ ಹೇಳಬಲ್ಲರೋ ?

ವ್ಯಕ್ತಿಗಳ ಬಳಕೆ ( Consumption )ಯ ಸಲುವಾಗಿರುವ ಸೊತ್ತು ಮತ್ತು ಸೊತ್ತನ್ನು ಇನ್ನೂ ಹೆಚ್ಚಿಸುವ ಸೊತ್ತು, ಇವುಗಳಲ್ಲಿ ಗಾಂಧಿಯವರಿಗೆ ತೊಡಕು ಬಿದ್ದಿದೆ. ರಾಷ್ಟ್ರವು ಮನೆ, ಬಟ್ಟೆ, ಸೈಕಲ್, ಗ್ರಾಮೋಫೋನ್, ಮೇಜು, ಕುರ್ಚಿ ಮುಂತಾದವುಗಳನ್ನು ವ್ಯಕ್ತಿಗಳ ವಶದಲ್ಲಿರಿಸಬಹುದೇ ಹೊರತು ತನ್ನ ಒಡೆತನದಲ್ಲಿಟ್ಟುಕೊಳ್ಳಲಾರದೆಂದು ಗಾಂಧಿಯವರ ಅಭಿಪ್ರಾಯವಿದ್ದರೆ ನಮಗೆ ಅವರೊಂದಿಗೆ ಜಗಳವಿಲ್ಲ. ಆಸ್ತಿಗಳ ರಾಷ್ಟ್ರೀಕರಣವೆಂದರೆ ಜನಗಳಿಗೆ ಸ್ವಂತ ಮನೆ-ಬಟ್ಟೆ ಎಂಬವುಗಳಿಲ್ಲ, ಎಂಬುದಾಗಿ ಎಂದೂ ಯಾರೂ ಅರ್ಥ ಮಾಡಿಲ್ಲ.

ಸಾಮ್ಯವಾದಿಯು ಆಸ್ತಿಯ ರಾಷ್ಟ್ರೀಕರಣದ ಮಾತೆತ್ತುವಾಗ ಆತನು ಉತ್ಪಾದನ ಸಂಪತ್ತಿಗಳಾದ ಭೂಮಿ, ಖನಿ, ಕಾರಖಾನೆಗಳನ್ನು ಕುಸೀ

ಹೇಳುವನು. ಇಂತಹ ಆಸ್ತಿಗಳನ್ನು ತನ್ನ ಒಡೆತನದಲ್ಲಿಟ್ಟುಕೊಳ್ಳಲು ರಾಷ್ಟ್ರ ಕಷ್ಟವಿಲ್ಲ. ಆದರೆ ವ್ಯಕ್ತಿಗಳ ಒಡೆತನದಲ್ಲಿ ಅವುಗಳನ್ನಿರಿಸುವುದು ಅನ್ಯಾಯವೂ ಅಶಾಸ್ತ್ರೀಯವೂ ಅವಿವೇಕವೂ ಆಗಿದೆ. ಅವುಗಳು ಬಹು ದೊಡ್ಡ ಸಂಸ್ಥೆಗಳಾಗಿದ್ದು ಅವುಗಳೊಂದಿಗೆ ಸಕಲ ಸಮುದಾಯದ ಹಿತಸಂಬಂಧಗಳು ಬೆರೆತಿರುತ್ತವೆ. ಆದುದರಿಂದ ಅವುಗಳ ಮೇಲೆ ಸಾಮೂಹಿಕ ಒಡೆತನವಿರುವುದು ತೀರ ಅಗತ್ಯ. ಹೀಗೆ ಮಾಡುವುದರಿಂದ ಸೋವಿಯಟ್ ರಸಿಯದಲ್ಲಿ ಸಾಗಿದಂತೆ ಸಂಘದ ಸೇವಕರು ಆ ಸಂಸ್ಥೆಗಳನ್ನು ನಡೆಸುವರು. ಅವುಗಳಲ್ಲಾಗುವ ಹುಟ್ಟುವಳಿಯನ್ನು ಸಮ್ಮತವಾದ ಒಂದು ಯೋಜನೆಯ ಮೇರೆಗೆ ಇಡಿಯ ಸಮಾಜವೇ ಹಂಚಿಕೊಳ್ಳುವುದು.

## ಖಾದಿಯ ಮೂಲಕ ಸಾಮ್ಯವಾದ

ಈಗ ನಾವು ಚರ್ಚಿಸಿದ ಹೇಳಿಕೆಯಲ್ಲಿ ಗಾಂಧೀಜಿಯವರು ತಮ್ಮ ಸ್ವದೇಶೀಯ ಸಾಮ್ಯವಾದದ ವ್ಯಾಖ್ಯೆಯನ್ನು "ಆಳು-ಬಂಡವಾಳಿಗರ ವರ್ಗದಾರ-ಒಕ್ಕಲುಗಳ ಸಹಕಾರ ಸಹಯೋಗ" ಎಂಬುದಾಗಿ ಹೇಳಿದ್ದಾರೆ ಮೇಲಿನ ಹೇಳಿಕೆಯಲ್ಲಿ ತೋರದಿರುವ, ಗಾಂಧಿಯವರ ಇನ್ನೊಂದು ಸಾಮ್ಯವಾದವೂ ಉಂಟು. ಯಂತ್ರಗಳನ್ನು ಬಹಿಷ್ಕರಿಸಿ ಗ್ರಾಮೋದ್ಯಮಗಳನ್ನು ಬೆಳೆಸುವುದೇ ಅವರ ಒಳದಿರುಳು. ಯಂತ್ರಗಳ ವಿರುದ್ಧ ವಿವಿಧ ಆಕ್ಷೇಪಗಳಿವೆ—ಅವುಗಳಿಂದ ಕೊಲೆ-ಸುಲಿಗೆಗಳುಂಟಾಗುತ್ತವೆ; ನಿರುದ್ಯೋಗವು ಹುಟ್ಟುವುದು; ಹಿಂದುಸ್ಥಾನದಂತಹ ವಿಪುಲ ಜನಬಲವುಳ್ಳ ದೇಶದಲ್ಲಂತೂ ಈ ಕೆಲಸಗೇಡಿತನವು ವಿಶೇಷವಾಗಿ ಬೆಳೆಯುವುದು. ಯಂತ್ರಗಳಿಂದ ಹಿಂಸಾಪಹಾರಗಳು ಮೊದಲಾಗುತ್ತವೆಂಬ ಆಕ್ಷೇಪ ಮುಖ್ಯವಾಗಿ ಯಂತ್ರಕ್ಕೆ ಸಂಬಂಧಪಟ್ಟುದಲ್ಲ. ಆದರೆ ಆ ಯಂತ್ರಗಳನ್ನು ಸ್ವಂತ ಲಾಭಕ್ಕಾಗಿ ಬಳಸುವ ಪದ್ಧತಿಯ—ಬಂಡವಾಳಗಾರಿಕೆಯ—ವಿರುದ್ಧ ಎತ್ತಿದ ಆಕ್ಷೇಪ. ಕೆಲವರಂತೂ ಯಂತ್ರಗಳಿಂದ ಬಂಡವಾಳಗಾರಿಕೆ ತಪ್ಪಿದ್ದಲ್ಲವೆಂದು ತಿಳಿಯುತ್ತಾರೆ. ಸೋವಿಯಟ್ ರಸಿಯವು ಇದನ್ನು ಖಂಡಿತವಾಗಿ ಅಲ್ಲಗಳೆಯುತ್ತದೆ. ಅಲ್ಲಿ ಯಂತ್ರಗಳ ತಳಹದಿಯ ಮೇಲೆಯೇ ಎಂಬಂತೆ ನೂತನ ಸಮಾಜವ್ಯವಸ್ಥೆಯೊಂದು ತಲೆದೋರುತ್ತಿದೆ. ಅದು ಯಾವ ಬಗೆಯ ಸುಲಿಗೆಗೂ ಒಳಗಾಗದೆ ಆದರ್ಶ ಸಮಾಜದಂತೆ ಅರಳುತ್ತಿದೆ. ರಸಿಯದಲ್ಲಿ ಹಿಂಸೆಯಿರುವುದು ನಿಜ. ಆದರೆ ಅದು ನೂತನ ಸಮಾಜ

ಘಟನೆಯ ಪ್ರತಿಫಲವಲ್ಲ. ಅದಕ್ಕೆ ಕ್ರಾಂತಿಯ-ರಾಜಕೀಯ ಹಿಂಸೆಯೆಂದು ಕರೆಯಬಹುದು. ಪುರಾತನ ಸಮಾಜವ್ಯವಸ್ಥೆಯಲ್ಲಿ ಅಂಗಭೂತವಾಗಿದ್ದ ಅನಾಚಾರ, ಹಿಂಸೆ, ವಿಶೇಷಾಧಿಕಾರ ( Previlege )ಗಳ ಪೀಳಿಗೆಯನ್ನು ಕೀಳಲು ಅಗತ್ಯವೆಂದು ಕಂಡುಬಂದ ಹಿಂಸೆ.

ಈ ದೇಶದವರು ನಿರುದ್ಯೋಗದ ಬಗೆಗೆ ಎತ್ತುವ ಆಕ್ಷೇಪವು ಶುದ್ಧ ಅವಿವೇಕದ ಲಕ್ಷಣ. ಆದುದರಿಂದ ಅದನ್ನು ಪರಿಷ್ಕಾರವಾಗಿ ಆಲೋಚಿಸಬೇಕು.

ಯಂತ್ರವಿರೋಧಿಗಳೆಲ್ಲರೂ ಯಂತ್ರಗಳಿಂದ ನಿರುದ್ಯೋಗವು ಹುಟ್ಟುವುದೆಂದು ತಿಳಿಯುತ್ತಾರೆ. "ಹತ್ತು ಜನ ಆಳುಗಳ ಕೆಲಸವನ್ನು ಜರುಗಿಸಬಲ್ಲ ಯಂತ್ರವೊಂದನ್ನು ಉಪಯೋಗಿಸಿದರೆ ಅದು ಅಷ್ಟು ಆಳುಗಳನ್ನು ಕೆಲಸಗೇಡಿಗಳನ್ನಾಗಿ ಮಾಡುವುದು" ಎಂದು ಅವರು ವಾದಿಸುವರು. ಇದೆಲ್ಲ ಸರಿ. ಆದರೆ ಅದು ಇನ್ನೂ ಹಲವು ಸಂಗತಿಗಳನ್ನು ಮಾಡುವುದೆಂಬುದನ್ನು ಅವರು ಮರೆಯುವರು. ಅದು ಹೊಸ ಕೆಲಸಗಳನ್ನು, ಹೊಸ ಬೇಡಿಕೆಗಳನ್ನು ಹಾಗೂ ಜೀವನದ ಹೊಸ ತರಗತಿಗಳನ್ನು ಹುಟ್ಟಿಸುವುದು.

ಅಮೇರಿಕೆಯ ಸಂಯುಕ್ತ ರಾಷ್ಟ್ರಗಳಂತಹ ಒಂದು ದೇಶವನ್ನು ನೋಡೋಣ. ಹದಿಮೂರು ಒಕ್ಕಲುನಾಡುಗಳು ಬಂಡಾಯದ ಮೂಲಕ ತಮ್ಮ ಬಿಡುಗಡೆಯನ್ನು ಸಾಧಿಸಿದಾಗ ಅಲ್ಲಿಯ ಜನಬಲವೂ ಹುಟ್ಟುವಳಿಯ ಮಟ್ಟವೂ ಅಷ್ಟಕ್ಕಷ್ಟೇ ಇದ್ದುವು. ಇನ್ನು ಯಂತ್ರವಿರೋಧಕರ ನಿರ್ಣಯದ ಮೇರೆಗೆ, ಯಂತ್ರಗಳ ಬಳಕೆಯು ಬೆಳೆದಂತೆ ಆ ನಾಡುಗಳಲ್ಲಿ ನಿರುದ್ಯೋಗವೂ ಅದೇ ಪ್ರಮಾಣದಲ್ಲಿ ಹೆಚ್ಚಾಗಬೇಕಿತ್ತು. ಆದರೆ ಅಂತಹದೇನೂ ಆಗಲಿಲ್ಲ. ಅಮೇರಿಕೆಯ ಜನರಿಗೆ ಹೊರಗಿನ ಪೇಟೆಗಳ ಮತ್ತು ಸಾಮ್ರಾಜ್ಯವಾದದ ಬೆಂಬಲವು ತಪ್ಪದೆ ಕೆಲಸವನ್ನೊದಗಿಸಿತೆಂದು ಯಾರಾದರೂ ವಾದಿಸಬಹುದು. ಆದರೆ ನಿಜವಾಗಿ ನೋಡಿದರೆ ಹೀಗೂ ಆಗಲಿಲ್ಲ. ಮಹಾಯುದ್ಧದ ವರೆಗೆ ಅಮೇರಿಕೆಯ ಸರಕುಗಳ ನಿರ್ಯಾತವೇ ( Export ) ಇರಲಿಲ್ಲವೆಂದರೂ ಸಲ್ಲುವುದು. ಯುದ್ಧ ಮುಗಿದ ನಂತರದ ಕಾಲದಲ್ಲಿ ಕೂಡ ಅಮೇರಿಕೆಯ ಒಟ್ಟು ಹುಟ್ಟಿನಲ್ಲಿ ಕೇವಲ ನೂರಕ್ಕೆ ಹತ್ತರಷ್ಟು ಸರಕುಗಳ ನಿರ್ಗತವಾಯಿತು. ಯಂತ್ರವಿರೋಧಕರ ಸಿದ್ಧಾಂತದ ಮೇರೆಗೆ ಅಮೇರಿಕೆಯಲ್ಲಿ ನಿರುದ್ಯೋಗವು

ಏಕೆ ಬೆಳೆಯಲಿಲ್ಲವೆಂಬುದನ್ನು ಕಂಡುಹಿಡಿಯುವುದು ಕಷ್ಟವಲ್ಲ. ಇತರ ಧನಿಕ ದೇಶಗಳಿಗಿಂತ ಅಮೇರಿಕೆಯ ಒಕ್ಕಲಿಗರ ಮತ್ತು ಕೂಲಿಯಾಳುಗಳ ಉಪಜೀವನದ ಮಟ್ಟ, ಹಲವು ಕಾರಣಗಳ ಮೂಲಕ, ಒಂದೇ ಸವನೆ ಏರತೊಡಗಿತು. ಇದರಿಂದ ಅಮೇರಿಕೆಯ ಕಾರಖಾನೆಗಳಲ್ಲಿ ಹುಟ್ಟಿದ ಸರಕುಗಳ ಬಹುಭಾಗವು ಸ್ವದೇಶದಲ್ಲಿಯೇ ಮಾರಾಟವಾಗುವಂತಾಯಿತು.

ಎಂದ ಬಳಿಕ ಅಮೇರಿಕೆಯ ಸಂಯುಕ್ತ ರಾಷ್ಟ್ರಗಳಲ್ಲಿ ನಿರುದ್ಯೋಗವು ಇರಲೇ ಇಲ್ಲವೆಂದು ಇದರ ಅರ್ಥವಲ್ಲ. ಅಲ್ಲಿ ನಿರುದ್ಯೋಗವಿದ್ದುದು ನಿಜ. ಆದರೆ ಅದು ಆಗೊಮ್ಮೆ ಈಗೊಮ್ಮೆ ತಲೆದೋರುತ್ತಿತ್ತು. ಅಲ್ಲದೆ ಅದು ಯಂತ್ರಗಳ ಬಳಕೆಯ ಕಾರಣದಿಂದಾಗಲಿ ಆ ಪ್ರಮಾಣದಲ್ಲಿಯಾಗಲಿ ಕಂಡುಬರಲಿಲ್ಲ. ಅದರ ಕಾರಣವು ಬೇರೆ. ಅದನ್ನು ನಾನಿಲ್ಲಿ ಹೇಳುವೆ.

**ಉತ್ಪತ್ತಿಯು ಮಾನವೀಯ ಅಗತ್ಯಗಳ ಚರಮಸೀಮೆಯನ್ನು ಮೀರದಿರುವವರೆಗೆ, ಜನರ ಕ್ರಯಶಕ್ತಿಯು (Perchasing Power) ಉತ್ಪತ್ತಿಯ ಸಮಪ್ರಮಾಣದಲ್ಲಿ ಬೆಳೆದರೆ, ಎಷ್ಟು ಯಂತ್ರಗಳನ್ನು ಉಪಯೋಗಿಸಿದರೂ ನಿರುದ್ಯೋಗವು ತಲೆಯೆತ್ತದು.** ಸದ್ಯಕ್ಕಂತೂ ಹೀಗಾಗುವ ಸಂಭವವಿಲ್ಲ.

ನಾವು ಇನ್ನೊಂದು ದೇಶವನ್ನು ನಿರೀಕ್ಷಿಸುವಾ. ಅಮೇರಿಕೆಯವರಿಗೆ ಎಂದೆಂದಿಗೂ ಇರದಷ್ಟು ಯಂತ್ರಭಕ್ತಿಯು ಸೋವಿಯೆಟ್ ರಸಿಯದವರಿಗಿದೆ. ಲೋಕವು ಬೆರಗಾಗುವಂತೆ ರಸಿಯವು ಕೃಷಿ-ಉದ್ಯೋಗಗಳಿಗೆ ಯಂತ್ರಗಳನ್ನು ಬಳಸುತ್ತಿದೆ ಆದರೂ ನಮಗೆ ದೊರೆತ ಸಮಾಚಾರಗಳ ಮೇಲಿಂದ ನೋಡಿದರೆ, ನಾಗರಿಕ ಜಗತ್ತಿನ ಇತರ ಭಾಗಗಳಲ್ಲೆಲ್ಲ ನಿರುದ್ಯೋಗವು ಸಾಮಾಜಿಕ ಸಮಸ್ಯೆಗಳಲ್ಲಿ ಅತಿ ತೀಕ್ಷ್ಣವಾಗಿರುವಾಗ, ಅಲ್ಲಿ ಮಾತ್ರ ಇದರ ನಾಮನಿರ್ದೇಶವಿಲ್ಲ. ಯಂತ್ರವಿರೋಧಕರು ಇದಕ್ಕೆ ಯಾವ ಸಮಾಧಾನವನ್ನು ಕೊಡುವರು ?

ಇದರ ಉತ್ತರ ಬಂಡವಾಳಗಾರಿಕೆಯಲ್ಲಿ ನಿರುದ್ಯೋಗವು ಏಕೆ ಹುಟ್ಟಿತೆಂಬುದರಲ್ಲಿಯೇ ಇದೆ. ಅದರಲ್ಲಿ ನಮಗೇನು ತೋರುವುದು ? ಬಂಡವಾಳಗಾರಿಕೆಯು ಹುಟ್ಟುವಳಿಯನ್ನು ಕರುಣೆಯಿಲ್ಲದೆ ಹಿಮ್ಮೆಟ್ಟಿಸಿದೆ. ಕಾರಖಾನೆಗಳು ನೊಣ ಓಡಿಸುತ್ತಿವೆ. ಅಲ್ಲಿ ಹೊಗೆ ಹಾಯುತ್ತಿಲ್ಲ. ಕೊಟ್ಟ ಹಣವು ಕೈಗೆ ಬಾರದು. ಉಗ್ರಾಣಗಳ ಕೋಠಿ ಹರಿಯುತ್ತಿದೆ. ಇತ್ತ ಸರಕುಗಳು ಬೇಕೆಂದು

ಹಂಬಲಿಸುವವರು ಹೇರಳವಾಗಿದ್ದಾರೆ. ಆದರೆ ಬಂಡವಾಳಗಾರರೂ, ಸರಕಾರವೂ ಸರಕುಗಳನ್ನು ಉಗ್ರಾಣಗಳಲ್ಲಿ ಸಂಗ್ರಹಿಸುತ್ತಿದ್ದಾರೆ. ಅಲ್ಲಿ ಹಿಡಿಸದಿದ್ದರೆ ಹಾಳು ಮಾಡುತ್ತಾರೆ. ಇತ್ತ ಹದ್ದುಮೀರಿದ ಹುಟ್ಟುವಳಿ. ಅತ್ತ ಹೊಟ್ಟೆಗಿಲ್ಲದ ಹಾಳು ಬಾಳು.

ಇದಕ್ಕಿಂತಲೂ ಹೆಚ್ಚಿನ ದುರವಸ್ಥೆ ಇನ್ನೆಲ್ಲಿ? ಆದರೂ ಇದು ಬಂಡವಾಳಗಾರಿಕೆಯ ಜಿಡದ ಹುಟ್ಟುಗುಣವಾಗಿದೆ. ಕೂಳಿಗೆ ಗತಿಯಿಲ್ಲದ ಲೆಕ್ಕವಿಲ್ಲದಷ್ಟು ಜನರು ಜಗತ್ತಿನಲ್ಲಿರುವಾಗ ಹುಟ್ಟುವಳಿ ಹದ್ದು ಮೀರಿತೆಂದು ಹೇಳಲಿಕ್ಕೆ ಬಾರದು. ಇಂದಿನ ಹುಟ್ಟುವಳಿಯು ನಾಲ್ಕು ಪಾಡಿಯಷ್ಟು ಸರಕು ಹುಟ್ಟಿದರೂ ಕಷ್ಟವಿಲ್ಲದೆ ಮುಗಿಯುವುದು. ಹಾಗಾದರೆ ತೊಂದರೆಯೇನು? ಕೊಳ್ಳುವ ಶಕ್ತಿಯ ಕೊರತೆ, ಬಡತನಗಳ ಮೂಲಕ ನಮಗೆ ಅಗತ್ಯವಿದ್ದ ಸರಕುಗಳನ್ನು ಜನರಿಂದ ಕೊಳ್ಳುವುದಕ್ಕಾಗುವುದಿಲ್ಲ. ಆದುದರಿಂದ ಅಂತಹ ಸರಕುಗಳೆಲ್ಲ ಒಂದೇ ಉಗ್ರಾಣಗಳಲ್ಲಿ ತುಂಬಿಕೊಂಡಿವೆ; ಇಲ್ಲವೆ ಅವುಗಳಿಗೆ ಜಲಸಮಾಧಿಯೋ ಅಗ್ನಿಸಂಸ್ಕಾರವೋ ಆಗುವುದು. ಧನಿಕ ದೇಶಗಳಲ್ಲಿ ಬಹುಜನರ ಕ್ರಯಶಕ್ತಿ ಅವರಿಗೆ ದೊರೆಯುವ ಕೂಲಿಯನ್ನೇ ಅವಲಂಬಿಸಿರುತ್ತದೆ. ಬಂಡವಾಳಗಾರರಂತೂ ಆದಷ್ಟು ಹೆಚ್ಚಿನ ಲಾಭವನ್ನು ಹಿಂಡಿಕೊಳ್ಳುವ ಹೆಬ್ಬಯಕೆಯಿಂದ ಕೂಲಿಯನ್ನು ಕೈಲಾದಷ್ಟು ಕಡಿಮೆ ಮಾಡುವರು. ಈ ಮೇರೆಗೆ ವಿಷಮವರ್ತುಲವೊಂದು ಹುಟ್ಟುವುದು. ಸರಕುಗಳನ್ನು ಮಾರಿ ಲಾಭ ಪಡೆಯಬೇಕೆಂಬ ಲಾಲಸೆಯಿಂದ ಧಣಿಗಾರನು ಸರಕುಗಳ ಹುಟ್ಟನ್ನು ಒಂದೇ ಸವನೆ ಹೆಚ್ಚಿಸುವನು. ಅದರೊಂದಿಗೆ ವೇತನದ ಕುತಂತ್ರದಿಂದ ಆತನು ಜನರ ವ್ಯಯಶಕ್ತಿ (Consuming power)ಯನ್ನೂ ಕುಗ್ಗಿಸುವನು. ಸಹಜವಾಗಿಯೇ ಹುಟ್ಟುವಳಿ-ಬಳಕೆಗಳಲ್ಲಿಯ ತೂಕ ತಪ್ಪುವುದು. ಇದರಿಂದ ತಾನು ಹುಟ್ಟುವಳಿಯನ್ನು ಮಿತಿಮೀರಿ ಮಾಡಿದೆನೆಂದು ಆತನಿಗೆ ಕಾಲಕಾಲಕ್ಕೆ ಕಂಡುಬರುವುದು. ಅದಕ್ಕಾಗಿ ಆತನು ಹುಟ್ಟುವಳಿಯನ್ನು ಕಡಿಮೆ ಮಾಡಿ ಕೆಲಸಗಾರರನ್ನು ಮನೆಗೆ ಕಳಿಸುವನು.

ಎಂದ ಬಳಿಕ ಹುಟ್ಟುವಳಿಯನ್ನು, ಕೇವಲ ಬಳಿಕೆಗಾಗಿಯಲ್ಲದೆ ಲಾಭದ ಗಳಿಕೆಗಾಗಿ ಅಲ್ಲವೆಂದು ತಿಳಿದು ಸಾಗಿಸಿದರೆ ಸಿದ್ಧವಾದ ಸರಕುಗಳೆಲ್ಲವೂ ವೆಚ್ಚವಾಗುವುದರಲ್ಲಿ ಸಂದೇಹವಿಲ್ಲ. ಇಂತಹ ಸಂದರ್ಭಗಳಲ್ಲಿ ಎಂದಾದರೂ ಸರಕು

ಗಳ ಉತ್ಪತ್ತಿಯೇ ಮರ್ಯಾದಿತವಾಗಬಹುದಲ್ಲದೆ ಜನರ ಕೊಳ್ಳುವ ಶಕ್ತಿ ಕುಗ್ಗಲಾರದು. ಏಕೆಂದರೆ ಕೂಲಿಯ ಮೊತ್ತವು, ಬಳಿಕೆಗಾಗಿ ಸಿದ್ಧವಾದ ಸರಕುಗಳ ಬೆಲೆಯಷ್ಟು ಯಾವಾಗಲೂ ಇರುವುದು. ಸಮಾಜದ ಬೇಕುಗಳನ್ನೆಲ್ಲ ಪೂರೈಸಿದ ನಂತರವೇ ಅತ್ಯುತ್ಪತ್ತಿಯು ಸಂಭವಿಸುವುದು. ಆದರೆ ಈ ಮೊದಲೇ ಹೇಳಿದಂತೆ ಸಮಾಜದ ಎಲ್ಲ ಅಗತ್ಯಗಳನ್ನೊದಗಿಸಿ ಹಿಂಗಿಸುವುದು ಬಹುಶಃ ಸಾಧ್ಯವಿಲ್ಲ. ಆದುದರಿಂದ ಉತ್ಪತ್ತಿಯು ಸಮಾಜದ ಅಗತ್ಯಗಳ ಚರಮಸೀಮೆಯನ್ನು ಮೀರುವ ವರೆಗೆ ಅದರ ನಿರ್ಬಂಧವನ್ನಾಗಲಿ ಯಂತ್ರಗಳ ಬಹಿಷ್ಕಾರವನ್ನಾಗಲಿ ಮಾಡುವ ಅವಶ್ಯಕತೆ ಕಂಡುಬರಲಾರದು.

ಹಿಂದುಸ್ಥಾನದಲ್ಲಿ ಇಂತಹ ಪರಿಸ್ಥಿತಿಯೊದಗಲು ಬಹಳ ಕಾಲಬೇಕು. ಮಧ್ಯಮ ವರ್ಗದಲ್ಲಿ ಹೆಚ್ಚು ಹಣವುಳ್ಳವರ ಒಂದು ಮನೆಯನ್ನು ಕಲ್ಪಿಸುವಾ. ಪುಟ್ಟಸವಾದ ಚಿಕ್ಕ ತೋಟವಿರುವ ಅಚ್ಚುಕಟ್ಟಾದ ಮನೆ, ಅದಕ್ಕೆ ಬೇಕಾದ ಸಾಮಾನು ಸಲಕರಣೆಗಳು, ಕಂಬಳಿ ಜಮಖಾನೆಗಳು, ರೇಡಿಯೊ, ಷವರ್ಲೆಟ್ ಕಾರ್, ಸಾಧಾರಣ ಅನುಕೂಲತೆಯುಳ್ಳ ಪುಸ್ತಕಾಲಯ, ತಕ್ಕಮಟ್ಟಿನ ಸಂಗೀತಸೌಕರ್ಯ, ಹಿತವಾದ ಪೌಷ್ಟಿಕ ಆಹಾರ, ಸೊಗಸಾದ ಬಟ್ಟೆಗಳು, ಓದುಬರೆಹ ತಣಿವುಗಳಿಗಾಗಿ ಸಾಕಷ್ಟು ಸಮಯ, ಇವುಗಳನ್ನೆಲ್ಲ ಚೆನ್ನಾಗಿ ಆಲೋಚಿಸಿರಿ. ಹಿಂದುಸ್ಥಾನದ ಕಡುಬಡವನ ಮನೆಯನ್ನೂ ಈ ಸ್ಥಿತಿಗೆ ತಲುಪಿಸಬೇಕೆಂದು ಯೋಚಿಸಿರಿ. ಇದನ್ನು ೫೦ ವರ್ಷಗಳ ಅವಧಿಯಲ್ಲಿ ಕೈಗೂಡಿಸಿಕೊಳ್ಳಬೇಕಾದರೆ ನಮ್ಮ ಉತ್ಪಾದಕ ಸಂಪತ್ತನ್ನು ಅದೆಷ್ಟು ಬೆಳೆಸಬೇಕೆಂಬುದನ್ನು ಕಲ್ಪನೆ ಮಾಡಿರಿ.

ಯಂತ್ರಗಳನ್ನು ತೊರೆದು ಸಣ್ಣ ಕೈಗಾರಿಕೆಗಳಿಗೆ ಶರಣು ಹೋಗುವುದು, ನಾವು ಮೇಲೆ ಆಲೋಚಿಸಿದ ರೋಗದ ಲಕ್ಷಣ-ಸಮಸ್ಯೆಯನ್ನೆದುರಿಸಲಾರದ ಹೇಡಿತನ. ತಮಗೆ ಅನುಕೂಲವಲ್ಲದ ನಿರ್ಣಯಗಳನ್ನೆದುರಿಸಬಾರದೆಂದಿದ್ದರೆ ಸದ್ಯದ ಸಮಾಜದ ವಿಮರ್ಶೆಯನ್ನು ಕೈಕೊಳ್ಳಬಾರದು. ಬುಡವಿಲ್ಲದ ಭಾವನೆಯ ಮತ್ತು ಕಟ್ಟಿಲ್ಲದ ಕಲ್ಪನೆಯ ಆಶ್ರಯವನ್ನು ಪಡೆಯುವುದು ಬಹು ಸುಲಭ. ಆದುದರಿಂದ ನಿಜವಾದ ಅಪರಾಧಿಯನ್ನು ಹುಡುಕುವುದನ್ನು ಬಿಟ್ಟು, ಅಪರಾಧವನ್ನು ಉಕ್ಕು-ಗಚ್ಚುಗಳಿಂದಾದ ನಿರ್ದುಷ್ಟ ವಸ್ತುಗಳ ತಲೆಯಮೇಲೆ

ನಾನು ಒಂದನೆಯ ಅಧ್ಯಾಯದಲ್ಲಿ ಹೇಳಿದಂತೆ, ಸರ್ವಾಧಿಕಾರದ (Dictatorship) ಪ್ರಯೋಗದಿಂದಲ್ಲದೆ, ಸದ್ಯಕ್ಕೆ ಬಳಕೆಯಲ್ಲಿರುವ ಯಂತ್ರಗಳನ್ನು ತಪ್ಪಿಸುವುದಾಗಲಿ ಇನ್ನು ಮುಂದೆ ಯಂತ್ರಗಳನ್ನು ಬಳಕೆಯಲ್ಲಿ ತರದಂತೆ ಮಾಡುವುದಾಗಲಿ ಸಾಧ್ಯವಿಲ್ಲ. ಸಣ್ಣ ಕೈಗಾರಿಕೆಗಳ ಒಡೆಯನಿಗೆ ಈಗಿನ ಪರಿಸ್ಥಿತಿಯಲ್ಲಿ ಇಂಥ ಸರ್ವಾಧಿಕಾರವು ದೊರೆಯುವುದು ದುರ್ಲಭ. ಅವನಿಂದ ಅದನ್ನು ವಶಪಡಿಸಿಕೊಳ್ಳಲಿಕ್ಕೂ ಆಗದು. ಬಂಡವಾಳಗಾರ–ಕೂಲಿಕಾರರಂತೆ ಈತನ ಪರಿಸ್ಥಿತಿ ಅಷ್ಟು ಅನುಕೂಲವಾಗಿಲ್ಲ. ಹಳ್ಳಿಯ ಒಕ್ಕಲಿಗನಿಗಿರುವಷ್ಟು ಬೆಲೆಯೂ ಆತನಿಗಿಲ್ಲ. ಭಾರತದ ಕೃಷೀವಲರಿಗೆ ಸದ್ಯ ಸ್ಥಿತಿಯಲ್ಲಿ ವಿಶಿಷ್ಟವಾದ ಮಹತ್ತ್ವವಿದೆ. ಆದರೂ ಸಣ್ಣ ಕೈಗಾರಿಕೆಗಳಲ್ಲಿ ಆತ್ಯಂತಿಕ ನಿಷ್ಠೆಯನ್ನಿಟ್ಟುಕೊಂಡ ಅನುಯಾಯಿಗಳು ಯಾರಾದರೂ ಇದ್ದರೆ, ಅವರಿಗೆ ನಾನೊಂದು ಸರಳವಾದ ಪ್ರಶ್ನೆಯನ್ನು ಕೇಳುವೆ. ಸಮಾಜದ ಉತ್ಪಾದನಶಕ್ತಿಯ ಸಂಯಮದ ನಿಯಂತ್ರಣವನ್ನು ಮಾಡುವುದರಿಂದ ಅವರು ಹಂಬಲಿಸುವ ನೈತಿಕ-ಭೌತಿಕ ಸಂಪತ್ತೆಲ್ಲವೂ ನಿಷ್ಪನ್ನವಾಗುತ್ತಿದ್ದರೆ ಅದನ್ನು ಬುದ್ಧಿಪೂರ್ವಕವಾಗಿ ನಾಶಗೊಳಿಸುವುದರಲ್ಲಿ ಯಾವ ವಿವೇಕವಿದೆ?

ಇಷ್ಟು ಈ ವಿಷಯವು ಸಾಕು. ಗಾಂಧೀವಾದವು ಒಳ್ಳೇ ಹೇತುಗಳಿಂದ ಪ್ರೇರಿತವಾದುದು. ನಾನು ಸ್ವತಃ ಯಂತ್ರವಾದಿಯಾದರೂ ಹಾಗೆ ತಿಳಿದುಕೊಂಡಿದ್ದೇನೆ. ಆದರೆ ಗುರಿಯು ಎಷ್ಟು ಸದುದ್ದೇಶ್ಯವಾದರೂ ಇದು ಅನ್ಯಾಯಕಾರಕವಾದ ವಾದವೆಂದು ನಾನು ಒಪ್ಪಿಕೊಳ್ಳುತ್ತೇನೆ. ಹೇಗೆನ್ನುವದರಲ್ಲಿ ನನಗೆ ಸ್ವಲ್ಪವಾದರೂ ಸಂದೇಹವಿಲ್ಲ. ಇದು ನಿಜವಾದ ಸಮಸ್ಯೆಗಳನ್ನು ಮರೆಯಲ್ಲಿರಿಸಿ ಬರಿಯ ಸಾಧುವಾದ ಬಯಕೆಗಳಿಂದ ಸಮಾಜದ ಕೇಡುಗಳನ್ನೆಲ್ಲ ಬಗೆಹರಿಸಲು ಹೊರಟಿದೆ. ಈ ಮೇರೆಗೆ ಇದು ಜನತೆಯ ಕಣ್ಣಲ್ಲಿ ಮಣ್ಣೆರಚಿ ಮೇಲ್ವರ್ಗದವರಿಗೆ ತಮ್ಮ ದಬ್ಬಾಳಿಕೆಯನ್ನು ಇನ್ನೂ ನಿರಂತರವಾಗಿ ನಡೆಸಲು ಪ್ರೋತ್ಸಾಹಿಸುವುದು.

## ಮನು–ಮಾರ್ಕ್ಸರು

ಪ್ರಾಚೀನ ಭಾರತದ ವಿಷಯಗಳನ್ನು ಇಂದು ನಮಗೆ ತಿಳಿಸುವುದರಲ್ಲಿ ಡಾಕ್ಟರ್ ಭಗವಾನ್ ದಾಸರಿಗಿಂತ ಮಿಗಿಲಾದವರಿನ್ನೊಬ್ಬರಿಲ್ಲವೆಂದು ಧಾರಾಳವಾಗಿ ಹೇಳಬಹುದು. ಆದುದರಿಂದ ಅವರು ಬರೆದ “ ಪ್ರಾಚೀನ ಮತ್ತು

ಜೀವಶಾಸ್ತ್ರವು ಉತ್ತರ ಕೊಡಬಹುದಲ್ಲದೆ ಚರಿತ್ರೆಯಲ್ಲ. ಅದಕ್ಕಾಗಿ ಚರಿತ್ರೆಯ ಯಾವ ಅರ್ಥವನ್ನು ಮಾಡಿದರೂ ಅಷ್ಟೇ. ವಸ್ತುವು, ಅಣುಗಳ ವಿವಿಧವಾದ ಅನಿಮಿತ ಸಂಯೋಗದ ಮೇರೆಗೆ ನಾನಾ ರೂಪಗಳನ್ನೂ ಆಕಾರಗಳನ್ನೂ ತಾಳುವುದು. ಹಾಗೆಯೇ ಅದರಿಂದ ಮಹಾಮೇಧಾವಿಗಳಂತೆ ಮಹಾಮೂರ್ಖರೂ ತಲೆದೋರುವರು.

ಅದೇ ಸಂದರ್ಭದಲ್ಲಿ “ಸ್ವಾರ್ಥತ್ಯಾಗವು ಭೌತಿಕವೋ, ಹೈತುಕವೋ? ಅಥವಾ ಅದು ಅನುಭಾವಿಕವೋ ಬ್ರಹ್ಮಜ್ಞಾನಕ್ಕೆ ಸಂಬಂಧಪಟ್ಟುದೋ?” ಎಂಬ ಪ್ರಶ್ನೆಯನ್ನೂ ಡಾಕ್ಟರರು ಕೇಳಿದ್ದಾರೆ. ‘ಭೌತಿಕ’ ಎಂಬ ವಿಶೇಷಣವೊಂದರಿಂದ ಇಷ್ಟೆಲ್ಲ ತಪ್ಪುತಿಳುವಳಿಕೆಯಾಗಿರುವುದನ್ನು ಕಂಡು ಬಹಳ ವ್ಯಸನವಾಗುತ್ತದೆ. ಈ ಶಬ್ದವನ್ನು ವ್ಯಾವಹಾರಿಕ ಯೌಗಿಕವೆಂಬ ಅರ್ಥಗಳಲ್ಲಿ ಉಪಯೋಗಿಸುವ ಪದ್ಧತಿ ಇರುವುದು ಈ ತೊಂದರೆಗೆ ಕಾರಣವಾಗಿದೆ. ಮಾರ್ಕ್ಸನ ತತ್ತ್ವಗಳನ್ನು ವಿಮರ್ಶಿಸುವ ಸಾಹಿತ್ಯವೆಲ್ಲ “ಇತಿಹಾಸದ ಭೌತಿಕಾರ್ಥವು ಮಾನವನಲ್ಲಿ ಉನ್ನತವಾದ ಆಧ್ಯಾತ್ಮಿಕ ಆದರ್ಶಗಳಿರುವುವೆಂಬುದನ್ನು ಅಲ್ಲಗಳೆಯುವುದು” ಎಂಬ ಆಕ್ಷೇಪದಿಂದ ತುಂಬಿರುವುದು. “ಮಾನವವರ್ಗವು ಕೇವಲ ಹೊಟ್ಟೆಯ ಬಲದಿಂದಲೇ ಮುಂದೆ ಸಾಗುವುದೆಂದು ಈ ಭೌತಿಕಾರ್ಥವು ಸಾರುತ್ತದೆ” ಎಂಬುದಾಗಿ ವ್ಯಾಲಿನೊಸ್ಕಿಯು ಹೇಳುವನು. ಇತಿಹಾಸದ ಭೌತಿಕಾರ್ಥದಿಂದ ಇಂತಹದೇನೂ ನಿಷ್ಪನ್ನವಾಗುವುದಿಲ್ಲ.

ಮಾನವನ ನಡತೆಯ ಬಗೆಗಳಲ್ಲಿ ಸ್ವಾರ್ಥತ್ಯಾಗ, ಆತ್ಮನಿಗ್ರಹ, ಸೇವೆ, ಕಾಯಕ್ಲೇಶ ಮುಂತಾದವುಗಳನ್ನೊಳಗೊಳ್ಳುವ ಒಂದು ಬಗೆಯ ನಡತೆಯಿದೆಯೆಂಬುದು ಮಾರ್ಕ್ಸನ ಅನುಯಾಯಿಗಳ ಕಣ್ಣಿಗೆ ಬಿದ್ದಿಲ್ಲವೆಂದಲ್ಲ. ಅವರು ಅದನ್ನು ನಿರಾಕರಿಸುವುದೂ ಇಲ್ಲ. ಕಣ್ಣು ತೆರೆದರೆ ನಿತ್ಯ ನೋಡಲು ಸಿಕ್ಕುವ ಇಂತಹ ನೋಟವನ್ನು ನೋಡಲಾರದಷ್ಟು ಕೂಡ ಅವರು ಕುರುಡರೆಂದು ಈ ವಿಮರ್ಶಕರು ತಿಳಿದಿದ್ದಾರೆಂಬುದೇ ಆಶ್ಚರ್ಯದ ಸಂಗತಿ. ಸ್ವಾರ್ಥತ್ಯಾಗದ ರೀತಿಯಲ್ಲಿ ಅಥವಾ ಅಧ್ಯಾತ್ಮ-ಅನುಭಾವ-ಬ್ರಹ್ಮಜ್ಞಾನಗಳ ರೀತಿಯಲ್ಲಿ ಒಬ್ಬ ಮನುಷ್ಯನ ನಡತೆಯಿದೆಯೆಂದು ತೋರಿದಾಗ ಆತನು ಇತರರಂತೆಯೇ ಸಮಾಜ ಜೀವಶಾಸ್ತ್ರಗಳ ಗುಣಪ್ರಭಾವದಿಂದ ಆಚರಿಸುತ್ತಿರುತ್ತಾನೆ.

ಆಧುನಿಕ ಆಚಾರವಾದಿ ( Behaviourist ) ಯಂತೆ ಮಾರ್ಕ್ಸ್ ಪಂಥದವನು ಕೂಡ, ಮಾನವನ ನಡತೆಯು ಜೀವಶಾಸ್ತ್ರದ ( ಸ್ನಾಯು, ನರ, ಮಾಂಸಖಂಡ ಮುಂತಾದವುಗಳ ) ಮತ್ತು ಸಾಮಾಜಿಕ ( ಗೃಹ, ಶಿಕ್ಷಣ ಸಂಬಂಧಗಳ ) ಗುಣಧರ್ಮಗಳ ಪ್ರಭಾವದಿಂದ ತಲೆದೋರುತ್ತದೆಂದು ಅಭಿಪ್ರಾಯಪಡುತ್ತಾನೆ.

ವ್ಯವಹಾರದಲ್ಲಿ ವಿಶಿಷ್ಟವಾದ ಒಂದು ಆಚಾರಕ್ಕೆ ಆಧ್ಯಾತ್ಮಿಕಾಚಾರವೆಂದು ಕರೆಯುವ ರೂಢಿಯಿರುವುದೆಂದ ಮಾತ್ರಕ್ಕೆ ಅದು ಈ ಎರಡು ಕಾರಣಗಳಿಂದ (ಪ್ರಭಾವಗಳಿಂದ) ಅಲಿಪ್ತವಾಗಿದೆಯೆಂದು ಹೇಳಲು ಬರುವಂತಿಲ್ಲ. ಇವೆರಡಕ್ಕೂ ಶಾಸ್ತ್ರೀಯ ಭಾಷೆಯಲ್ಲಿ ಭೌತಿಕ (Material) ಕಾರಣಗಳೆಂದು ಹೆಸರು. ' ಆಧ್ಯಾತ್ಮಿಕ ಆಚಾರ ' ಎಂದು ಹೇಳಿದರೆ, ನಾವು ಮಾನವನ ಒಂದು ಬಗೆಯ ನಡತೆ (Behaviour) ಯನ್ನೇ ಬಣ್ಣಿಸಿದಂತೆ. ' ಭೌತಿಕ ' ಎಂಬ ಪದವು ವರ್ಣನೆಯನ್ನಲ್ಲದೆ ವಿವೇಚನೆಯನ್ನು ಮಾಡುವುದಿಲ್ಲ. ಆಧ್ಯಾತ್ಮಿಕ ಆಚಾರಗಳಿಗೆಲ್ಲ ಇತರ ಎಲ್ಲ ಬಗೆಯ ನಡತೆಗಳಂತೆ, ಭೌತಿಕ ಅರ್ಥ—ಖಂಡಿತವಾಗಿಯೂ ಸಮಾಜ-ಜೀವಶಾಸ್ತ್ರಗಳಿಗೆ ಸಂಬಂಧಪಡುವ ವಿವೇಚನೆ—ಇದೆಯೆಂದು ಮಾರ್ಕ್ಸ್ ಪಂಥದವನ ಅಭಿಪ್ರಾಯ.

ಘನತೆವೆತ್ತ ಈ ಡಾಕ್ಟರರು ಮಾಡಿದ ವಿಮರ್ಶೆಯ ಇನ್ನೂ ಅನೇಕ ವಿಚಾರಗಳನ್ನು ಪರೀಕ್ಷಿಸಬಹುದು. ಆದರೆ ಅದಕ್ಕಾಗಿ ನಾವು ಪ್ರಾಮುಖ್ಯ ವಿಷಯದಿಂದ ಬಹುದೂರ ಹೋಗಬೇಕಾದೀತು. ಆದುದರಿಂದ ಕೇವಲ ಅವರ ಪ್ರಾಚೀನ ಸಾಮ್ಯವಾದವನ್ನು ಕುರಿತು ವಿಚಾರ ಮಾಡೋಣ.

## ಸಮಸ್ಯೆ

ಡಾಕ್ಟರರು ಮಂಡಿಸಿದ ಸದ್ಯದ ಸಮಸ್ಯೆಯು ಒಟ್ಟಿನ ಮೇಲೆ ಸಾಮ್ಯವಾದಿಗೆ ಒಪ್ಪಿಗೆಯಾಗುವಂತಹದೆಂಬುದೇ ಸಮಾಧಾನದ ಸಂಗತಿ. " ಸಮಾಜದ ಸಂಘಟನೆಯ ನೂತನ ವಿಧಾನವೊಂದರ ಅಗತ್ಯವಿದೆ; ಅಥವಾ ಪುರಾತನ ಪದ್ಧತಿಯನ್ನೇ ಮಾರ್ಪಡಿಸಬೇಕು. ವ್ಯಕ್ತಿ-ಸಮಾಜಗಳ ಜೀವನದ ಸರ್ವ ವಿಷಯಗಳ ಆಡಳಿತದ ಬಗೆಗೆ ಒಂದು ಯೋಜನೆಯಾಗಬೇಕು. ಇದರಿಂದ ವಿಶ್ವಬಾಂಧವ್ಯವು ವ್ಯವಹಾರ್ಯವಾಗಬೇಕು; ಜಗತ್ತಿನ ಸದ್ಯದ ಔದ್ಯೋಗಿಕ,

ಯಾಂತ್ರಿಕ, ನಾಗರಿಕ ಪರಿಸ್ಥಿತಿಯನ್ನು ಗಮನಕ್ಕೆ ತಂದು (ಇದು ಪೂರ್ಣ ಅಳಿದು ಹೋಗಿ ಪುನಃ ಪುರಾತನ ಗ್ರಾಮೋದ್ಯೋಗ-ಕೃಷಿ-ವಾಣಿಜ್ಯಗಳು ಮಾತ್ರ ಉಳಿಯುವುದು ದುಸ್ತರವೆಂಬುದನ್ನು ತಿಳಿದು), ಅನ್ಯಾಯವಾದುದೆಂದು ಒಡೆದುತೋರುವ ಮತ್ತು ಸಾಮ್ರಾಜ್ಯ ಪ್ರಭುತ್ವಗಳ ದಂಡನೀತಿಯ ಬೆಂಬಲದಿಂದ ಮೇರೆ ಮೀರಿ ವೈಯಕ್ತಿಕ ಹಿತಸಾಧನವನ್ನು ನಡೆಸುವ ಬಂಡವಾಳಗಾರಿಕೆಯ ತಳಹದಿಯಿಂದ ಕಿತ್ತು, ಪ್ರತಿಯೊಬ್ಬನಿಗೆ ಮತ್ತು ಎಲ್ಲರಿಗೂ ಜಗತ್ತಿನಲ್ಲಿ ಮಾಡಬೇಕಾದ ಕೆಲಸ ಹಾಗೂ ಜಗತ್ತಿನಲ್ಲಿ ದೊರೆಯಬಹುದಾದ ಒಳ್ಳೆಯ ವಸ್ತುಗಳು, ಅದರ ಅಗತ್ಯಗಳು, ವಿಲಾಸಸುಖಸೌಕರ್ಯಗಳು ಇವುಗಳ ನ್ಯಾಯಸಮ್ಮತವಾದ ಪಾಲು ಸಿಕ್ಕುವ ಅನುಕೂಲತೆಯುಳ್ಳ ಅಸ್ತಿವಾರದಲ್ಲಿ ನಮ್ಮ ಸಮಾಜವನ್ನಿರಿಸಲು ಬರಬೇಕು.”

## ಪರಿಹಾರ

ಇದನ್ನು ಸಾಧಿಸುವ ಯೋಜನೆ ಯಾವುದು? “ಅಖಿಲ ಮಾನವ ಜಾತಿಗಾಗಿ, ವ್ಯಕ್ತಿ-ಸಮಾಜಗಳ ಜೀವನದ ನಿತ್ಯ ಯೋಜನೆಯೊಂದನ್ನು—ಪಂಚವಾರ್ಷಿಕ, ದಶವಾರ್ಷಿಕ ಯೋಜನೆಗಳನ್ನಲ್ಲ—ಮನುವು ಸಿದ್ಧಪಡಿಸಿದ್ದಾನೆ. ಆ ಯೋಜನೆಯಲ್ಲಿ ಧರ್ಮ, ಅರ್ಥ, ಶಿಕ್ಷಣ, ಕುಟುಂಬಜೀವನ, ನ್ಯಾಯ, ನೈರ್ಮಲ್ಯ ರಕ್ಷಣೆ, ಕಲೆ ಮುಂತಾದವುಗಳ ಯೋಜನೆಯ ಮೂಲಭೂತ ತತ್ತ್ವಗಳೆಲ್ಲವೂ ಒಳಗೊಂಡಿವೆ. ಪ್ರಾಚೀನ ಭಾರತದ ಸಮಾಜ ವ್ಯವಸ್ಥೆಯ ಯೋಜನೆಯು ಕೊನೆಯಿಲ್ಲದ ಸ್ಪರ್ಧೆ, ಕಡ್ಡಾಯದ ಸಹಕಾರ, ವ್ಯಷ್ಟಿವಾದ—ಸಮಷ್ಟಿವಾದ, ಸ್ವಹಿತಬುದ್ಧಿ—ಪರಹಿತಬುದ್ಧಿ, ಪೂರ್ಣ ಸ್ವಾತಂತ್ರ್ಯ—ಅಸ್ವಾತಂತ್ರ್ಯ, ಕೇವಲ ವೈಯಕ್ತಿಕ ಸ್ವಾಮ್ಯ ಕೇವಲ ರಾಷ್ಟ್ರವ್ಯವಸ್ಥೆ, ರಾಜಸತ್ತೆಯ ಅತಿವ್ಯಾಪ್ತಿ-ಅದರ ಅವ್ಯಾಪ್ತಿ, ಅದು-ಇದು ಮುಂತಾದ ದ್ವಂದ್ವಗಳಲ್ಲಿ ಅಗತ್ಯವಾದ ಸಾಮರಸ್ಯವನ್ನು ಮಾಡಲೆತ್ನಿಸುವುದು. ಪ್ರತಿಯೊಬ್ಬ ಮನುಷ್ಯನ ಆಯುಷ್ಯದ ಬೇರೆ ಬೇರೆ ಭಾಗಗಳ ಅಧಿಕಾರ-ಕರ್ತವ್ಯಗಳನ್ನು ನಿರ್ಣಯಿಸಿ ಅವುಗಳನ್ನು ವಿಂಗಡಿಸಿ ಇದನ್ನು ಸಾಧಿಸಲಾಗುವುದು. ಈ ಅಧಿಕಾರ ಕರ್ತವ್ಯಗಳಿಗೆ ಆಯಾ ಆಶ್ರಮದ ಧರ್ಮಗಳೆಂದು ಹೇಳುತ್ತಾರೆ. ಮುಂದೆ ಆತನು ಪ್ರಾಯಪ್ರಬುದ್ಧನಾಗಿ ಸಾಮಾಜಿಕನಾಗಿ ಗೃಹಸ್ಥನಾದನೆಂದರೆ ಆತನಿಗೆ ವರ್ಣ

ಧರ್ಮಗಳೂ ವಿಧಿಸಲ್ಪಟ್ಟಿವೆ. ಈ ಹಕ್ಕು ಬಾಧ್ಯತೆ, ಕರ್ಮ-ಭೋಗ ( ತಕ್ಕ ಪ್ರತಿಫಲ ) ಇವುಗಳ ತಕ್ಕ ಹೊಂದಿಕೆಯಿಂದ ಸಮಾಜದಲ್ಲಿ ನಿಜವಾಗಿಯೂ ನ್ಯಾಯವನ್ನು ನೀಡುವ ವ್ಯವಸ್ಥೆಯುಂಟಾಗುವುದು. ಅದೇಕೆ, ಸಮತೆಯು ಸಹ ನೆಲೆಸುವುದು. ಆದರೆ ಇದು ಸಂಘವಾದಿಯ ಆರ್ಥಿಕ ವಿಚಾರದ ಸಮತೆಗಿಂತಲೂ ಆಧ್ಯಾತ್ಮಿಕ ತತ್ವದ ಅಥವಾ ಮನಃಪ್ರಪಂಚದ ಸಮತೆಯಾಗಿರುವುದು.

ಅದಲ್ಲದೆ ಈ ಯೋಜನೆಯನ್ನು ಹೀಗೆ ಸ್ಪಷ್ಟಪಡಿಸಲಾಗಿದೆ. “ಭಾರತೀಯ ಪರಂಪರಾಗತ ತತ್ತ್ವಗಳ ಮೇರೆಗೆ ರಾಷ್ಟ್ರದಲ್ಲಿ ನಾಲ್ಕು ವರ್ಗಗಳಿರಬೇಕು. (೧) ಬೌದ್ಧಿಕ ವ್ಯವಸಾಯಗಳ ವರ್ಗ, (೨) ನಿರ್ವಾಹಕ (Executive) ವರ್ಗ, (೩) ಅರ್ಥವ್ಯವಸಾಯದ ವರ್ಗ, (೪) ದುಡಿತದಾರರುಗಳ ವರ್ಗ. ಈ ನಾಲ್ಕು ವರ್ಗಗಳ ಚಟುವಟಿಕೆಗಳ ಮಧುರ ಸಹಕಾರದ ವ್ಯವಸ್ಥೆಯೂ ಆ ತತ್ತ್ವಗಳಲ್ಲುಂಟು. ಆ ಮೇರೆಗೆ ಇಡಿಯ ರಾಷ್ಟ್ರವನ್ನು ಏಕೀಕರಿಸಿ ಒಂದು ವರಿಷ್ಠ ಶಾಸನ ಮಂಡಲದ ಆಡಳಿತಕ್ಕೊಳಪಡಿಸಲಾಗುವುದು. ಈ ಮಂಡಲಕ್ಕೆ ಅಧೀನನಾಗಿ ವರಿಷ್ಠ ಕಾರ್ಯನಿರ್ವಾಹಕನೊಬ್ಬ (Supreme Executive head) ನಿರುವನು. ಮೇಲೆ ವಿವರಿಸಿದ ನಾಲ್ಕು ವ್ಯವಸಾಯಗಳ ನಿರ್ವಾಹಕ ಪ್ರತಿನಿಧಿಗಳಿಂದ ಈ ವರಿಷ್ಠ ಶಾಸನಮಂಡಲದ ರಚನೆಯಾಗುವುದು. ಈ ವ್ಯವಸ್ಥೆಯಿಂದ ಮೊದಲನೆಯ ವರ್ಗದ ಬುದ್ಧಿಯು, ಮುಖ್ಯವಾಗಿ ಶಾಸನಗಳ ನಿರ್ಮಾಣ ಮಾಡಿ ಎರಡನೆಯ ವರ್ಗದವರ ದೇಶರಕ್ಷಣೆಯ ಎಲ್ಲಕ್ಕೂ ಕ್ರಮಪ್ರಕಾರವಾಗಿ ಪ್ರಜೆಗಳನ್ನಾಳುವ ರೀತಿಗೂ ಮಾರ್ಗದರ್ಶಕವಾಗುವುದು. ಈ ಮೂಲಕ ಅಖಿಲ ಜನಾಂಗದ ಅಗತ್ಯಗಳನ್ನೊದಗಿಸುವ ಮೂರನೆಯ ವರ್ಗದ ಉತ್ಕರ್ಷವಾಗುವುದಲ್ಲದೆ ನಾಲ್ಕನೆಯ ವರ್ಗವು ಸುಖವಾಗಿ ಬಾಳಿ ಎಲ್ಲರಿಗೂ ಸಮರ್ಥವಾಗುವುದು.”

ಇದುವೆ ಡಾಕ್ಟರ್ ದಾಸರ ಪ್ರಾಚೀನ ಸಾಮ್ಯವಾದದ ತಿರುಳು. ಈ ಮೇರೆಗೆ ಅವರು ಸುವ್ಯವಸ್ಥಿತವಾದ ಸಯುಕ್ತಿಕವಾದ ಸುಖಸಮೃದ್ಧಿಗಳಿಂದ ಕೂಡಿದ ಸಮಾಜದ ಕಲ್ಪನೆಯನ್ನು ನಮ್ಮೆದುರು ಮಂಡಿಸಿದ್ದಾರೆ. ಅವರ ಯೋಜನೆಯು ಬಹಳ ಸರಳವಾಗಿದೆ. ಮನುವಿನಂತೆ ಸಮಾಜವನ್ನು ನಾಲ್ಕು ವ್ಯವಸಾಯಕ ವರ್ಗಗಳಾಗಿ ವಿಭಾಗಿಸಿದ್ದಾರೆ. ಅವುಗಳಿಗೆ ಬ್ರಾಹ್ಮಣ, ಕ್ಷತ್ರಿಯ,

ವೈಶ್ಯ, ಶೂದ್ರ ಎಂಬ ಹೆಸರುಗಳ ಬದಲು ಬೌದ್ಧಿಕ, ನಿರ್ವಾಹಕ, ಆರ್ಥಿಕ, ಸೇವಕ ಎಂಬ ನಾಮಕರಣಗಳನ್ನು ಮಾಡಿದ್ದಾರೆ. ಈ ವರ್ಗಗಳ ಕರ್ತವ್ಯ ಬಾಧ್ಯತೆಗಳು, ಅಧಿಕಾರ-ಪ್ರತಿಷ್ಠೆ ಸೌಕರ್ಯಗಳು ಯಾವುವೆಂದು ನಿರ್ಣಯ ವಾಗಬೇಕು. ಪರಮ ಶಾಸನಾಧಿಕಾರವು (Supreme Legislative power) ಬೌದ್ಧಿಕ ವ್ಯವಸಾಯದ ವರ್ಗದ ವಶದಲ್ಲಿರಬೇಕು.

ಇವನ್ನೆಲ್ಲ ಕೇಳಿದೊಡನೆ ಎರಡು ಅನುಮಾನಗಳು ತಲೆದೋರುತ್ತವೆ. ಸಮಾಜದ ಈ ಬಗೆಯ ವಿಭಾಗವು, ಯಾವ ರಾಜ್ಯವೋ ವರ್ಗವೋ ಅನ್ನುವಂತೆಯೂ ನಿರಂಕುಶವಾದುದಾಗಿಯೂ ತೋರುವುದಿಲ್ಲವೇ ? ಮೇಲೆ ವಿವರಿಸಿದ ಮೊದಲಿನ ಎರಡು ವರ್ಗಗಳನ್ನು ವಿಂಗಡಿಸುವುದು ಯಾವಾಗಲೂ ಬಹು ದುಸ್ತರ. ಸುಯುಕ್ತಿಕವಾದ ಆಧುನಿಕ ಸಮಾಜದಲ್ಲಿ ಬೌದ್ಧಿಕ ವ್ಯವಸಾಯದವರೇ ಶ್ರೇಷ್ಠವಾದ ನಿರ್ವಾಹಕ ಸ್ಥಾನಗಳನ್ನು ಆಕ್ರಮಿಸುವ ಸಂಭವವೇ ಹೆಚ್ಚು. ಇತ್ತ ಕೆಳಗಿನ ಸ್ಥಳಗಳಲ್ಲಿ ದುಡಿಯುವವರ ವರ್ಗದಿಂದ ತುಂಬಿ ಹೋಗುವುವು. ಧನೋತ್ಪಾದಕ ವರ್ಗವೆಂಬುದು ಸಾಮಾನ್ಯವಾಗಿ ಅದರ ಕಾರ್ಯಗಳನ್ನೆಲ್ಲ ನಿರ್ವಾಹಕ ಮತ್ತು ಶ್ರಮಜೀವಿಗಳ ವರ್ಗಗಳ ಜನರೇ ಮಾಡುವರು. ನಿಜವಾಗಿ ನೋಡಿದರೆ, ವರ್ತಕರು, ಔದ್ಯೋಗಿಕ ಸಂಸ್ಥೆಗಳೊಡೆಯರು, ಕುಸೀದವೃತ್ತಿಯವರು ಮುಂತಾದವರನ್ನೆಲ್ಲ ಧನೋತ್ಪಾದಕ ವರ್ಗದಲ್ಲಿ ಸೇರಿಸುವುದು ತಪ್ಪೇ ಸರಿ. ಕೂಲಿಕಾರರ ವರ್ಗದವರೇ ನಿಜವಾಗಿ ಧನೋತ್ಪತ್ತಿಯನ್ನು ಮಾಡುವವರೆಂದು ನಾನು ಮೊದಲೇ ತಿಳಿಸಿದ್ದೇನೆ. ಡಾ. ಭಗವಾನ್ ದಾಸರು ಧನದ ಉತ್ಪಾದಕ-ವ್ಯವಸಾಯಕ ವರ್ಗವೆಂದು ತಿಳಿದವರು ವಸ್ತುತಃ ಧನದ ಉತ್ಪಾದನವನ್ನು ಮಾಡುವುದೇ ಇಲ್ಲ. ಅವರು ಧನೋತ್ಪತ್ತಿಯ ವ್ಯವಸ್ಥೆಯನ್ನು ನಡೆಸುವ ಕ್ರಮದ ಬಲದಿಂದ ಕೈಲಾದಷ್ಟು ಹೆಚ್ಚು ಲಾಭವನ್ನು ಸೆಳೆಯುವರು. ವಿವೇಕಸಮ್ಮತವಾದ ಯಾವ ಸಮಾಜದಲ್ಲಿಯಾದರೂ ಈ ಧನೋತ್ಪಾದಕ ವರ್ಗವು ಆಡಳಿತದಲ್ಲಿಯೂ ನಿರ್ವಾಹಕ ವ್ಯವಸಾಯದಲ್ಲಿಯೂ ಸೇರಿಹೋಗುವುದು.

ಡಾಕ್ಟರರ ಸಮಾಜವಿಭಾಗವು ಸಂಪೂರ್ಣವಾದುದಲ್ಲವೆ ಅಲ್ಲ. ಹೆಚ್ಚು ಕಡಿಮೆ ಸ್ಪಷ್ಟವಾದ ಬೇರೆ ಬೇರೆ ವ್ಯವಸಾಯಗಳ ಪ್ರಕಾರ ಯಾವ ಸಮಾಜವನ್ನಾದರೂ ವಿಶೇಷತಃ ಈಗಿನ ಸಂಕೀರ್ಣ ಸಮಾಜಗಳನ್ನು ವಿಭಾಗಿಸುವುದು

ಯಥಾಯೋಗ್ಯವೇ ಆಗಿದೆಯೆನ್ನಬಹುದು ಇದೆಲ್ಲ ಸರಿ. ಆದರೆ ನಮಗೆ ತಿಳಿಯದೇ ಹೋದ, ಅನುಮಾನದ ಎರಡನೆಯ ಮಹತ್ತ್ವದ ಸಂಗತಿಯೊಂದಿದೆ. ಸಮಾಜವನ್ನು ನಾಲ್ಕು ಅಥವಾ ಬೇಕಾದಷ್ಟು ವ್ಯವಸಾಯಗಳಲ್ಲಿ ವಿಭಾಗಿಸಿದರೆ ಏನು ಪ್ರಯೋಜನ? ಅದರಿಂದ ನಮ್ಮನ್ನೆದುರಿಸುವ ಸಮಸ್ಯೆಗಳು ಬಗೆಹರಿಯುವುವೋ? ಸುಲಿಗೆ ಮತ್ತು ತೀವ್ರವಾದ ಆರ್ಥಿಕ ವಿಷಮತೆ ಇವುಗಳೇ ಡಾಕ್ಟರರ ವಿವೇಚನೆಯ ಮೂಲ ಕಾರಣಗಳು. ಸಮಾಜವನ್ನು ನಾಲ್ಕು ಅಥವಾ ಹಲವು ವ್ಯವಸಾಯಗಳಲ್ಲಿ ಹಂಗಡಿಸುವುದರಿಂದ ಈ ಕಾರಣಗಳ ನಿವಾರಣೆಯು ಹೇಗಾಗುವುದೆಂಬುದೇ ದೊಡ್ಡ ಅನುಮಾನ.

ಕೃತಕವಾಗಿ ಯಾವ ಸಮಾಜವೂ ವಿಭಾಗಿಸಲ್ಪಟ್ಟಿಲ್ಲೆಂಬುದನ್ನು ಅವರಿಗೆ ಮೊದಲು ಸೂಚಿಸಬೇಕಾಗಿದೆ. ಇದು ಸಮಾಜವಿಜ್ಞಾನಿಗಳ ಖಂಡಿತ ಮತ. ಸಮಾಜವಿಭಾಗವು ಸಮಾಜದ ಸಹಜವಾದ ಬೆಳವಣಿಗೆಯಲ್ಲಿಯೇ ಇದೆ; ಅದರ ಅಂಗಭೂತವಾಗಿಯೇ ಇದೆ. ಜನರು ತಮ್ಮ ಉಪಜೀವಿಕೆಯನ್ನು ದೊರಕಿಸುವ ಪದ್ಧತಿಯಲ್ಲಿಯೇ ಸಮಾಜವಿಭಾಗದ ಮೂಲ ಆಧಾರವಿದೆಯೆಂದು ಮಾರ್ಕ್ಸನು ತೋರಿಸಿದನು. ಸಮಾಜವು ನಾಗರಿಕತೆಯ ಒಂದು ಅಂತಸ್ತಿಗೆ ತಲುಪಿದಾಗ ಅದನ್ನು ಕಾಪಾಡಲಿಕ್ಕೆ ಸಹಜವಾಗಿ ಬೆಳೆದು ಆಗ ಪ್ರಚಲಿತವಾಗಿದ್ದ ಸಮಾಜವಿಭಾಗಗಳನ್ನೇ ಕ್ರಮಗೊಳಿಸಿ ಅವುಗಳ ಬಗೆಗೆ ಕಟ್ಟಳೆಯೊಂದನ್ನು ಮಾಡಿ ಅವುಗಳು ಸಯುಕ್ತಿಕವಾಗಿರುವುವೆಂದು ತೋರಿಸುವರು. ಹೀಗೆ ಸಾಮಾಜಿಕ ಕಟ್ಟಳೆಗಳನ್ನು ಕಟ್ಟುವ ಮತ್ತು ಅವು ಸಯುಕ್ತಿಕವಾಗಿವೆಯೆಂದು ಸಾಧಿಸಲು ಮಾಡುವ, ಬೌದ್ಧಿಕ ಪ್ರಯತ್ನಗಳ ಪೂರ್ಣತೆಯ ಸಜೀವ ಮೂರ್ತಿಯೇ ಮನುವು.

ಆಧುನಿಕ ಸಮಾಜದ ಸಮಸ್ಯೆಗಳ ಪರಿಹಾರಕ್ಕೆಂದು, ಸಮಾಜದ ವಿಭಾಗದ ಯೋಜನೆಯೊಂದನ್ನು ಡಾಕ್ಟರ್ ದಾಸರು ನಮ್ಮೆದುರಿಗಿಟ್ಟದು ತಿರುವುಮುರುವು ರೀತಿಯದಾಗಿದೆ. ಕುದುರೆಯ ಮುಂದೆ ಬಂಡಿಯನ್ನು ಕಟ್ಟಿದಂತಾಗಿದೆ. ಸಮಾಜದ ಈಗಿನ ವಿಭಾಗವು ತೀರ ತಪ್ಪಾಗಿದೆಯೆಂದು ಅವರು ಹೇಳುವುದು ಅತ್ಯಂತ ಯೋಗ್ಯವಾಗಿದೆ. ಆದರೆ ಅವರು ಸದ್ಯದ ವಿಭಾಗಕ್ರಮವನ್ನು ಬಿಟ್ಟು ನೂತನ ವಿಭಾಗವೊಂದನ್ನು—ಅದು ಆದರ್ಶಕ್ರಮವಾಗಿರಬಹುದು—ಮಾಡಿಸಲಿಚ್ಛಿಸುವುದರಲ್ಲಿ ತಾವು ಎದುರಿಸಿದ ಸಮಸ್ಯೆಗೇ ಶರಣು ಹೋಗಿದ್ದಾರೆ. ಸದ್ಯದ ವಿಭಾಗಕ್ರಮದ ಸ್ಥಾನವನ್ನು ಆಕ್ರಮಿಸಬಲ್ಲ ನೂತನ

ದರೂ ಪುನಸ್ಪ್ರೋಲಿಸಬೇಕು. ಇವೆರಡರಲ್ಲಿ ಒಂದು ಹಾದಿಯನ್ನು ಹಿಡಿಯದಿದ್ದರೆ, ಆ ಯೋಜನೆಯು ಮನುಮುನಿಯ ಪುಣ್ಯನಾಮದ ಸಂಬಂಧದಿಂದ ಪವಿತ್ರವಾಗಿ ತೋರುತ್ತಿದ್ದರೂ ಮೇಲೆ ಏಳಲಾರದು.

ಆದರೆ ಸುಲಿಗೆಗೊಳಪಟ್ಟ ಪಂಗಡಗಳಲ್ಲಿ ವಿಶೇಷತಃ ಕೂಲಿಯಾಳುಗಳ ವರ್ಗದಿಂದ, ತಮ್ಮ ಯೋಜನೆಯ ಯಶಸ್ಸಿಗೆ ಅಗತ್ಯವಾದ ಶಕ್ತಿಯೂ ದೃಷ್ಟಿಯೂ ಒದಗುವುವೆಂದು ಸಾಮ್ಯವಾದಿಯು ನೆರೆನಂಬುವನು. ಆತನ ಶ್ರದ್ಧೆ ಸಮಾಜದಲ್ಲಿರುವ ವರ್ಗಕಲಹದ ಶಕ್ತಿಯಲ್ಲಿ. ಆತನ ಅಪೇಕ್ಷೆ ಸುಲಿಗೆ ದಬ್ಬಾಳಿಕೆಗಳಿಗೊಳಗಾದವರ ಸಂಘಟನೆಯಿಂದ ಸದ್ಯದ ಸಮಾಜದ ಅಸ್ತಿವಾರವನ್ನಳಿದು ಹೊಸ ಬುನಾದಿಯ ಮೇಲೆ ಹೊಸ ಸಮಾಜವನ್ನು ನಿರ್ಮಿಸಬೇಕೆಂದು.

ಆದರೆ, ಮಹಾತ್ಮಾ ಗಾಂಧಿಯವರಂತೆ ಡಾಕ್ಟರ್ ದಾಸರೂ ಹೃದಯ ಪರಿವರ್ತನದ ಮಾರ್ಗವನ್ನೇ ಕೈಕೊಳ್ಳಬೇಕೆನ್ನುವರು. ಇದಕ್ಕಾಗಿ ಅವರೊಂದು ಯೋಜನೆಯನ್ನು ಮಾಡಿದ್ದಾರೆ. ಅದಕ್ಕೆ ಮನುವಿನ ಪುಣ್ಯನಾಮದ ಸಂಬಂಧವನ್ನು ಹಚ್ಚಿದ್ದಾರೆ. ಅವರು ಈ ಸಂದರ್ಭದಲ್ಲಿ "ಸ್ಥಿರವಾದ ಒಂದು ವರ್ಗವನ್ನು ಸಮಾಜದಲ್ಲಿ ಬೆಳೆಸಬೇಕು. ಅದರಿಂದ ಸುಜ್ಞರೂ ಸುಶೀಲರೂ ಆದ ಶಾಸನಕಾರರು (Legislators) ಒದಗಬೇಕು. ರಾಜ್ಯವಾಳಲು ಪ್ರಾಮಾಣಿಕರಾದ ಜನರು ಸಿಕ್ಕಬೇಕು. ಇವರೆಲ್ಲ ಜನತೆಯಲ್ಲಿ ತಕ್ಕ ಗೌರವ ವರ್ಚಸ್ಸುಗಳುಳ್ಳವರಾಗಬೇಕು. ಇಂತಹ ಜನರೇ ಅಧಿಕಾರ ಸ್ಥಾನಗಳನ್ನಾಕ್ರಮಿಸಿದರೆ ಸಾಮಾನ್ಯವಾಗಿ ಅಧಿಕಾರಿಗಳಿಂದಾಗುವ ಅನ್ಯಾಯ ಅತ್ಯಾಚಾರಗಳು ಸುಲಭವಾಗಿ ನಿಂತುಬಿಟ್ಟುವು. ಮನುವು ತನ್ನ ಸಮಾಜ-ಸಂಘಟನೆಯ ಯೋಜನೆಯನ್ನೂ ಇಡಿಯ ಸಾಮಾಜಿಕ ಸೌಧವನ್ನೂ ಇಂತಹ 'ಬ್ರಾಹ್ಮಣ' ಎಂಬ ಒಂದು ವರ್ಗದ ತಳಹದಿಯ ಮೇಲೆಯೇ ರಚಿಸಿದ್ದಾನೆ. ಈ ಬ್ರಾಹ್ಮಣರು-ಕರ್ಮದಿಂದಲೇ ಹೊರತು ಜನ್ಮದಿಂದಲ್ಲ-ಬ್ರಹ್ಮನ (ದೇವರ) ಪಾದ್ರಿಗಳು (ಪ್ರತಿನಿಧಿಗಳು).

ಮೊದಲಿನಂತೆ ಆಶ್ರಮ ಪದ್ಧತಿಯ ಪುನರುಜ್ಜೀವನವಾಗಿ ೫೦ನೆಯ ವರ್ಷದ ನಂತರ ಜನರು ಅರ್ಥಸಂಪಾದನೆಯ ಸ್ಪರ್ಧೆಯಿಂದಲೂ ಮನೆತನದ ಕೆಲಸಗಳಿಂದಲೂ ನಿವೃತ್ತರಾಗಿ ಆಶ್ರಮವಾಸಿಗಳಾದರೆ ಅಂತಹ ಜನರಲ್ಲಿ

ಅನೇಕರು ತಮ್ಮ ಆಯುಸ್ಸಿನ ಕೊನೆಯ ಭಾಗದಲ್ಲಿ—ವಾನಪ್ರಸ್ಥಾವಸ್ಥೆಯಲ್ಲಿ— ಪ್ರಾಜ್ಞರೂ ಶಿಕ್ಷಕಯೋಗ್ಯರೂ ಆದ ಋಷಿಗಳಾಗಿ, ತಮ್ಮ ಬುದ್ಧಿ-ನೀತಿಗಳ ಬಲದಿಂದ ಒಳ್ಳೆಯ ಶಾಸನಗಳನ್ನು ಮಾಡಲು ಮತ್ತು ರಾಜ್ಯದ ಆಡಳಿತದಲ್ಲಿರುವ ಅಧಿಕಾರಿ ವರ್ಗಕ್ಕೆ ಮಾರ್ಗದರ್ಶಕರಾಗಿ ಅವರನ್ನು ತಮ್ಮ ಹೇಳಿಕೆಯ ನೀತಿಗೆ ನಡೆಯಹಚ್ಚಲು ಅತ್ಯಂತ ಯೋಗ್ಯರಾಗುವರು.

ಜ್ಞಾನದ ನಡೆಯ ಸ್ಫೂರ್ತಿ ನೀಡುವ ಮತ್ತು ಶಿಕ್ಷಣ, ವಿವೇಕವಿಸ್ತಾರ, ಸದಾಚಾರಪ್ರವರ್ತನ, ಸುಸ್ವಭಾವಪೋಷಣ ಮತ್ತು ತರುಣರ ದೇಹಬಲ-ಸಂವರ್ಧನ ಇವುಗಳಲ್ಲಿ ತೊಡಗಿದ ಜಗತ್ತಿನ ಎಲ್ಲ ಕಡೆಯ ಸ್ತ್ರೀಪುರುಷರು ತಮ್ಮ ತಪೋಬಲ ವಿದ್ಯಾಶ್ರದ್ಧೆಗಳಿಗೆ ಲೋಕಸೇವಾವೃತ್ತಿ, ಮಾನವಹಿತಬುದ್ಧಿಗಳಲ್ಲದೆ ತಪೋಜೀವನದ ಪುಣ್ಯಪ್ರಭಾವ, ಅವರ ಸಹಜಕ್ಷಾತ್ರಶಕ್ತಿ, ಅವರ ನೀತಿಬಲ, ಎಲ್ಲವನ್ನೂ ಅಧೀನದಲ್ಲಿಡುವ ಅವರ ಆಧ್ಯಾತ್ಮಶಕ್ತಿ ಇವುಗಳನ್ನೂ ಜೋಡಿಸಬೇಕು. ಹೀಗೆ ಮಾಡಿದೊಡನೆ ಒಂದೇ ದಿನದಲ್ಲಿ ಜಗದ ರೋಗವೆಲ್ಲ ಗುಣವಾಗುವುದು. ರಾಜ್ಯಶಾಸನದ ದುರ್ವ್ಯವಸ್ಥೆಯೊಳಗಿನ ಪಾಪ, ದರ್ಪ, ಲೋಭ, ಕಾಮಗಳೆಂಬ ಭೂತಗಳೆಲ್ಲ ಹೇಳಹೆಸರಿಲ್ಲದೆ ಪಲಾಯನ ಮಂತ್ರವನ್ನು ಪಠಿಸುವುವು. ಆಗ ಅವರೆಲ್ಲರೂ ನಿಜವಾದ ಲೋಕಸೇವಕರಾಗುವರು" ಎಂದು ಮುಂತಾಗಿ ಬರೆಯುತ್ತಾರೆ.

ಪ್ರಾಜ್ಞರಾದ ಡಾಕ್ಟರರಿಗೆ ತೋರಿದ ದರ್ಶನವು (Vision) ನಿಜವಾಗಿಯೂ ಸ್ಫೂರ್ತಿದಾಯಕವಾದುದು. ಆದರೆ ನೋಡುವವರಿಗೆ ಮಾತ್ರ ಇದೊಂದು ಕನಸಿನ ರಾಜ್ಯ, ವಾಸ್ತವವಲ್ಲದುದು ಎಂದು ಕಂಡುಬರುವುದು. ನಮಗೆ ಇಂದು ಸುತ್ತಲೂ ಕಣ್ಣಿಗೆ ಕಾಣುವುದೇನು? ವಿಶ್ವವಿದ್ಯಾಲಯಗಳು ಹಸಿವೆಯಿಂದ ಹಂಬಲಿಸುವ ಹರೆಯದ ಹುಡುಗರನ್ನು ತಯಾರು ಮಾಡುತ್ತಿವೆ. ಸಮಾಜವೆಲ್ಲ ಸ್ವಾರ್ಥ-ಸ್ವವರ್ಗಹಿತಗಳೆಂಬ ಸಂಕುಚಿತ ಭಾವನೆಗಳಿಂದ ತುಂಬಿಹೋಗಿದೆ. ರಾಷ್ಟ್ರಗಳಂತೂ ಹೇಳಿಕೇಳಿ ವರ್ಗಪ್ರಧಾನವಾದ ರಾಜ್ಯಭಾರವನ್ನು ನಡೆಸಿವೆ. ಮುಪ್ಪಿನಲ್ಲಿಯೂ ಸ್ವಾರ್ಥಮೋಹಗಳನ್ನು ಬಿಡಲಾರದ ಮಾನವನು, ಇತ್ತೀಚೆಗೆ ಕಂಡುಹಿಡಿದ ಹೊಸ ಯಂತ್ರಗಳ ನೆರವಿನಿಂದ ನವಜೀವನವನ್ನು ಕೋರುತ್ತಿರುತ್ತಾರೆ. ಇಂತಹ ಸಂದರ್ಭ

ನಲ್ಲಿ ಡಾಕ್ಟರ್ ದಾಸರ ಈ ಭವ್ಯದರ್ಶನವು ಅಸಂಭಾವ್ಯವೂ ಯಾವ ಲೋಕಕ್ಕೆ ಸಂಬಂಧಪಟ್ಟುದೋ ಏನೋ ಎಂಬಂತೆಯೂ ಕಂಡುಬರುವುದು.

ಅದಿರಲಿ. ಡಾಕ್ಟರ್ ದಾಸರ ಯೋಜನೆಯ ವರ್ಣನೆಯನ್ನು ಮುಂದರಿಸೋಣ. ತಾವು ವರ್ಣಿಸಿದ ಮಾದರಿಯ ಮುಂದಾಳುಗಳನ್ನು ತಯಾರು ಮಾಡಲು ಯೋಗಶಾಲೆಯೊಂದು ಬೇಕೆಂದು ಅವರು ಹೇಳುವರು. "ಯೋಗಶಾಲೆ" ಎಂಬ ಭಾಗದಲ್ಲಿ "ಅಗತ್ಯವುಳ್ಳ ನೈತಿಕ, ಬೌದ್ಧಿಕ, ಶಾರೀರಿಕ, ಆಧ್ಯಾತ್ಮಿಕ ಗುಣಗಳುಳ್ಳವರನ್ನು ಮತ್ತು ಅನುಭವವುಳ್ಳ ಕೆಲವು ನಿಜವಾದ ಯೋಗಸಾಧಕರನ್ನು ಹುಡುಕಿ ಥಿಯೊಸೊಫಿಕಲ್ ಸೊಸಾಯಿಟಿಯ ಬೇರೆ ಬೇರೆ ಕೇಂದ್ರಗಳಿಗೆ ಆಮಂತ್ರಿಸಿ ಅವರು ಇತರರಿಗೆ ಮಾರ್ಗದರ್ಶಕರಾಗುವಂತೆ ಮಾಡಬೇಕು. ಹೀಗೆ ಯೋಗಾಭ್ಯಾಸವನ್ನು ಮಾಡಲು ಬಯಸುವವರು ಯೋಗಶಾಲೆಯ ಪ್ರವೇಶಕ್ಕೆ ನೈತಿಕ, ಮಾನಸಿಕ, ದೈಹಿಕ ಗುಣಗಳ ತಕ್ಕ ಯೋಗ್ಯತೆಯನ್ನು ಪಡೆಯಬೇಕು. ಅವರಲ್ಲಿ ಯೋಗಾಭ್ಯಾಸದಲ್ಲಿ ಸಂಭವಿಸುವ ಅಪಾಯಗಳನ್ನೆದುರಿಸುವ ಸಿದ್ಧತೆ ಇರಬೇಕು. ಪ್ರವೇಶವನ್ನು ಅಪೇಕ್ಷಿಸುವವನಿಗೆ ತನ್ನನ್ನು ಹೊಟ್ಟೆಗಾಗಿ ಅವಲಂಬಿಸುವವರಿರಬಾರದು. ಸಂಸಾರದ ಸಂಬಂಧವಿರಕೂಡದು. ಯೋಗದ ಪ್ರಯೋಗ-ಪ್ರದರ್ಶನಗಳನ್ನೆಲ್ಲ ಶಾಸ್ತ್ರೀಯವಾದ ಮಾರ್ಗದಿಂದಲೇ ನಡೆಸಬೇಕು. ಒಂದು ಪ್ರಶ್ನೆಯನ್ನು ಶಾಸ್ತ್ರೀಯವಾಗಿ ಸಿದ್ಧಪಡಿಸಲಾಗದ ಸಂದರ್ಭದಲ್ಲಿ ಶ್ರದ್ಧೆಯನ್ನಿಡಿರೆಂದು ಶಿಷ್ಯರನ್ನು ಕೇಳಬಾರದು. ಇಂತಹ ಯೋಗಶಾಲೆಗಳಿಂದಲೇ ಪಂಡಿತರೂ ಸಕಲಗುಣಮಂಡಿತರೂ ಆದ ಆತ್ಮವೀರರು ಸಿದ್ಧರಾಗುವರು. ಇವರ ನೈತಿಕ ಆಧ್ಯಾತ್ಮಿಕ ಪ್ರಭಾವದಿಂದಲೂ ಮಾನವ ಜನದ ಕಲ್ಯಾಣಕ್ಕಾಗಿ ಇವರು ಮಾಡುವ ಕಾರ್ಯಗಳಿಂದಲೂ ಜಗತ್ತಿನಲ್ಲಿ ಶಾಂತಿ ಸಂತುಷ್ಟಿಗಳೂ ಭೌತಿಕ ಆಧ್ಯಾತ್ಮಿಕ ಸೌಖ್ಯವೂ ಲಭಿಸುವುದರಲ್ಲಿ ಸಂದೇಹವಿಲ್ಲ" ಎಂದು ಮುಂತಾಗಿ ಬರೆದಿದ್ದಾರೆ.

ವರ್ಗಕಲಹದ ಬದಲು ಡಾಕ್ಟರ್ ಭಗವಾನ್‌ದಾಸರು ಯೋಗಶಾಲೆಯ ಯೋಜನೆಯನ್ನು ಮಂಡಿಸಿದ್ದಾರೆ. ಶ್ರೀ. ಎಚ್. ಜಿ. ವೆಲ್ಸರು ಸ್ಟಾಲಿನ್ನರಿಗೆ ಪಿ. ಇ. ಎನ್. ಕ್ಲಬ್ಬನ್ನು ಸೂಚಿಸಿದ್ದರು. ಜಗತ್ತಿನ ದೂರದ ಎರಡು ಭಾಗಗಳಲ್ಲಿ ಈ ಎರಡು ಬಗೆಯ ಆಲೋಚನೆಗಳು ನಡೆದಿವೆ. ಆದರೆ ಇವೆರಡಕ್ಕೂ ಸ್ಫೂರ್ತಿಯಿತ್ತ ಸಾಮಾಜಿಕ ಶಕ್ತಿಯು ಒಂದೇ. ಮಧ್ಯಮ

ಶ್ರಮ ಪಕ್ಷಗಳಲ್ಲಿ ಸಂಘವಾದಿಗಳು ಸಹಿತ ಸಾಮ್ಯವಾದಿಗಳ ಬಲವೇ ಅತ್ಯಂತ ದೊಡ್ಡದು. ಸಾಮಾಜಿಕ ಸಂಘಟನೆಯ ಯೋಜನೆಗಳಲ್ಲಿ ತೊಡಗಿದ ಬ್ರಹ್ಮನ ಪ್ರಚಾರಕರ ಸಂಖ್ಯೆಯನ್ನು ಎಣಿಸದಿರುವುದೇ ಮೇಲು. ಅಂತಹರು ಬಿಡಿ ಜನರಾದರೂ ಇದ್ದಾರೋ ಇಲ್ಲವೋ ಎಂಬುದು ಸಂದೇಹ. ಭಾರತದಲ್ಲಿ ಸಾಮ್ಯವಾದಿಗಳ ಬಲವು ಅತ್ಯಲ್ಪವೆಂಬುದು ನಿಜ. ಆದರೆ ಇಲ್ಲಿ ಸಾಮ್ಯವಾದಕ್ಕೆ ಪುಟಕೊಡುವ ಪರಿಸ್ಥಿತಿ ಕೇವಲ ಇತ್ತೀಚೆಗೆ ಹುಟ್ಟಿದುದು. ಸಾಮ್ಯವಾದಕ್ಕೆ ಎಡೆಕೊಡುವ ಸಂದರ್ಭಗಳುಂಟಾದುದು ಇತ್ತೀಚೆಗೆ. ಆದರೆ ಭಾರತದಲ್ಲಿಯೂ ಸಾಮಾಜಿಕ ಪುನರ್ಘಟನೆಯ ಬಗೆಗೆ ಸ್ವಲ್ಪವಾದರೂ ಪ್ರಯತ್ನ ಮಾಡುತ್ತಿರುವ ಸಂಗಡಗಳಲ್ಲಿ ಸಮತಾವಾದಿಗಳ ಬಳಗವೇ ದೊಡ್ಡದೆಂಬುದರಲ್ಲಿ ಅನುಮಾನವಿಲ್ಲ.

ಇನ್ನು ಥಿಯೊಸಾಫಿಕಲ್ ಸೊಸೈಟಿ (ಬ್ರಹ್ಮಜ್ಞಾನದ ಸಂಘ) ಮತ್ತು ಅಂತಹ ಇತರ ಅಧ್ಯಾತ್ಮಸಂಸ್ಥೆಗಳಿಂದ ಬ್ರಹ್ಮನ ಸಾಕಷ್ಟು ಮಿಶನರಿಗಳು ಸಿದ್ಧರಾದರೆಂದು ತಿಳಿದುಕೊಳ್ಳುವಾ. ಆದರೆ ಅದರಿಂದ ನಮ್ಮ ಇಷ್ಟಕಾರ್ಯವು ನೆರವೇರುವುದೆಂದು ಹೇಗೆ ಹೇಳುವುದು? ಅವರು ಸಮಾಜದ ಪುನರ್ವಿಭಜನೆಯನ್ನು ಮಾಡಬಲ್ಲರೋ? ಬೇರೆ ಬೇರೆ ವರ್ಗಗಳಲ್ಲಿ ಧನ, ಅಧಿಕಾರ, ಉದ್ಯಮಗಳನ್ನು ಹೊಸದಾಗಿ ಹಂಚಿಹಾಕಬಲ್ಲರೋ?

ಬ್ರಹ್ಮವಾದದಲ್ಲಿ ಅಮಿತವಾದ ಶ್ರದ್ಧೆಯುಳ್ಳವರು ಮಾತ್ರ ಇವಕ್ಕೆ "ಅಹುದು" ಎಂಬ ಉತ್ತರವನ್ನು ಕೊಡಬಲ್ಲರು.

ಕೊನೆಗೆ ಇಷ್ಟೇ ಹೇಳಬೇಕಾಗಿದೆ. ಬ್ರಹ್ಮನ ಪ್ರಚಾರಕರ—ಮಿಶನರಿಗಳ—ವಿಷಯದ ಈ ಯೋಜನೆಯನ್ನು ಕಲ್ಪಿಸುವ ಗಾಂಭೀರ್ಯವನ್ನು ನೋಡಿದರೆ ಉಸಿರಾಡಲು ಬರದಂತಾಗಿದೆ. ಜಗತ್ತು ತತ್ತರಿಸಿ ಕುಪ್ಪಳಿಸುತ್ತಿದೆ. ಹುಚ್ಚೆದ್ದು ನರಳುತ್ತ ವಿನಾಶದ ಕಡೆಗೆ ಜೋರಾಗಿ ಉರುಳುತ್ತಿದೆ; ಲಕ್ಷಾವಧಿ ಜನರು ಕೆಲಸಗೇಡಿಗಳಾಗಿ ಹೊಟ್ಟೆಗೆ ಹಿಟ್ಟಿಲ್ಲದೆ ತೊಳಲಿ ಬಳಲುತ್ತಿದ್ದಾರೆ; ಸುಲಿಗೆ—ದಬ್ಬಾಳಿಕೆಗಳಿಗಾಗಿ ನೂತನ ಸಾಧನಗಳನ್ನು ರಚಿಸುವ, ದಂಡುಗುಂಡುಗಳನ್ನು ಬೆಳೆಸುವ, ಒಕ್ಕಲುನಾಡುಗಳನ್ನು ಮುಕ್ಕುತ್ತಿರುವ, ಕೋಟಿಗಟ್ಟಲೆ ಜನರ ಜೀವನದೊಡನೆ ಜೂಜಾಡುತ್ತಿರುವ ಸಾಮ್ರಾಜ್ಯಗಳ ಸೂತ್ರಧಾರಕರಾದ

ಬಂಡವಾಳಗಾರಿಕೆಯು ಬಡವರನ್ನು ಸಹಜರೀತಿಯಿಂದ ಸುಲಿಯುತ್ತಿದ್ದಾನೆ. ಮನಸ್ಸು ತಲ್ಲಣಿಸುವ ಇಂಥ ಸಂದರ್ಭದಲ್ಲಿ ಈ ತತ್ವಜ್ಞಾನಿ ಶಾಂತ-ಗಂಭೀರಭಾವದಿಂದ ಯೋಗಗಾಲಿಯ ಪ್ರಸ್ತಾಪವನ್ನು ಮಾಡುತ್ತಾನೆ! ಇದಲ್ಲವೆ ಆಶ್ಚರ್ಯವಾದ ಸಂಗತಿ?

## ಫ್ಯಾಸಿಜಮ್

ಆಧುನಿಕ ಜಗತ್ತಿನ ಜೀವನರಂಗದಲ್ಲಿ ತೋರಿಬರುವ ಶಕ್ತಿ ಸ್ಫೂರ್ತಿಗಳ ನಸುವಾದರೂ ಪರಿಚಯವುಳ್ಳವನು, ಸಾಮ್ಯವಾದದ ಸ್ಥಾನವನ್ನು ಫ್ಯಾಸಿಜಮ್ ಎಂದೆಂದಿಗೂ ಆಕ್ರಮಿಸಲಾರದೆಂದು ಖಂಡಿತವಾಗಿ ತಿಳಿಯುವನು. ನಿಜವಾಗಿಯೂ ಫ್ಯಾಸಿಜಮ್ ಎಂಬುದು ಸಾಮ್ಯವಾದದ ಎದುರಾಳಿ. ಅದರ ಕಲ್ಲೆದೆಯ ಹಗೆ.

ಫ್ಯಾಸಿಜಮ್ಮು ಬಂಡವಾಳಗಾರಿಕೆಯ ಕೊನೆಗಾಲದ ಲಕ್ಷಣ. ಹೇಗಾದರೂ ಮಾಡಿ ಪ್ರಾಣ ಉಳಿಸಿಕೊಳ್ಳಬೇಕೆಂದು ಬಂಡವಾಳಗಾರಿಕೆಯು ಹೂಡಿದ ಪ್ರಯತ್ನ. ಅದು ಮನಬಂದಂಥ ಲಗಾಮಿಲ್ಲದ ಸಟ್ಟೆಗಳಿಂದ ಹುಟ್ಟಿದ ಹಣಕಾಸಿನ ಬಿಕ್ಕಟ್ಟನ್ನು, ಕೂಲಿಕಾರರ ಸಂಘಟಿತ ಬೇಡಿಕೆಯಿಂದಾದ ರಾಜಕೀಯ ಅಪಾಯವನ್ನೂ ಅದಕ್ಕೆ ಎದುರಿಸಬೇಕಾಗಿದೆ. ಆದುದರಿಂದ ಅದು ಈಗ ಪ್ರಜಾಸತ್ತಾತ್ಮಕ ಪದ್ಧತಿಗೆ ಅಗ್ನಿಸಂಸ್ಕಾರ ಕೊಡಬೇಕೆಂದು ಬಯಸುತ್ತಿದೆ. ಏಕೆಂದರೆ ಈವರೆಗೆ ತನ್ನ ಕಾರ್ಯಕಲಾಪಗಳಿಗೆ ಅನುಕೂಲ ಸಾಧನವಾಗಿದ್ದರೂ ಈಗ ತನಗೆ ಅಗತ್ಯವಾಗಿರುವ ಅನಿಯಂತ್ರಿತ ಅಧಿಕಾರಬಲವನ್ನು ಅದು ಒದಗಿಸಲಾರದು. ಅದಲ್ಲದೆ ತನ್ನ ಏಳಿಗೆಯ ಕಾಲದಲ್ಲಿ ಸೇರಿ ರದು ಪಲ್ಲವಿಸಿದ ಸಂಸ್ಕೃತಿಯನ್ನೂ ಅದು ಬೇಕೆಂತಲೆ ಕಮರಿಸಿಬಿಡಬೇಕೆಂದಿದೆ. ಧನಿಕರಿಗೆ ಫ್ಯಾಸಿಜಮ್ ಎಂಬುದು ಕೇವಲ ತಾತ್ಪೂರ್ತಿಕವಾಗಿ ಪರಿಣಾಮಕಾರಿಯಲ್ಲವಾದರೂ ಅಷ್ಟರಲ್ಲಿ ಸಾಮ್ಯವಾದದ ಸ್ಥಾನವನ್ನಾಕ್ರಮಿಸಲು ಲಕ್ಷ್ಯವಾದ ಯೋಜನೆಯೆಂದು ತೋರುತ್ತದೆ. ಆದರೆ ತ್ಯಾಗಿಗಳಾದ ಕಾಂಗ್ರೆಸ್ ಕೆಲಸಗಾರರಂತೆ ಜನತೆಯ ಹಿತವನ್ನು ಹಂಬಲಿಸುವ, ಮತ್ತು ಅವರಿಗಾಗಿ ಸ್ವರಾಜ್ಯವನ್ನು ಸ್ಥಾಪಿಸಬೇಕೆಂದು ಬಯಸುವ, ಜನರಿಗೆಲ್ಲ ಫ್ಯಾಸಿಜಮ್ಮು ಅತ್ಯಂತ ಅಪಾಯಕಾರಕವಾದ ಪರಮ ಶತ್ರುವೆಂದು ತಪ್ಪದೆ ಮನವರಿಕೆ

ಯಾಗುವುದು. ನಿಲ್ಲಲು ಅವಕ್ಕೆ ಎಂದೆಂದಿಗೂ ಎಡೆಕೊಡಬಾರದೆಂದೆನಿಸುವುದು.

ಫ್ಯಾಸಿಜಮ್ಮು ಜನತೆಯ ಹಿತವನ್ನು ಎಷ್ಟು ವಿರೋಧಿಸುತ್ತದೆಂಬುದು ಸರ್ವ ವಿಶ್ರುತವಾಗಿದೆ. ಆದುದರಿಂದ ನಾನು ಇಲ್ಲಿ ಅದರ ವಿವೇಚನೆಯನ್ನು ಮಾಡದಿರದಿದ್ದರೂ ನಡೆಯುತ್ತಿತ್ತು. ಆದರೆ ಕೆಲವು ಪ್ರಮುಖ ಕಾಂಗ್ರೆಸ್ ಕಾರ್ಯಕರ್ತರು ಅದನ್ನು ಹೊಗಳಿ ಅಟ್ಟಕ್ಕೇರಿಸಿದ್ದಲ್ಲದೆ ಹಿಂದುಸ್ಥಾನಕ್ಕಾಗಿ ಸಾಮ್ಯವಾದ-ಫ್ಯಾಸಿಜಮ್‌ಗಳ ಸಮನ್ವಯವನ್ನು ಮಾಡಬೇಕೆಂದೂ ಅಭಿಪ್ರಾಯಪಟ್ಟಿರುವುದರಿಂದ ಹೀಗೆ ಮಾಡಬೇಕಾಯಿತು. ಇಂತಹ ಸಮನ್ವಯದ ವಿಷಯಕ್ಕೆ ಮಾತಾಡುವುದು ತಿಳಿಗೇಡಿತನದ ಲಕ್ಷಣವಾಗಿರುವಂತೆ ಅತ್ಯಂತ ಅಪಾಯಕಾರಕವೂ ಆಗಿದೆ. ಫ್ಯಾಸಿಜಮ್-ಸಾಮ್ಯವಾದಗಳ ನಡುವೆ "ಸರ್ವಾಧಿಕಾರ"ದಂತಹ ಕೆಲವು ಸಾದೃಶ ಲಕ್ಷಣಗಳಿರುವುದೇ ಈ ಸಮನ್ವಯ ವಿಚಾರದ ಸ್ಫೂರ್ತಿಯಾಗಿದೆ. ಈ ಸಾದೃಶ್ಯವು ಬಹಳ ಮೋಸವನ್ನು ಮಾಡುವುದು. ಸರ್ವಾಧಿಕಾರದ ಅನುಕೂಲ ನೇಪಥ್ಯದ ಮರೆಯಲ್ಲಿ ಸಾಗುವ ಉದ್ಯಮಪ್ರಭುಗಳ ಮತ್ತು ಕುಸೀದವೃತ್ತಿಯವರ (Bankers) ಆಳಿಕೆಗೂ ಕೂಲಿಕಾರರ ಮತ್ತು ಒಕ್ಕಲಿಗರ ಆಳಿಕೆಗೂ ಬಹಳ ಅಂತರವಿದೆ. ಮೊದಲಿನ ಪಂಗಡದವರ ಆಳಿಕೆ ಕೇವಲ ಕೂಲಿಕಾರರ ಮತ್ತು ಒಕ್ಕಲಿಗರ ಸುಲಿಗೆಗಾಗಿಯೇ ಇರುವುದು. ಆದರೆ ಕೂಲಿಕಾರರ ಆಳಿಕೆ ಈ ಸುಲಿಗೆಯನ್ನು ಕೀಳಲು ಹೋರಾಡುವುದು. ಇವೆರಡರಲ್ಲಿ ಯಾವ ಸಾಮ್ಯವೂ ಇಲ್ಲ.

ನಾವು ಫ್ಯಾಸಿಜಮ್-ಸಾಮ್ಯವಾದಗಳ ಹೊರಮೈಯನ್ನು ಮಾತ್ರ ನೋಡಲಾಗದು; ಆಳವಾಗಿ ನಿರೀಕ್ಷಿಸಿ ಅವುಗಳ ಒಳಮೈಯನ್ನೇ ಪರೀಕ್ಷಿಸಬೇಕು. ಧನಿಕ ವರ್ಗದ ಅಪಹಾರ-ಲೋಭಗಳೇ ಫ್ಯಾಸಿಜಮ್ಮಿನ ತಾಯ್ಬೇರು. ಈ ಅಪಹಾರ-ಲೋಭಗಳ ಹಿಡಿತದಿಂದ ತಮ್ಮ ಬಿಡುಗಡೆಯಾಗಬೇಕೆಂಬ ಜನತೆಯ ಹಟದಲ್ಲಿಯೇ ಸಾಮ್ಯವಾದದ ಹುಟ್ಟು. ಇವೆರಡರ ಸಮನ್ವಯವೇ ಆಗಲಾರದು.

ಫ್ಯಾಸಿಜಮ್ಮಿನ ಬಗೆಗೆ ಇದಕ್ಕಿಂತಲೂ ವಿಸ್ತಾರವಾದ ವಿವೇಚನೆಗೆ ಹೋದರೆ ಬಹಳ ವಿಷಯಾಂತರವಾಗಬಹುದು. ಆದುದರಿಂದ ಫ್ಯಾಸಿಜಮ್ಮಿನಿಂದ ಸಂಭವಿಸುವ ಗಂಡಾಂತರಗಳನ್ನು ಮಾತ್ರ ಸೂಚಿಸಿದ್ದೇನೆ. ಆದರೆ

ಫ್ಯಾಸಿಜಮ್ಮಿನ ಬಗೆಗೆ ಇನ್ನೂ ಹೆಚ್ಚು ವಿಚಾರಗಳನ್ನು ತಿಳಿದುಕೊಳ್ಳಬೇಕೆಂಬ ಅಭಿರುಚಿಯುಳ್ಳವರಿಗೆ ನನ್ನದೊಂದು ಸೂಚನೆ. ಈ ವಿಷಯವನ್ನು ಕುರಿತು ಹಲವು ಗ್ರಂಥಗಳಿವೆ. ಆದರೆ ಶ್ರೀ. ಆರ್. ದತ್ತರು "ಫ್ಯಾಸಿಜಮ್ ಮತ್ತು ಸಾಮಾಜಿಕ ಕ್ರಾಂತಿ" ಎಂಬ ಪುಸ್ತಕದಲ್ಲಿ ಮಾಡಿದುದಕ್ಕಿಂತ ಹೆಚ್ಚು ಯೋಗ್ಯತೆಯ ಫ್ಯಾಸಿಜಮ್ಮಿನ ವಿಮರ್ಶೆಯನ್ನು ನಾನು ಕಂಡಿಲ್ಲ. ಈಗ ಇಂಗ್ಲಿಷ್ ಭಾಷೆಯಲ್ಲಿ ಬರೆಯುವ ಶಾಸ್ತ್ರಜ್ಞರಲ್ಲಿ ಅವನು ಎಲ್ಲರಿಗಿಂತಲೂ ಮಿಗಿಲಾದವನು. ಮಹಾಯುದ್ಧದ ಪೂರ್ವಕಾಲೀನ ಸಾಮ್ರಾಜ್ಯವಾದದ ಬಗೆಗೆ ಲೆನಿನ್ನನು ಬರೆದ 'ಸಾಮ್ರಾಜ್ಯವಾದ' (Imperialism) ಎಂಬ ಪುಸ್ತಕವನ್ನೂ ಈಚಿನ ಬಂಡವಾಳಗಾರಿಕೆಯ ನಿಲುಸ್ಥಿತಿಯ ಬಗೆಗೆ ಶ್ರೀ. ದತ್ತರು ಬರೆದ 'ಫ್ಯಾಸಿಜಮ್' ಎಂಬ ಪುಸ್ತಕವೂ ಮಹತ್ತ್ವಪೂರ್ಣವಾಗಿದೆ. ಮಾರ್ಕ್ಸಿಜಮ್ಮಿನ ಮುಂದಿರುವಲ್ಲಿ ಇವೆರಡು ಗ್ರಂಥಗಳೂ ಒಂದಕ್ಕೊಂದು ಹೊಂದಿಯೇ ಇರಲು ಯೋಗ್ಯವಾಗಿವೆ.

---

## ೪. ರೀತಿ-ವಿಧಾನಗಳು

ಕೆಲವು ದಿನಗಳ ಹಿಂದೆ ದಿ ಹಿಂದುಸ್ಥಾನ್ ಟೈಮ್ಸ್ ಎಂಬ ಪತ್ರಿಕೆ "ವಿದೇಶೀಯ ಪ್ರಭುತ್ವದಿಂದಲೇ ನಮ್ಮ ನಾಡಿನ ಮುನ್ನಡೆಗೆ ತಡೆಯಾಗಿದೆ. ಅದರಿಂದ ನಮ್ಮ ಜನಾಂಗಜೀವನವೂ ಕುಂಠಿತವಾಗಿದೆ. ಜನಾಂಗವು ಅದ ನ್ನೊಮ್ಮೆ ನಿರ್ಮೂಲಿಸಲಿ. ಆ ಮೇಲೆ ಜನತೆಯು ಕೇಳಲು ಸಿದ್ಧವಿದ್ದರೆ, ಸಾಮ್ಯವಾದಿಗಳಿಗೆ ತಮ್ಮ ತತ್ತ್ವಗಳ ಪ್ರಚಾರವನ್ನು ಮಾಡಲು ಸಾಕಷ್ಟು ಸಮಯ-ಸಂದರ್ಭಗಳು ಸಿಕ್ಕುವವು. ಸಾಮಾನ್ಯ ಸಂಕಟವು ನಮ್ಮನ್ನೆಲ್ಲ ಎದುರಿಸಿರುವಾಗ ದೇಶದಲ್ಲಿ ವೈಷಮ್ಯವನ್ನು ಬೆಳೆಸುವುದು ದೇಶಭಕ್ತಿಯ ಲಕ್ಷಣವಲ್ಲ" ಎಂಬುದಾಗಿ ಬೊಬ್ಬಿರಿಯಿತು.

ಈ ಪತ್ರಿಕೆ ಭಾರತೀಯ ಬಂಡವಾಳಗಾರರ ಉಸಿರಾಗಿರುವುದರಿಂದ, ನಮಗೆ ದೇಶಭಕ್ತಿಯ ಪಾಠವನ್ನು ಕಲಿಸಲಿಕ್ಕೆ ಅದಕ್ಕೆ ಪೂರ್ಣ ಅಧಿಕಾರವಿದೆ. ದೇಶಭಕ್ತಿಯೆಂಬುದು ಬಂಡವಾಳಗಾರರ ವಿಲಕ್ಷಣವಾದ ದೌರ್ಬಲ್ಯ. ನಿಜ

ವಾಗಿ ನೋಡಿದರೆ, ಬಂಡವಾಳಗಾರಿಕೆಯ ಹುಟ್ಟಿನೊಂದಿಗೆ ಜನಾಂಗದ-ದೇಶ ಭಕ್ತಿಯಕಲ್ಪನೆಯು ಉದಯಿಸಿತು. ಬಂಡವಾಳಗಾರಿಕೆಯ ಏಳ್ಗೆಯೊಂದಿಗೆ ಇದರ ಪ್ರಭಾವವೂ ಬೆಳೆಯಿತು. 'ನಾಡಿಗೆ ಗಂಡಾಂತರ' ವೆಂಬುದೇ ಬಂಡ ವಾಳಗಾರಿಕೆಯ ಬಲವಾದ ರಕ್ಷಾಕವಚ. ಇದಕ್ಕೆ ಇಂಗ್ಲೆಂಡಿನ ಗ್ರಾಡ್‌ಸ್ಟನ್ನರ ಮಹಾಚುನಾವಣೆಯೇ ದೊಡ್ಡ ಸಾಕ್ಷಿ.

ಸಾಮ್ಯವಾದವೇ ಸದ್ಯದ ಸಾಮಾಜಿಕ ಸಮಸ್ಯೆಗಳ ಒಂದೇ ಒಂದಾದ ಮತ್ತು ಅನಿವಾರ್ಯವಾದ ಪರಿಹಾರೋಪಾಯವೆಂದು ಈ ಮುಂಚಿನ ಅಧ್ಯಾಯ ಗಳಲ್ಲಿ ಸ್ಪಷ್ಟಪಡಿಸಿರುವೆನು. ಅದಲ್ಲದೆ, ರಾಷ್ಟ್ರದ ಮೇಲೆ ಪೂರ್ಣ ಅಧಿ ಕಾರವು ಪ್ರಾಪ್ತವಾಗದೆ, ಸಾಮಾಜಿಕ ಪುನರ್ಘಟನೆಯನ್ನು ಕೈಕೊಳ್ಳುವುದು ನಮಗೆ ಸಾಧ್ಯವಿಲ್ಲೆಂಬುದನ್ನೂ ಸೂಚಿಸಿದ್ದೇನೆ. ಆದುದರಿಂದ ಸ್ವರಾಜ್ಯ ವನ್ನು ಸಂಪಾದಿಸುವವರೆಗೆ ಸಮತಾವಾದದ ಪ್ರಸ್ತಾಪವನ್ನೆತ್ತುವುದು ನಿರರ್ಥಕ ವೆಂದು ಯಾರಾದರೂ ವಾದಿಸಬಹುದು. ಅದೇಕೆ, ಮೇಲ್ಕಂಡ ಪತ್ರಿಕೆಯ ಸಂಪಾದಕರಂತಹರು ಹೀಗೆ ಮಾಡುವುದು ನಿರರ್ಥಕವಷ್ಟೇ ಅಲ್ಲ ಖಂಡಿತ ವಾಗಿಯೂ ಕುಚೇಷ್ಟೆಯೆಂದು ಸಾರಿದ್ದಾರೆ. "ಸ್ವರಾಜ್ಯ ಸಾಧನೆಗೆ ಜನಾಂಗದ ಐಕ್ಯವು ಬೇಕು; ಆದರೆ ಸಾಮ್ಯವಾದವು ಆ ಒಕ್ಕಟ್ಟನ್ನೇ ಒಡೆಯುವುದು" ಎಂದು ಅವರ ಅಭಿಪ್ರಾಯ. ಆದುದರಿಂದ ಸಮಾಜವಾದದ ಚಟುವಟಿಕೆ ಗಳಿಂದ ಜನಾಂಗದ ಶಕ್ತಿ ಕುಗ್ಗುವುದೆಂದು ಅವರ ಆಲೋಚನೆ. ಈ ಭಾವ ನೆಯು ಬಹಳ ವಿಶಾಲವಾಗಿ ಹಬ್ಬಿರುವುದರಿಂದ ಇದನ್ನು ಲಕ್ಷ್ಯಪೂರ್ವಕವಾಗಿ ವಿಚಾರ ಮಾಡಬೇಕು.

## ಜನಾಂಗದ-ದೇಶದ-ಐಕ್ಯ

ಜನಾಂಗದ ಐಕ್ಯವೆಂದರೇನು? ಜನಾಂಗವೆಂದರೇನು? ಜನಾಂಗಭಾವ (Nationalism) ವೆಂದರೇನು?

ನಮ್ಮ ಜನಾಂಗದ ಚಾರಿತ್ರಿಕವಾದ ೧೮೫೭-೧೮೮೫ರ ಎರಡು ಪ್ರಸಿದ್ಧ ಸಂಗತಿಗಳ ತುಲನೆ ಮಾಡುವ. ಇವೆರಡು ಘಟನೆಗಳೂ ಬರಿಯ ಇಪ್ಪತ್ತೆಂಟು ವರ್ಷಗಳಲ್ಲಿಯೇ ನೆರವೇರಿದವು. ಆದರೂ ಅವುಗಳಿಂದ ಜನಾಂಗಭಾವದ ಧೋರಣೆಯಲ್ಲಿ ವಿಲಕ್ಷಣ ವ್ಯತ್ಯಾಸಗಳು ಘಟಿಸಿದುವು. ಆದರೆ ೧೮೫೭ರಲ್ಲಿ

ಇಂದಿನ ಸುಶಿಕ್ಷಿತರು, ಇಂತಹ ಒಕ್ಕಲಿಗರು ತಮ್ಮೊಡನೆ ಈ ಪವಿತ್ರಭೂಮಿ–ಸ್ವರಾಜ್ಯಗಳಿಗಾಗಿ ಒಂದಾಗಿ ಹೆಗಲಿಗೆ ಹೆಗಲು ಹಚ್ಚಿ ಕಾದಾಡಬೇಕೆಂದು ಕೋರುವುದೂ ಒಂದು ಹುಡುಗಾಟಿಕೆಯೇ ಅಲ್ಲವೇ ?

ಅಂತೂ ನಮಗೆ ಒಂದು ಸಂಗತಿಯು ಸರಿಯಾದ ಕಲ್ಪನೆಯಾಯಿತು. ‘ ಜನಾಂಗ’ವೆಂದರೆ ನಿಜವಾಗಿ ಇಡಿಯ ಜನಾಂಗವಲ್ಲ. ಮತ್ತು ‘ ಜನಾಂಗ ಭಾವ’ದಲ್ಲಿ ದೇಶದ ಎಲ್ಲ ವರ್ಗಗಳ, ಎಲ್ಲ ಪಂಗಡಗಳ ಹಿತಸಂಬಂಧಗಳೆಲ್ಲ ಸೇರಿರುವುದೂ ಇಲ್ಲ. ಬೇರೆ ಬೇರೆ ಸಮಯದಲ್ಲಿ ಬೇರೆ ಬೇರೆ ವರ್ಗದವರು “ ಜನಾಂಗ ” ದ ರಚನೆಗೆ ಕಾರಣರಾಗಿ ಜನಾಂಗಭಾವವನ್ನು ವ್ಯಕ್ತಗೊಳಿಸುವರು. ಯಾವ ಕಾಲಕ್ಕೆ ಯಾವ ಪಂಗಡದವರು ಅಥವಾ ವರ್ಗದವರು ಜನಾಂಗಭಾವವನ್ನು ತೋರುವರೆಂಬುದು ಆಯಾ ಕಾಲದ ಇತಿಹಾಸದ ಪರಿಸ್ಥಿತಿ ಮತ್ತು ಸಾಮಾಜಿಕ ಘಟನೆ ಇವುಗಳನ್ನವಲಂಬಿಸಿದೆ. ಒಂದು ಕಾಲದ ಜನಾಂಗಹಿತವೆಂಬುದು ಆಗಿನ ಜನತೆಯ ಬಹುಸಂಖ್ಯಾಕರ ನಿಜವಾದ ಹಿತಸಂಬಂಧಗಳನ್ನೊಳಗೊಂಡು ಇರಲೇಬೇಕಾಗಿಲ್ಲ. ಒಮ್ಮೊಮ್ಮೆ ಅವಕ್ಕೆ ತೀರ ವಿರುದ್ಧವಾಗಿಯೂ ಇರಬಹುದು. ಗ್ರೇಟ್ ಬ್ರಿಟನ್ನಿನಲ್ಲಿ ೧೯೩೧ರ ಮಹಾ ಚುನಾವಣೆಗಳ ಸಮಯದಲ್ಲಿ ‘ ನಾಡಿಗೆ ಗಂಡಾಂತರ ’ ಎಂಬ ಕೂಗನ್ನೆಬ್ಬಿಸಿದಾಗ ಬ್ರಿಟಿಶ್ ಬಂಡವಾಳಗಾರರು ಒಂದು ಬಲೆಯನ್ನೇ ಬೀಸಿದ್ದರು. ಬ್ರಿಟಿಶ್ ಬಂಡವಾಳಗಾರಿಕೆ ನಿಜವಾಗಿ ಅಲ್ಲಿಯ ಕೆಳಗಿನ ತರಗತಿಯ ಜನತೆಯ ಆರ್ಥಿಕ ಬಂಧನವನ್ನೂ ಅಪಹಾರವನ್ನೂ ಎಡೆಬಿಡದೆ ನಡೆಸಿರುವುದು. ತಮ್ಮ ಕುತಂತ್ರವು ಹಿಡಿತಡೆಯಿಲ್ಲದೆ ಸಾಗುವಂತೆ ಜನರ ಅನುಕೂಲ ಮತವನ್ನು ಕೊಡಬೇಕೆಂದೆ, ಈ ಕೂಗನ್ನೆಬ್ಬಿಸಿ ಅವರನ್ನು ವಂಚಿಸುವುದು. ಆದುದರಿಂದ ಜನಾಂಗವೆಂಬ ಕಲ್ಪನೆಯಲ್ಲಿ ಇಡೀ ನಾಡಿನ ಬಾಳೆಲ್ಲ ಬಂತೆಂದು ತಿಳಿಯುವುದು ತಪ್ಪು. ಹಾಗೆ ಮಾಡಿದರೆ ಯಾವುದಾದರೊಂದು ಪ್ರಬಲ ವರ್ಗದವರ ಪ್ರಚಾರಕ್ಕೆ ನಾವು ಎಡೆಕೊಟ್ಟು ಬಲಿಯಾದೆವೆಂದು ಭಾವಿಸಬೇಕು.

ಭಾರತದ ಜನಾಂಗವೆಂಬುದು ರಾಜರು, ಉದ್ಯಮ ಪ್ರಭುಗಳು, ಬುದ್ಧಿವೃತ್ತಿಯವರು, ವರ್ತಕರು, ಒಕ್ಕಲಿಗರು, ಕೂಲಿಯಾಳುಗಳು ಮುಂತಾದವರಿಂದ ಕೂಡಿದೆ. ಇವೆಲ್ಲ ವರ್ಗಗಳ ಜನಾಂಗಭಾವವೂ ಒಂದೇ ಬಗೆಯಾಗಿಲ್ಲ. ಒಂದಕ್ಕೆ ಸ್ವಾತಂತ್ರ್ಯವೆಂದು ತೋರಿದುದು ಇನ್ನೊಂದಕ್ಕೆ

ತೋರದು. ಅದಲ್ಲದೆ ಎಲ್ಲ ವರ್ಗಗಳೂ ಸ್ವಾತಂತ್ರ್ಯಸಂಗ್ರಾಮವನ್ನು ಒಂದೇ ರೀತಿಯಲ್ಲಿ ಮಾಡಲಾರವು.

ರಾಜರ ವಿಷಯವನ್ನು ತೆಗೆದುಕೊಳ್ಳುವಾ. ಅವರ ಮಟ್ಟಿಗೆ ಸ್ವಾತಂತ್ರ್ಯವೆಂದರೆ ತಮ್ಮ ರಾಜ್ಯದ ಪೂರ್ಣಾಧಿಕಾರ. ಈ ಪೂರ್ಣಾಧಿಕಾರವನ್ನು ಕಾಳಗದ ಕಣದ ಮೇಲೆಯೇ ಗೆದ್ದುಕೊಳ್ಳಬೇಕು. ಆದರೆ ೧೮೫೭ರ ನಂತರ ಇದಕ್ಕಾಗಿ ರಣರಂಗಕ್ಕೆ ಹೋಗುವ ಯೋಗ್ಯತೆಯು ಯಾವ ಅರಸನಲ್ಲಿದೆ? ಹಿಂದುಸ್ಥಾನದ ಅರಸರೆಲ್ಲರೂ (ಸಂಸ್ಥಾನಗಳ ಒಡೆಯರು) ಬ್ರಿಟಿಶ್ ಸಾಮ್ರಾಜ್ಯವದ ಮಾಂಡಲಿಕರಾಗಿಯೇ ಯಾವಾಗಲೂ ಉಳಿಯಬೇಕೆಂಬುದು ಒತದು ಕಾಣುತ್ತದೆ. ಈ ಸಾಮ್ರಾಜ್ಯವಕ್ಕೆ ವಿರೋಧವಾಗುವ ಬಗೆಯಲ್ಲಿ ನಮ್ಮ ರಾಜರುಗಳು ಸ್ವಾತಂತ್ರ್ಯಸಂಗ್ರಾಮದಲ್ಲಿ ಎಂದೂ ಸೇರುವುದಿಲ್ಲ. ಅವರು ಸಹಜವಾಗಿಯೇ ಇದರಿಂದ ದೂರ ಉಳಿದು ಇದನ್ನು ಆದಷ್ಟು ವಿರೋಧಿಸುವವರೇ ಸರಿ. ಜನಾಂಗದ ಒಕ್ಕಟ್ಟಿನಲ್ಲಿ ಇದೊಂದು ಬಿರುಕು.

ಹಿಂದುಸ್ಥಾನದ ಜಮೀನುದಾರರೆಲ್ಲ ಬ್ರಿಟಿಶ್ ಸಾಮ್ರಾಜ್ಯದ ಕೈಗೂಸುಗಳೆಂಬುದು ಎಲ್ಲರಿಗೂ ಗೊತ್ತಿದ್ದ ಸಂಗತಿ. ದೊಡ್ಡ ದೊಡ್ಡ ವರ್ಗದಾರರೆಲ್ಲ ಗಟ್ಟಿಯಾಗಿ ಸಾಮ್ರಾಜ್ಯಶಾಹಿಯ ಬೆನ್ನಿಗೆ ನಿಂತು, ಹಳ್ಳಿಗಳಲ್ಲೆಲ್ಲ ಅದರ ಭದ್ರವಾದ ಬೆಂಬಲವಾಗಿದ್ದಾರೆ. ಇವರಿಗೆ ಜನಾಂಗಭಾವದ ಅರ್ಥವೇ ಆಗುವುದಿಲ್ಲ. ಸರಕಾರದ ಹಿರಿಯ ಅಧಿಕಾರದ ಸ್ಥಾನಗಳು ನಮಗೆ ಸಿಕ್ಕರೆ ಆಗಬಹುದೆಂಬುದೇ ಅವರಿಗೆ ಜನಾಂಗಭಾವದಿಂದಾಗುವ ಒಂದೇ ಒಂದು ಅರ್ಥ. ಜನಾಂಗಬಲದ ಪ್ರಭಾವದಿಂದ ಭಾರತೀಯರಿಗೆ ಏನಾದರೂ ರಾಜಕೀಯ ಅಧಿಕಾರವು ದೊರೆಯುವ ಸಂಭವವಿದ್ದರೆ ಅಲ್ಲಿ ಮಾತ್ರ ತಮ್ಮದೇ ಪ್ರಾಬಲ್ಯವಿರಬೇಕು. ಸ್ವತಃ ಸಾಮ್ರಾಜ್ಯಶಾಹಿಯನ್ನೇ ದೂರಿಸುವುದಾಗಲಿ ಅದರ ವಿರುದ್ಧ ಚಳವಳವನ್ನು ಹೂಡುವುದಾಗಲಿ ಅವರಿಗೆ ಸೇರುವುದಿಲ್ಲ. ಹಿಂದುಸ್ಥಾನದ ಪರಕ್ಕೆ ರಾಜಕೀಯ ಅಧಿಕಾರಗಳು ಬರುವ ಸಂದರ್ಭದಲ್ಲಿ ತಮ್ಮ ಹಿತಸಂಬಂಧಗಳಿಗೆ ಬಾಧೆ ಬರಬಾರದೆಂದೇ ಅವರು ರಾಜಕಾರಣದಲ್ಲಿ ಪ್ರವೇಶಿಸಿದ್ದಾರೆ. ಸ್ವಲ್ಪವಾದರೂ ರಾಜಕೀಯ ಸಂಗತಿಗಳ ಜ್ಞಾನಾನುಭವವುಳ್ಳವರು. ಈ ವರ್ಗದವರೊಡನೆ ಒಕ್ಕಟ್ಟು ಎಂಬ ಮಾತನ್ನೆತ್ತುವುದಿಲ್ಲ. ಜನಾಂಗದ ಒಕ್ಕಟ್ಟಿನಲ್ಲಿ ಇದು ಎರಡನೆಯ ಬಿರುಕು.

ಇನ್ನು ಉದ್ಯಮಪೇರರ ವಿಚಾರ. ದೇಶದ ಜನಧನದ ಸಂಪತ್ತನ್ನೆಲ್ಲ ಸುಲಿಯಲು ಮತ್ತು ತಮ್ಮ ಧನಬಲವನ್ನು ಬೆಳೆಸಲು ಪೂರ್ಣಾವಕಾಶ ದೊರೆಯಬೇಕೆಂಬುದೇ ಇವರ ಹಂಬಲ. ಜನಾಂಗಭಾವದಿಂದ ಇವರಿಗಾಗುವ ಅರ್ಥವೂ ಇದೇ. ಮೇಲೆ ಮಾತ್ರ ದೇಶದ ಆರ್ಥಿಕೋನ್ನತಿಯು ನಿತ್ಯಧ್ಯಾನ. ಇದನ್ನೆಲ್ಲ ಸಾಧಿಸಲು ರಾಷ್ಟ್ರದ ಬಹುಮಟ್ಟಿನ ನಿಯಂತ್ರಣ ಇವರ ಕೈಯಲ್ಲಿರಬೇಕು. ಬರಬರುತ್ತ ಸರ್ವ ಸೂತ್ರಗಳೂ ಇವರ ವಶಕ್ಕೆ ಹೋಗಬೇಕು. ಒಮ್ಮೆಲೇ ಪೂರ್ಣಾಧಿಕಾರವು ಪ್ರಾಪ್ತವಾದರೆ ಇವರಿಗೆ ಹೆಚ್ಚು ಹಿಗ್ಗೆಂಬುದರಲ್ಲಿ ಸಂದೇಹವಿಲ್ಲ. ಆದರೆ ಪೂರ್ಣಾಧಿಕಾರವನ್ನು ಒಮ್ಮೆಲೇ ಪಡೆಯುವುದು ಗಂಡಾಂತರದ ಕೆಲಸವಾದುದರಿಂದ, ಅಧಿಕಾರವೆಲ್ಲ ಹಿಡಿಹಿಡಿಯಾಗಿ ತಮ್ಮ ಕೈಗೆ ಬಂದರೂ ಇವರಿಗೆ ತೃಪ್ತಿ. ಸುಧಾರಣೆಗಳಿಂದಲೇ ಇವರಿಗೆ ಸಮಾಧಾನವಾಗಬಲ್ಲದು.

ಭಾರತೀಯ ಔದ್ಯೋಗಿಕ ವರ್ಗವು ಬ್ರಿಟಿಶ್ ಸಾಮ್ರಾಜ್ಯದ ಕಂಕುಳ ಕೂಸು. ರಾಜಕೀಯ ಆರ್ಥಿಕ ವಿಷಯಗಳಲ್ಲಿ ಅದು ಸಂಪೂರ್ಣವಾಗಿ ಸಾಮ್ರಾಜ್ಯವಾದದ ತೊತ್ತಾಗಿದೆ. ಐರ್ಲಂಡಿನ ಉದ್ಯಮಪ್ರಭುಗಳಿಗೆ ಅಮೇರಿಕೆಯಲ್ಲಿ ಬೆಂಬಲವಿದ್ದಂತೆ ಇವರಿಗೆ ವಿದೇಶಗಳಲ್ಲಿ ಎಲ್ಲಿಯೂ ಆಧಾರವಿಲ್ಲ. ಜನರಲ್ಲಿ ಹುರುಪು ಹುಟ್ಟಿ ಔದ್ಯೋಗಿಕ ವರ್ಗಕ್ಕೆ ಬೆಂಬಲ ಸಿಕ್ಕುವಂತೆ ಇವರ ಏಳ್ಗೆಯಿಂದ ಪ್ರಜೆಗಳಿಗೆ ಪ್ರಯೋಜನವಾಗಿಲ್ಲ; ನಾಡಿನ ಆರ್ಥಿಕ ಮತ್ತು ಸಾಂಸ್ಕೃತಿಕ ಜೀವನದಮೇಲೆ ಇವರ ಪ್ರಭಾವವೂ ಬಿದ್ದಿಲ್ಲ. ಆದುದರಿಂದ ಈ ವರ್ಗವು ಸಾಮ್ರಾಜ್ಯವಾದವನ್ನೆದುರಿಸುವುದು ಸಾಧ್ಯವಿಲ್ಲ. ಬಹಳವಾದರೆ ಇವರು ಅದಕ್ಕೆ ಒತ್ತಾಯದ ಚಿನ್ಹವನ್ನು ಮಾಡಬಲ್ಲರು. ಆದರೆ ತಮ್ಮ ವರ್ಗದ ಸಂಘಟನೆಯಿಂದ ಈ ಒತ್ತಾಯವನ್ನು ಮಾಡಲು ಇವರಿಂದಾಗುವುದಿಲ್ಲ. ಸಾಮ್ರಾಜ್ಯವಾದವನ್ನು ಒತ್ತಾಯಪಡಿಸಬೇಕಾದರೆ ಇವರು, ತಮಗಿಂತಲೂ ಹಾನಿಯ ಸಂಭವವು ಕಡಿಮೆ ಇರುವವರಿಗೆ ಮರೆಯಲ್ಲಿ ನಿಂತು ನೆರವಾಗಿ ಅವರು ಅವರ ಓದುವ ಚಳವಳವನ್ನು ಹೂಡುವಂತೆ ಪ್ರೋತ್ಸಾಹಿಸಬಲ್ಲರು. ಒಟ್ಟಿನ ಮೇಲೆ ಪರ್ಯಾಯದಿಂದ ಹೀಗೆ ಮಾಡಬಲ್ಲರೇ ಹೊರತು ನೇರವಾಗಿ ಅಲ್ಲ. ಆದರಲ್ಲಿಯೂ ಒತ್ತಾಯಪಡಿಸುವುದರಿಂದ ತಮಗೇನಾದರೂ ಅಧಿಕಾರ ಪ್ರಾಪ್ತಿಯಾಗುವ ಯೋಗವಿಲ್ಲದಿದ್ದರೆ ಅಷ್ಟು ಕಷ್ಟವನ್ನು ಕೂಡ ಪಡುವುದಿಲ್ಲ.

ಔದ್ಯೋಗಿಕ ವರ್ಗದ ವಶಕ್ಕೆ ರಾಷ್ಟ್ರದ ಅಧಿಕಾರವು ಬರಬೇಕೆಂಬುದು ಜನಾಂಗವಾದದ ಗುರಿಯಾಗಿರುವವರಿಗೆ ಇವರೂ ಜನಾಂಗವಾದಿಗಳೇ (Nationalists). ತಮ್ಮ ವರ್ಗದ ಹಿತಸಂಬಂಧಗಳಿಗೆ ಹೊರತಾದ ಉದ್ದೇಶವಿರುವ ಜನಾಂಗವಾದದಲ್ಲಿ ಇವರಿಗೆ ಅಭಿರುಚಿಯಿಲ್ಲ.

ಎಂದಬಳಿಕ ಒಂದನೆಯದಾಗಿ ಭಾರತೀಯ ಔದ್ಯೋಗಿಕ ವರ್ಗದವರು ಸ್ವತಃ ಸಾಮ್ರಾಜ್ಯವಾದವನ್ನು ಮುಲೆತು ನೋಡಲಾರರು. ಎರಡನೆಯದಾಗಿ ತಮ್ಮ ಆರ್ಥಿಕೋನ್ನತಿಗೆ ತಕ್ಕ ಅನುಕೂಲತೆಗಳು ಸಿಕ್ಕರೆ ಇವರಿಗೆ ಸಮಾಧಾನ ವಾಗುವುದು. ತಮಗೆ ಅಧಿಕಾರಸ್ಥಾನದಲ್ಲಿ ಮಂಡಿಸುವ ಜನಾಂಗವಾದ ವನ್ನಷ್ಟೇ ಇವರು ಎತ್ತಿ ಹಿಡಿಯುವರು. ಇದುವೇ ಜನಾಂಗದ ಒಕ್ಕಟ್ಟಿನ ಕೋಟೆಯ ಮೂರನೆಯ ಬಿರುಕು.

ಇನ್ನು ಒಕ್ಕಲಿಗರ ಸಮಾಚಾರವೇನು? ಭಾರತವು ಒಕ್ಕಲಿಗರ ನಾಡು. ಇವರ ಬಿಡುಗಡೆಯ ಹೊರತು ಇಲ್ಲಿಯ ಜನಾಂಗವಾದಕ್ಕೆ ಅರ್ಥವೇ ಇಲ್ಲ. ಹಾಗಾದರೆ ಈ ಬಿಡುಗಡೆ ಎಂತಹುದು? ಬೇರೆ ಸಂಗತಿಗಳು ಹೇಗಾದರೂ ಇರಲಿ. ಇವರನ್ನು ಬಿಳಿಯರಾಗಲಿ ಕಪ್ಪು ಜನರಾಗಲಿ ಸುಲಿಯದಂತೆ ಮಾಡುವುದೇ ಈ ಬಿಡುಗಡೆಯ ಅರ್ಥ. ಅವಲ್ಲದೆ ಒಕ್ಕಲಿಗರಿಗೆ, ತಮ್ಮ ಹಿತಸಂಬಂಧಗಳು ಸುರಕ್ಷಿತವಾಗುವಂತೆ ದೇಶದ ಆರ್ಥಿಕ-ರಾಜಕೀಯ ಧೋರಣಗಳನ್ನು ನಿರ್ಣಯಿಸುವ ಅವಕಾಶವು ಸಿಕ್ಕಬೇಕು. ಒಟ್ಟಿನ ಮೇಲೆ ಅದು ಒಕ್ಕಲಿಗರ ರಾಜ್ಯವಾಗಬೇಕು.

ಇದನ್ನು ಸಾಧಿಸಲು ಒಕ್ಕಲಿಗರಿಗೆ ಯಾವಾಗಲೂ ಒಂದೇ ಮಾರ್ಗವು ತೋರಿಬರುತ್ತದೆ. ಅವರು ಮುಚ್ಚುಮರೆಯಿಲ್ಲದೆ ನೇರವಾದ ಕಾರ್ಯವನ್ನು ಮಾಡುವರು. ಅವರಲ್ಲಿ ತಮ್ಮ ಅಧಿಕಾರಗಳ ಅರಿವು ಹುಟ್ಟುವುದೊಂದೇ ತಡ; ಬಾಣ ಬಿಟ್ಟ ಹಾಗೆ ಗುರಿಯ ಕಡೆಗೆ ಸಾಗುವರು. ಇದರಿಂದ ದಬ್ಬಾಳಿಕೆ ನಡೆಸುವ ಪರಕೀಯರಂತೆ ಸ್ವಕೀಯರಿಗೂ ತುಂಬ ಅಪಾಯವಾಗುವುದು. ಆದುದರಿಂದ ಈ ಒಕ್ಕಲಿಗರಲ್ಲಿ ತಮ್ಮ ಹಕ್ಕುಗಳ ಬಗೆಗೆ ಜಾಗೃತಿಯಾಗಬಾರ ದೆಂದೇ ಸ್ವಕೀಯರು ಬಯಸುವರು. ಇದರ ಅರ್ಥವಿಷ್ಟೇ. ಒಕ್ಕಲಿಗರು ಜಾಗೃತರಾದರೆ ಜನಾಂಗದ ಒಕ್ಕಟ್ಟು ಮುರಿಯುವುದು ಖಂಡಿತ. ಇದು ಒಕ್ಕಟ್ಟಿಗಿರುವ ಇನ್ನೊಂದು ಕುತ್ತು.

ಇದರಂತೆಯೇ ಕೂಲಿಕಾರರ ಸಂಗತಿ. ಅವುಗಳ ಬಿಡುಗಡೆಯೆಂದರೆ, ಅವರನ್ನು ಕೂಲಿಯ ಜೀತದಾಳುಗಳಾಗಿರುವ ಪರಿಸ್ಥಿತಿಯಿಂದ ಬಿಡಿಸುವುದು. ಉತ್ಪಾದನ ಸಾಧನಗಳ ಸಾಮಾಜಿಕ ಒಡೆತನವೇ ಇದಕ್ಕೆ ತಕ್ಕ ಉಪಾಯ. ಒಮ್ಮೆ ಜಾಗ್ರತರಾದರೆಂದರೆ ಇವರು ಕೂಡ ಒಕ್ಕಲಿಗರಂತೆ ಬೇಡಿಕೆಯನ್ನು ಬಿಸುಟು ನೇರವಾಗಿ ವೀರ್ಯವತ್ತಾದ ಕಾರ್ಯವನ್ನೇ ಕೈಕೊಳ್ಳುವರು. ಆದುದರಿಂದ ಜನಾಂಗದ ಒಕ್ಕಟ್ಟು ಉಳಿಯಬೇಕಾದರೆ ಈ ವರ್ಗದವರೂ ಜಾಗ್ರತರಾಗಕೂಡದು. ಜನಾಂಗದ ಐಕ್ಯಕ್ಕೆ ಇದೊಂದು ಪೀಡೆ.

ಒಕ್ಕಟ್ಟಿನ ಮೇಲೆ ಈವರೆಗೆ ಮಾಡಿದ ವಿವೇಚನೆಯಿಂದ ಒಂದು ಮಾತು ಸ್ಪಷ್ಟವಾಯಿತೆಂದು ನನ್ನ ನಂಬುಗೆ. ಸಾಮ್ರಾಜ್ಯವಾದಿಗಳು ಮುರಿದು ಮಣ್ಣುಗೂಡಿಸಬಹುದಾದ ಜನಾಂಗದ ಐಕ್ಯವೆಂಬ ವಸ್ತು ನಮ್ಮ ನಾಡಿನಲ್ಲಿ ಇಲ್ಲವೇ ಇಲ್ಲ. ಒಂದು ವೇಳೆ ಅಂತಹ ಐಕ್ಯವೊಂದು ನಿಜವಾಗಿಯೂ ಇದ್ದರೆ ಸಾಮ್ರಾಜ್ಯವಾದಿಗಳನ್ನು ದೂರಬಹುದಿತ್ತು. ದೇಶದೊಳಗಿನ ಎಲ್ಲ ವರ್ಗಗಳಿಗೂ ಜನಾಂಗವಾದವೆಂದರೆ ಒಂದೇ ಅರ್ಥವಾಗುವುದಿಲ್ಲ. "ವಿದೇಶೀಯ ಪ್ರಭುತ್ವವನ್ನು ಹಾರಿಹೊಡೆಯಬೇಕು" ಎಂಬ ಮಾತನ್ನು ಆಡಿ ತೋರಿಸುವಷ್ಟು ಸುಲಭವಾಗಿಯೂ ಹಗುರಾಗಿಯೂ ಈ ಒಕ್ಕಟ್ಟಿನ ವಿಷಯವನ್ನು ಸ್ಪಷ್ಟಪಡಿಸಲಾಗದು. ಕೆಲವು ವರ್ಗಗಳಿಗಂತೂ ಈ ವಿದೇಶೀಯ ಪ್ರಭುತ್ವವು ಬೇಕೇ ಬೇಕು. ಅವರ ಸ್ವಭಾವವೇ ಅಂತಹದು. ಈ ಪರಕೀಯ ಪ್ರಭುತ್ವವನ್ನು ಪ್ರತಿಭಟಿಸಬೇಕೆಂದು ಬಯಸುವ ಕೆಲವು ವರ್ಗಗಳು ಹಾಗೆ ಮಾಡಲಾರವು. ವಿರೋಧಿಸುವ ಸಾಮರ್ಥ್ಯವುಳ್ಳವರ ಮೂಲ ಹಿತಸಂಬಂಧಗಳು ಮೊದಲಿನವರ ಹಿತಸಂಬಂಧಗಳಿಗೆ ತೀರ ವಿರುದ್ಧವಾಗಿವೆ.

ಈವರೆಗಿನ ವಿವೇಚನೆಯಿಂದ ಇನ್ನೊಂದು ಮಾತು ಎದ್ದು ತೋರುವುದು. 'ಹಿಂದುಸ್ಥಾನ ಟೈಮ್ಸ್' ಪತ್ರಿಕೆಯು ಹೇಳುವ "ಜನಾಂಗದ ಐಕ್ಯ" ಎಂಬ ಮಾತಿಗೆ ನಿಜವಾಗಿ ಒಂದೇ ಅರ್ಥ. ಕೆಳಗಿನ ವರ್ಗದವರು (ಒಕ್ಕಲಿಗರು—ಕೂಲಿಕಾರರು) ಸಾಮ್ರಾಜ್ಯವಾದದೊಡನೆ ಹೋರಾಡಬೇಕು. ಏತಕ್ಕೆ? ಸುಲಿಗೆಯಿಂದ ತಮ್ಮ ಬಿಡುಗಡೆಯನ್ನು ಮಾಡಿಕೊಳ್ಳಲಿಕ್ಕಲ್ಲ. ಆದರೆ ಈ ಹೋರಾಟದಲ್ಲಿ ದೂರದಿಂದ ಕೂಡ ಪಾಲುಗೊಳ್ಳದ ದೊಡ್ಡ ದೊಡ್ಡ ಜಮೀನುದಾರರನ್ನು ಮತ್ತು ಔದ್ಯೋಗಿಕ ವರ್ಗದ ಧನಿಕರನ್ನು

ಸಾಮ್ರಾಜ್ಯವಾದದ ಬದಲು ಅಧಿಕಾರಸ್ಥಾನದಲ್ಲಿ ಮಂಡಿಸಲಿಕ್ಕೆ. ಈ ಬಗೆಯ ಒಕ್ಕಟ್ಟನ್ನು ಕಾಪಾಡಿಕೊಳ್ಳಬೇಕಾದರೆ ಜನಸಾಮಾನ್ಯರಲ್ಲಿ ಜಾಗೃತಿಯಾಗದಂತೆ ಎಚ್ಚರಪಡಬೇಕು.

ಈ ಐಕ್ಯತಾನಕ್ಕೆ ಇನ್ನೊಂದು ಮುಖವೂ ಇದೆಯೆಂಬುದನ್ನು ನಾನು ಬಲ್ಲೆ. ಈ ಒಕ್ಕಟ್ಟನ್ನು ಜನಸಾಮಾನ್ಯರ ಹಿತದೃಷ್ಟಿಯಿಂದಲೇ ಕಾಪಾಡಿಕೊಳ್ಳಬೇಕೆಂದು ಹೇಳುವವರಿದ್ದಾರೆ. ಮುಂದಿನ ಭಾಗದಲ್ಲಿ ಇದನ್ನು ಚರ್ಚಿಸೋಣ. ಈ "ಜನಾಂಗದ ಐಕ್ಯ"ವೆಂಬುದು ವಂಚನೆಯಿಂದಲೂ ಇಂದ್ರಜಾಲದಿಂದಲೂ ತುಂಬಿದೆಯೆಂಬುದನ್ನಷ್ಟೇ ಇಲ್ಲಿ ತಿಳಿದುಕೊಂಡರೆ ಸಾಕು.

ಅಧಿಕಾರ-ತಂತ್ರಗಳ ಬಗೆಗೆ ಜನಸಾಮಾನ್ಯರು ಜಾಗೃತರಾಗದಿರುವುದು ಆದರ್ಶದ ದೃಷ್ಟಿಯಿಂದ ಅನುಕೂಲವಾದುದೇ ಎಂಬುದು ವಾದಗ್ರಸ್ತ ವಿಷಯವೆಂದು ಈ ಹೊಸಬರು ಹೇಳಿದ್ದಾರೆ. ಸಾಮ್ರಾಜ್ಯವಾದವನ್ನು ನಾಶಮಾಡಿ ಧನಿಕವರ್ಗದವರನ್ನು ಸಿಂಹಾಸನಕ್ಕೇರಿಸುವುದು ಯೋಗ್ಯವೇ? ಸಾಮಾನ್ಯ ಜನತೆಯೂ ಬಂಡವಾಳಗಾರರೂ ಒಂದಾಗಿ ಹೋರಾಡಿದರೆ ಸಾಮ್ರಾಜ್ಯವಾದವು ಖಂಡಿತವಾಗಿ ಬೇಗನೆ ಕಾಲ್ತೆಗೆಯುವುದೆಂಬ ಸಿದ್ಧಾಂತಪುಷ್ಟರ ಹೊಸ ಅಭಿಪ್ರಾಯಕ್ಕೆ ಸ್ವಲ್ಪ ಬೆಲೆ ಕೊಡಬಹುದು. ಇಲ್ಲಿ ಇನ್ನೊಂದು ಪ್ರಶ್ನೆಯು ಉದ್ಭೂತವಾಗುತ್ತದೆ. "ಬಂಡವಾಳಗಾರರೊಡನೆ ತಾವು ಸೇರಿ ಹಗಲಿಗೆ ಹಗಲು ಹೆಚ್ಚು ಹೋರಾಡಿದ್ದರಿಂದಲೇ ಸಾಮ್ರಾಜ್ಯವಾದವು ಸೋಲು ತಿಂದು ಧನಿಕವರ್ಗದವರ ದೌಲತ್ತು ಪ್ರಾರಂಭವಾಯಿತು. ಆದುದರಿಂದ ತಾವು ಈ ಧನಿಕವರ್ಗದವರಿಂದ ಪ್ರತಿಷ್ಠಿತವಾದ ಪ್ರಜಾಸತ್ತಾತ್ಮಕ ಪದ್ಧತಿಯನ್ನು ಬೇಕಾದರೆ ಕಿತ್ತೊಗೆದು ತಮ್ಮ ಕೈಯಲ್ಲಿ ರಾಜ್ಯಾಧಿಕಾರವನ್ನು ತೆಗೆದುಕೊಳ್ಳುವುದು ಸರಿಯಲ್ಲವೇ?" ಎಂದು ಜನಸಾಮಾನ್ಯರು ಕೇಳಬಹುದು. "ಈಗ ಬೇಕಾದರೆ ಜನಸಾಮಾನ್ಯರು ಈ ಬಂಡವಾಳಗಾರರ ವಿರುದ್ಧ ಇನ್ನೊಂದು ಬಂಡಾಯವನ್ನೆಬ್ಬಿಸಬಹುದು. ಆದರೆ ಈಗ ಜನಾಂಗದ ಐಕ್ಯವನ್ನು ಭಂಗಪಡಿಸುವುದಕ್ಕಿಂತ ಒಕ್ಕಟ್ಟಿನಿಂದ ಮೊದಲು ಸಾಮ್ರಾಜ್ಯವಾದದೊಡನೆ ಹೋರಾಡುವುದು ಲೇಸಲ್ಲವೇ?" ಎಂದು ಸಾಮಾನ್ಯವಾಗಿ ಹಲವು ಕಾಂಗ್ರೆಸ್ ಕೆಲಸಗಾರರ ಅಭಿಪ್ರಾಯವಿರುವುದು ತೋರಿಬರುತ್ತದೆ. ಆದುದರಿಂದ ಈ ಬಗೆಗೆ ಇಲ್ಲಿ ಸಾರಾಸಾರ ವಿಚಾರವು ಅಗತ್ಯವಾಗಿದೆ.

ನಾನು ಸಾಮ್ಯವಾದಿ. ಆದರೂ ಮೇಲ್ಕಂಡ ಪರಿಣಾಮವು ಕೈಗೂಡುವುದಾದರೆ, ನಾನು ಅತ್ಯಂತ ಆನಂದದಿಂದ ಅದಕ್ಕಾಗಿ ದುಡಿಯುವೆನು ಆದರೆ ನನಗೆ ಒಂದು ಖಾತ್ರಿಯ ಗಟ್ಟಿಯಾದ ನಿರ್ಣಯವು ಬೇಕು. ಸಾಮ್ರಾಜ್ಯವಾದಿಯು ಸೋಲುತ್ತಿಂದು ಮರೆಯಾದೊಡನೆ ಬಂಡವಾಳಗಾರಿಕೆಯು ಸದ್ದು ಅಡಗುವಂತೆ ಅವರ ವಿರುದ್ಧ ಹೋರಾಟವನ್ನು ಮಾತ್ರ ಕೂಡಲೆ ಕೈಕೊಳ್ಳಬೇಕು. ಮೊದಲನೆಯ ಕ್ರಾಂತಿಯ ಹಿಂದಿನಿಂದಲೇ ಆದಷ್ಟು ಬೇಗನೆ ಎರಡನೆಯ ಕ್ರಾಂತಿಯನ್ನು ನಡೆಸಬೇಕು. ಹಿಂದುಸ್ಥಾನದಂತಹ ವಿಶಾಲವಾದ ಪ್ರದೇಶದಲ್ಲಿ ಸಾಮ್ರಾಜ್ಯವಾದದ ಪರಾಭವವಾಗುತ್ತದೆಂಬ ಮುನ್ನರಿಕೆ ನನ್ನನ್ನು ಖಂಡಿತವಾಗಿ ಕೆಲಸದಲ್ಲಿ ತೊಡಗಿಸಬಲ್ಲುದು. ಆದರೆ ಪರಿಸ್ಥಿತಿಯನ್ನು ನೋಡಿದರೆ ಈ ಯೋಜನೆ ಬರಿಯ ಬಂಜೆಯೆಂದು ತೋರುವುದು. ಇದರಿಂದ ಸಾಮ್ರಾಜ್ಯವಾದದೊಡನೆ ಒಂದರ ಮೇಲೊಂದು ಒಪ್ಪಂದವಾಗಬಹುದಲ್ಲದೆ ಅದರ ಸಂಪೂರ್ಣ ಸೋಲಾಗಲಾರದು.

ಪರಿಸ್ಥಿತಿಯೆಂದರೆ ಇಷ್ಟೇ. ಭಾರತೀಯ ಧನಿಕವರ್ಗವು ಸಾಮ್ರಾಜ್ಯವಾದವನ್ನೆದುರಿಸಲಾರದು. ಕ್ರಾಂತಿಯಲ್ಲಿ ಧುಮುಕುವ ಎದೆಗಾರಿಕೆಯು ಅದರಲ್ಲಿಲ್ಲ. ಏಕೆಂದರೆ, ಅವರು ಸಾಮ್ರಾಜ್ಯವಾದವನ್ನವಲಂಬಿಸಿ ಅದರೊಡನೆ ಹೆಚ್ಚಿನ ಸಂಬಂಧವನ್ನು ಬೆಳೆಸಿಕೊಂಡಿದ್ದಾರೆ. ಇದರಿಂದ ಅವರ ಕ್ರಾಂತಿಶಕ್ತಿಯಳಿದು ಸಾಮ್ರಾಜ್ಯವಾದದೊಡನೆ ಹೋರಾಡುವ ಬಲವೂ ಇಲ್ಲದಂತಾಗುವುದು. ಅವರಲ್ಲಿ ಒಂದು ಪಂಗಡದವರಂತೂ ಹೆಚ್ಚಿನ ಹಂಗಿನಲ್ಲಿದ್ದಾರೆ. ಅವರು ಸಾಮ್ರಾಜ್ಯವಾದವು ಅಚ್ಚಳಿಯದೆ ಉಳಿಯಲೆಂದು ಬಯಸುವರೇ ಹೊರತು ಅದರೊಡನೆ ಕಾದಾಡಲಾರರು. ಸಾಮ್ರಾಜ್ಯವಾದವು ನಿರಂತರ ಪಟ್ಟಭದ್ರವಾಗಿರಬೇಕೆಂದು ಮಧ್ಯಸ್ಥಿಕೆ ಮಾಡುವವರು ಅವರೇ. ಅದರ ದಲ್ಲಾಳಿಗಳೂ ಅವರೇ. ಇದಲ್ಲದೆ ಇನ್ನೊಂದು ಬಳಗವಿದೆ. ಇದರಲ್ಲಿ ಔದ್ಯೋಗಿಕ ವರ್ಗದವರೇ ಹೆಚ್ಚಾಗಿರುವರು. ಇವರ ಮನಸ್ಸಿನಲ್ಲಿ ಸಾಮ್ರಾಜ್ಯವಾದವು ಮಣ್ಣು ಮುಕ್ಕಿದರೆ ಆಗಬಹುದೆಂಬ ಬಲವಾದ ಅಪೇಕ್ಷೆಯಿದೆ. ಆದರೆ ಅದನ್ನು ಎದುರೆದುರು ವಿರೋಧಿಸುವ ಕೆಚ್ಚಿಲ್ಲ. ತೆರೆಯ ಮರೆಯಿಂದ ಸೂತ್ರಗಳನ್ನು ನಡೆಸುವುದಲ್ಲದೆ ಬಹಿರಂಗವಾಗಿ ಸೆಡ್ಡು ಹೊಡೆದು ನಿಲ್ಲಲಾರರು. ಇನ್ನು ವರ್ಗದಾರರಿಗೂ ಸಾಮ್ರಾಜ್ಯವಾದಕ್ಕೂ ಇರುವ ನಿಕಟಸಂಬಂಧವನ್ನೂ ಅವರು

ಸಾಮ್ರಾಜ್ಯವಾದಕ್ಕೆ ಅನುಕೂಲವಾಗುವಂತೆ ನಡೆಯುವರೆಂದೂ ನಾನು ಈ ಮುಂಚೆಯೇ ಹೇಳಿದ್ದೇನೆ.

ಭಾರತೀಯ ಬಂಡವಾಳಗಾರರ ಪರಿಸ್ಥಿತಿ ಹೀಗಿರುವುದರಿಂದ ಸಾಮಾನ್ಯ ಜನರೂ ಧನಿಕರೂ ಒಂದಾಗುವುದರಿಂದ ಅಂಥಾ ಆದಾಯವೂ ಆಗಲಾರದು. ಏಕೆಂಬುದನ್ನು ಹೇಳುವುದು ಕಷ್ಟವಲ್ಲ. ಒಂದನೆಯದಾಗಿ ಬಂಡವಾಳಗಾರರನ್ನು ಕೂಡುವುದರಿಂದ ಏನೂ ಪ್ರಯೋಜನವಿಲ್ಲ. ಬಂಡವಾಳಗಾರರು ಈ ಸ್ವಾತಂತ್ರ್ಯ ಹೋರಾಟಕ್ಕಾಗಿ ಹಣವನ್ನು ತೆರುವರೆಂಬುದು ಸುಳ್ಳು. ಅವರಿಂದ ದೊರೆಯುವ ನೆರವು ಅಷ್ಟಕ್ಕಷ್ಟೇ. ಬರಿಯ ತೋರಿಕೆಯ ಕಾದಾಟವಾದರೂ ಅವರಿಂದ ಹೆಚ್ಚಿನ ಉಪಯೋಗವಾಗುವುದಿಲ್ಲ. ಅವರನ್ನು ಕೂಡುವುದರಿಂದ ಪರಿಣಾಮವೂ ಇಲ್ಲವೆಂಬುದಕ್ಕೆ ಒಂದು ಉದಾಹರಣೆಯನ್ನು ಕೊಡುತ್ತೇನೆ. ಕಳೆದ ಸಲ ನಡೆದ ಸವಿನಯ ಶಾಸನಭಂಗ ಚಳವಳದಲ್ಲಿ ಆರ್ಥಿಕ ಬಹಿಷ್ಕಾರ—ವಿದೇಶೀ ಸರಕುಗಳ ಬಹಿಷ್ಕಾರ—ವೇ ಮುಖ್ಯಕಾರ್ಯಕ್ರಮವಾಗಿತ್ತು. ಈ ಕಾರ್ಯಕ್ರಮದ ಸ್ವಭಾವವನ್ನು ನಿರೀಕ್ಷಿಸಿದರೆ ಇದನ್ನು ನೆರವೇರಿಸಲು ಔದ್ಯೋಗಿಕ ವರ್ಗದ ಬಂಡವಾಳಗಾರರೇ ಸಮರ್ಥರೆಂದು ಕಂಡುಬರುತ್ತದೆ. ಆದರೆ ಬೆನ್ನುಮೂಳೆಯೇ ಇಲ್ಲದಿರುವ ಇಲ್ಲಿಯ ಬಂಡವಾಳಗಾರಿಕೆಯಿಂದ ಇದನ್ನು ಕೈಕೊಂಡು ಗೆಲವುಗಟ್ಟಿ ನಡೆಸುವುದಾಗಲಿಲ್ಲ. ತಿಳಿದೋ ತಿಳಿಯದೆಯೋ ಧನಿಕರೊಡನೆ ಸೇರಿ, ಧನಿಕರ ಸ್ವರಾಜ್ಯ ಸಂಪಾದನೆಗಾಗಿ ವಿದೇಶೀ ಸರಕುಗಳ ಅಂಗಡಿಗಳೆದುರು ನಿರೋಧನವನ್ನು-Picketing-ನಡೆಸಿ ಲೆಕ್ಕವಿಲ್ಲದಷ್ಟು ಬಡವರು ಸೆರೆಮನೆಗೆ ತೆರಳಿದರು. ವಸ್ತುಸ್ಥಿತಿ ಹೀಗಿರುತ್ತ ಈ ಧನಿಕವರ್ಗದಲ್ಲಿ ನಂಬುಗೆ ನಿಲ್ಲಲಾರದು. ಈ ಬಂಡವಾಳಗಾರರು ದೇಹವನ್ನು ದಣಿಸಿ ಬಡವರೊಡನೆ ಸೇರಿ ಗಂಡಾಂತರಗಳನ್ನೆದುರಿಸಿ ಸ್ವರಾಜ್ಯಕ್ಕಾಗಿ ಹೋರಾಡಲು ಹಿಂದೆಗೆಯುವರು. ಇವರಿಗೆ ಕಷ್ಟ ಬೇಡ. ಇಷ್ಟದಲ್ಲಿ ಮಾತ್ರ ಯಾರಿಗೂ ಲವಲೇಶವನ್ನಾದರೂ ಕೊಡಲು ಸಿದ್ಧರಿಲ್ಲ. ಇವರಿಗಾಗಿ ಇತರರು ಮೈನುಗ್ಗುಮಾಡಿಕೊಳ್ಳಬೇಕು. ಕಳೆದ ಆರ್ಥಿಕ ಬಹಿಷ್ಕಾರದಲ್ಲಿ ಇವರು ಬ್ರಿಟಿಶರ ಹಿತಸಂಬಂಧಗಳನ್ನು ನಿಷ್ಠೆಯಿಂದಲೂ ಬಹಿರಂಗವಾಗಿಯೂ ಬಹಿಷ್ಕರಿಸಿ ತಳ್ಳಿದ್ದರೆ ಹಿಂದುಸ್ಥಾನದ ಜನತೆಗೆ ಇವರಲ್ಲಿಯ ವಿಶ್ವಾಸವು ಇಮ್ಮಡಿಯಾಗುತ್ತಿತ್ತು. ಸಾಮ್ಯವಾದಿಗಳು ಏನೆಂದರೂ ಕಿವಿಗೊಡದಷ್ಟರ

ಮಟ್ಟಿಗೆ ಸಂಬುಗೆ ಮುಟ್ಟುತ್ತಿತ್ತು. ಜನಾಂಗವೆಲ್ಲ ಇಲ್ಲಿಯ ಧನಿಕ ವರ್ಗದವರನ್ನು ಹಾಡಿ ಹರಸುತ್ತಿತ್ತು. ಜನಾಂಗದ ಒಕ್ಕಟ್ಟೊ ಬಿರುಕಿನ ಭಯವಿಲ್ಲದ ಭದ್ರವಾಗಿರುತ್ತಿತ್ತು. ಭಾರತೀಯ ಬಂಡವಾಳಗಾರರು-ಅವರಲ್ಲಿಯೂ ಉದ್ಯಮಪ್ರಭುಗಳು—ಕ್ರಾಂತಿಯ ಭೂಮಿಕೆಯನ್ನೇರಲು ತಪ್ಪಿದುದರಿಂದಲೇ ನಮ್ಮ ಒಕ್ಕಟ್ಟೆಂಬುದು ಹಾಳಾಗಿ ಹೋಯಿತು. ಜನತೆ ಮತ್ತು ಧನಿಕರು ಒಂದಾಗುವ ಯೋಗವು ನಷ್ಟವಾಯಿತು. ಧನಿಕವರ್ಗದವರು ಶಾಸನಭಂಗ—ಬಹಿಷ್ಕಾರ—ದ ಚಳವಳದಲ್ಲಿ ತಪ್ಪು ಹಾದಿಯನ್ನು ತುಳಿದದ್ದರಿಂದ ಜನಾಂಗದ ಐಕ್ಯಕ್ಕೆ ಬಲವಾದ ಏಟು ಬಿತ್ತು.

ಪ್ರತಿಯೊಬ್ಬ ಕಾಂಗ್ರೆಸ್ ಕೆಲಸಗಾರನೂ ಈ ಸಮಸ್ಯೆಯನ್ನು ಇದೇ ಬಗೆಯಲ್ಲಿ ವಿಚಾರಮಾಡಿರುವನೆಂದು ಹೇಳಲಾರೆ. ಆದರೆ ಬಂಡವಾಳಗಾರರ—ವಿಶೇಷತಃ ಉದ್ಯಮ-ವಾಣಿಜ್ಯಗಳಲ್ಲಿ ತೊಡಗಿದ ಬಂಡವಾಳಗಾರರ—ನಡತೆಯಿಂದ ಕೆಲಸಗಾರರ ಕಣ್ಣು ತೆರೆದಿವೆ. ತಾವು ಮೋಸಹೋದೆವೆಂದು ಅವರಿಗೆ ಮನದಟ್ಟಾಗಿದೆ. ಆದುದರಿಂದ ಇನ್ನುಮುಂದೆ ಬಂಡವಾಳಗಾರರೊಡನೆ ಕೂಡುವುದು ಸರಿಯಲ್ಲವೆಂದು ಅವರ ಮನಸ್ಸಿಗೆ ಹೊಳೆದಿದೆ.

ಭಾರತೀಯ ಬಂಡವಾಳಗಾರರು ಕ್ರಾಂತಿರಂಗಕ್ಕೆ ಏರಲು ಸಿದ್ಧರಿಲ್ಲವೆಂಬುದು ಖಚಿತವಾಯಿತು. ನಮ್ಮ ಮುಂದಾಳುತನದಲ್ಲಿ ಸಾಮ್ರಾಜ್ಯವಾದವನ್ನೆದುರಿಸಬಲ್ಲ ಬಲವಾದ ಚಳವಳವನ್ನೂ ಅವರು ನಡೆಸಲಿಲ್ಲ. ಏಕೆಂದರೆ, ಅವರು ಹೋರಾಟದಲ್ಲಿ ದುಮುಕಲು ಹೆದರಿದವರು. ಇದಲ್ಲದೆ ಇಂತಹ ಚಳವಳವು ಜಯಶೀಲವಾಗಬೇಕಾದರೆ ಇದರಲ್ಲಿ ಸಾಮಾನ್ಯ ಜನತೆಯು ಆದಷ್ಟು ಹೆಚ್ಚಾಗಿ ಸೇರಬೇಕು, ಎಂದರೆ ಇದು ಜನತೆಯ (Mass) ಹೋರಾಟವಾಗಬೇಕು. ಚಳವಳವನ್ನು ಈ ರೀತಿಯಲ್ಲಿ ನಡೆಸುವುದೂ ಅವರಿಂದಾಗಲಿಲ್ಲ. ಬಂಡವಾಳಗಾರರ ಮುಂದಾಳುತನದಲ್ಲಿ ಜನತೆಯ ಚಳವಳವು (Mass movement) ನಡೆದಿಲ್ಲವೆಂದಲ್ಲ. ಚರಿತ್ರೆಯಲ್ಲಿ ಇಂತಹ ಸಂದರ್ಭಗಳೆಷ್ಟೋ ಕಂಡುಬರುತ್ತವೆ. ಭಾರತದ ಈಗಿನ ಪರಿಸ್ಥಿತಿಯಲ್ಲಿ, ಜನತೆಯ ಚಳವಳವನ್ನು ಕೇವಲ ಸಾಮಾಜಿಕ ಸೇವೆಯಿಂದಲೂ ಜನಾಂಗಭಾವನೆಯನ್ನುದ್ದೀಪಿಸಿಯೂ ಹೂಡುವುದು ಸಾಧ್ಯವಿಲ್ಲ. ಜರ್ಮನಿ ಅಥವಾ ಗ್ರೇಟಬ್ರಿಟನ್ನಿನಂತಹ ದೇಶಗಳಲ್ಲಿ ಈ ಜನಾಂಗ ಭಾವನೆಯಿಂದ ಪವಾಡ ಕೃತ್ಯಗಳನ್ನು ಸಹ

ವಮಾಡಿ ತೋರಿಸಬಹುದು. ಏಕೆಂದರೆ ಅಲ್ಲಿ ಬಂಡವಾಳಗಾರರ ಆಳಿಕೆಯಿಂದ ಈ ಭಾವನೆಯು ಮಹಾ ಉನ್ನತಿಯನ್ನೂ ಪವಿತ್ರತೆಯನ್ನೂ ಪಡೆದಿದೆ. ಆದರೆ ಹಿಂದುಸ್ಥಾನದಲ್ಲಿ ಇಂತಹ ಭಾವನೆ ಎಂದೂ ಪ್ರಮುಖವಾಗಿಲ್ಲ. ಜನತೆಯಲ್ಲಿಯೂ ಅದು ಕಂಡುಬರುವುದಿಲ್ಲ. ಏಕೆಂದರೆ ಇಲ್ಲಿ ಬಂಡವಾಳಗಾರಿಕೆಯ ಆಳಿಕೆ ಇಂದಿನ ವರೆಗೆ ಆಗಿಲ್ಲ. ಆದುದರಿಂದ ಈ ಜನಾಂಗಭಾವನೆ ಇಲ್ಲಿಯವರಿಗೆ ಅಷ್ಟು ಆಕರ್ಷಕವೆಂದಾಗಲಿ ಪ್ರಯೋಜನವುಳ್ಳದೆಂದಾಗಲಿ ತೋರುವುದಿಲ್ಲ.

ಸಮಾಜಸೇವೆಯ ಹಣೆಯಬರೆಹವಾದರೂ ಅದೇ. ಅದರ ಕಾರ್ಯಕಲಾಪಗಳು ವ್ಯಕ್ತಿಮಿತವಾಗಿವೆ. ಅದಲ್ಲದೆ ಸಾಮಾಜಿಕ ಸೇವೆಗೆ ಒಮ್ಮೊಮ್ಮೆ ಎಲ್ಲಿಯೋ ರಾಜಕೀಯ ಸಂಬಂಧವು ಬರುತ್ತದೆ. ಸಾಮಾಜಿಕ ಸೇವೆಯ ಮುಖಾಂತರವಾಗಿ ಒಬ್ಬ ಮನುಷ್ಯನನ್ನು ರಾಜಕೀಯ ರಂಗಕ್ಕೆ ಎಳೆಯುವುದು ಬಲು ಬಿಗಿ. ಎಷ್ಟೋ ಕಾಂಗ್ರೆಸ್ ಕೆಲಸಗಾರರು ಯಾವುದಾದರೂ ದೃಢವಾದ ಕಾರ್ಯವನ್ನು ಮಾಡಬೇಕೆಂದು ಬಯಸುತ್ತಾರೆ. ಅವರು ಸಮಾಜಸೇವೆಯ ಚಟುವಟಿಕೆಗಳಿಗೆ ಹೆಚ್ಚು ಮಹತ್ತ್ವ ಕೊಡುತ್ತಾರೆ. ಶಿಕ್ಷಣ ರೋಗಚಿಕಿತ್ಸೆ, ಹರಿಜನೋದ್ಧಾರ, ಖಾದಿ ಮುಂತಾದ ಕಾರ್ಯಗಳಲ್ಲಿ ಅವಳು ತೊಡಗುವರು. ಬೇರೆ ಯಾವ ಕೆಲಸವೂ ಇಲ್ಲದಿದ್ದಾಗ ಈ ಚಟುವಟಿಕೆಗಳಿಗೆ ಅಷ್ಟು ಮಹತ್ತ್ವವು ಒಂದು ವೇಳೆ ಬರಬಹುದು. ಆದರೆ ಲಕ್ಷೋಪಲಕ್ಷ ಜನರನ್ನು ರಾಜಕೀಯ ಹೋರಾಟದ ಕಣಕ್ಕೆ ಕರೆತರುವ ಶಕ್ತಿ ಅವುಗಳಲ್ಲಿಲ್ಲ. ಆ ಮಟ್ಟಿಗೆ ಅವುಗಳೆಲ್ಲ ಉಪಯೋಗಕ್ಕೆ ಬಾರದ ಕೆಲಸಗಳು. ಮುಂಚೆ ಈ ಸಾಮಾಜಿಕ ಚಟುವಟಿಕೆಗಳ ಉದ್ದೇಶವೇನೆಂಬುದನ್ನು ಕಂಡುಕೊಳ್ಳಬೇಕು. ಎಲ್ಲ ವರ್ಗಗಳ ಆದಷ್ಟು ಹೆಚ್ಚು ಜನರನ್ನು ಸ್ವಾತಂತ್ರ್ಯದ ರಣರಂಗಕ್ಕೆ ಬರಸೆಳೆಯುವುದೇ ಹಿರಿಗುರಿಯಾಗಿರುವುದು. ಏಕೆಂದರೆ, ಕ್ರಾಂತಿಯು ಹೀಗೆ ಮಾಡುವುದರಿಂದಲೇ ನೆರವೇರುವುದು. ನಮಗೆ ಜನರ ಮನೋಗತಿಯನ್ನು ಪಲ್ಲಟಿಸಬೇಕಾಗಿದೆ. ಕ್ರಾಂತಿಯ ಕೆಲಸಗಾರರನ್ನು ಸೇರಿಸಬೇಕಾಗಿದೆ. ತಮ್ಮ ತಮ್ಮ ವರ್ಗದ ಹಿತ ಸಂಬಂಧಗಳು, ಆಶೆ-ಆಕಾಂಕ್ಷೆಗಳು, ಅನುಮಾನ-ಭಯಗಳು ಇವುಗಳಿಂದ ಪ್ರಚೋದಿತರಾಗಿ ಎಲ್ಲ ವರ್ಗದವರೂ ಕ್ರಾಂತಿಯಲ್ಲಿ ದುಮುಕಬೇಕು. ಹಿಂದುಸ್ಥಾನದ ಸಾಮಾನ್ಯ ಜನತೆಯನ್ನು ಹುರಿದುಂಬಿಸುವ ಯಾವ ಕಾರ್ಯಕ್ರಮವನ್ನು ಇಲ್ಲಿಯ ಬಂಡವಾಳಗಾರರು ಕೈಕೊಂಡಿದ್ದಾರೆ?

ಜಗಳವನ್ನು ಬಗೆಹರಿಸುವ ಭಾರವನ್ನು ಅಲ್ಲಿಯ ಪ್ರಾಂತೀಯ ಸರಕಾರವು ಹೊತ್ತಿರುವುದಂತೂ ಅತ್ಯಂತ ವಿಚಿತ್ರವಾಗಿದೆ. ಒಕ್ಕಲು ಒಡೆಯರುಗಳ ಹೃದಯದ ಸಂಬಂಧವೂ ಸಾಮಾನ್ಯ ಹಿತಬುದ್ಧಿಯೂ ಇದರಿಂದ ಬೆಳೆಯಲಾರವು. ವಸ್ತುಸ್ಥಿತಿಯು ಬೇರೂರುವಾಗ ಐಕ್ಯವಾದಿಗಳಿಗೆ ಒಕ್ಕಟ್ಟಿನ ಮಾತು ನಗೆಗೇಡಾಗಿ ತೋರದಿರುವುದು ಹೇಗೆಂಬುದೇ ಆಶ್ಚರ್ಯದ ಸಂಗತಿ.

ಕಂದಾಯ ಲಾವಣಿಗಳ ವಿಷಯದಲ್ಲಿ ಕೆಲಮಟ್ಟಿನ ಸೌಕರ್ಯಗಳನ್ನೊದಗಿಸುವ ಮನಸ್ಸು ಬಂಡವಾಳಗಾರರಿಗಿರಬಹುದು. ಆದರೆ ಜಮೀನುದಾರರೊಡನಿರುವ ಇವರ ಸಂಬಂಧಗಳನ್ನೂ ಸಾಮ್ರಾಜ್ಯವಾದದೊಡನೆ ಕಾದಾಡುವ ಮನಸ್ಸಿಲ್ಲದಿರುವುದನ್ನೂ ನೋಡುವಾಗ ಇವರು ಅಂತಿಂತಹ ಹುಸಿಬಿಸಿ ಅಭಿವಚನಗಳನ್ನು ಕೊಡುವುದಕ್ಕಿಂತ ಹೆಚ್ಚಿಗೆ ಏನೂ ಮಾಡಲಾರರೆಂದು ಕಂಡು ಬರುತ್ತದೆ. ಈ ವಚನಗಳಲ್ಲಿ ಸತ್ಯವಾಗಿಯೂ ಹುರುಳಿಲ್ಲ. ಇವುಗಳಿಂದ ಹೆಚ್ಚಿನ ಪ್ರಯೋಜನವಿಲ್ಲ. ಅಲ್ಲದೆ ಅನುತ್ಪಾದಕ ಆಸ್ತಿಗಳುಳ್ಳ ಬಹುಸಂಖ್ಯಾತರಾದ ಹಿಂದುಸ್ಥಾನದ ಒಕ್ಕಲಿಗರಿಗೆ ಇವುಗಳು ಸಂಬಂಧಪಡುವುದಿಲ್ಲ. ಏಕೆಂದರೆ ಅವರಿಂದ ಕಂದಾಯ ಕೊಡಲಿಕ್ಕೇ ಸಾಧ್ಯವಿಲ್ಲ. ಒಕ್ಕಲಿಗರ ಈಗಿನ ಸುಲಿಗೆಯಲ್ಲಿ ಬಂಡವಾಳಗಾರರ ಭಾಗವನ್ನು ಗಮನಕ್ಕೆ ತಂದರೆ ಬಹಳ ಅನುಮಾನಕ್ಕೆ ಕಾರಣವಾಗುತ್ತದೆ. ಒಕ್ಕಟ್ಟಿನಲ್ಲಿ ಒಬ್ಬರಿಗೊಬ್ಬರ ನಂಬುಗೆಯಿರಬೇಕು. ಇದನ್ನೆಲ್ಲ ಬಿಟ್ಟು ಮುಂದಿನ ಉದ್ದೇಶಗಳಿಂದಲ್ಲದೆ ಇಂದಿನ ನಡತೆಯಿಂದ ಘನತರ ಪ್ರಾಮಾಣಿಕತೆಯನ್ನು ಪರೀಕ್ಷಿಸಬಾರದೆಂದು ಹೇಳುವುದು ಸೋಗಿಗರ ಮಾತು.

ನಾನು ಮುಂಚೆ ಹೇಳಿದ ಸಂಸ್ಕಾರಗಳ ಮತ್ತು ಕೊರತೆಗಳ ಮೂಲಕ ಬಂಡವಾಳಗಾರರು ಸಾಮಾನ್ಯ ಜನತೆಯನ್ನು ಅನುದಾರವಾದ ಮತ್ತು ಮಲತಾಯಿಯ ಅಂತಃಕರಣದಿಂದ ನಡೆಸುತ್ತಿದ್ದಾರೆ. ಕ್ರಾಂತಿಯ ಎದೆಗಾರಿಕೆಯುಳ್ಳ ಬಂಡವಾಳಗಾರರು ರಾಷ್ಟ್ರೀಯ ಚಳವಳಕ್ಕೆ ದುಡ್ಡಿನ ಸುರಿಮಳೆಯನ್ನು ಕರೆಯುತ್ತಿದ್ದರು. ಆದರೆ ಹಿಂದುಸ್ಥಾನದಲ್ಲಿ ಹೀಗಾಗಲಿಲ್ಲ. 'ಸ್ವದೇಶಿ' ಯಂತಹ ನಿರುಪದ್ರವಿಯಾದ ಕಾರ್ಯಕ್ರಮವನ್ನೇ ನೋಡೋಣ. ಇದು ಬಂಡವಾಳಗಾರರಿಗೆ ಒಪ್ಪಿಗೆಯಾದ ಕಾರ್ಯಕ್ರಮವೆಂದು ಎಲ್ಲರಿಗೂ ಗೊತ್ತು. ನಿಜವಾಗಿಯೂ ಜನಾಂಗಭಾವವುಳ್ಳ ಬಂಡವಾಳಗಾರರು ಪ್ರತಿಯೊಬ್ಬನ

ಬಾಯಿಯಿಂದಲೂ ಸ್ವದೇಶಿಯ ಜಪವು ನಡೆಯುವಂತೆ ಮಾಡುತ್ತಿದ್ದರು. ಆಸೇತುಹಿಮಾಚಲದ ವರೆಗೆ ಸ್ವದೇಶಿಯ ಕೂಗನ್ನೆಬ್ಬಿಸಿ ಕಿವಿ ಗಡಚಿಕ್ಕುವಂತೆ ಮಾಡುತ್ತಿದ್ದರು. ಸ್ವದೇಶಿಯ ಪ್ರಚಾರಕಾರ್ಯದಲ್ಲಿ ಕೋಟಿಗಟ್ಟಲೆ ಹಣವನ್ನು ಹಾಕುತ್ತಿದ್ದರು. ವಿಪುಲವಾದ ಕ್ಷೇಮನಿಧಿ (Reserve) ಯಿದ್ದರೂ ಬ್ರಿಟಿಶ್ ಬಂಡವಾಳಗಾರರು ತಮ್ಮ ದೇಶದಲ್ಲಿ "ಬ್ರಿಟಿಶ್ ಸರಕುಗಳನ್ನೇ ಕೊಳ್ಳಿರಿ" ಎಂಬ ಪ್ರಬಲವಾದ ಪ್ರಚಾರವನ್ನು ನಡೆಸುತ್ತಿದ್ದಾರೆ. ಆದರೆ ಭಾರತದ ಬಂಡವಾಳಗಾರರು ಮಾತ್ರ ಭಾವನಾಪ್ರಧಾನರಾದ ಕೆಲವು ತರುಣರಿಗೆ ಸ್ವದೇಶಿಯ ಸ್ತುತಿಯನ್ನು ಮಾಡಹಚ್ಚಿದ್ದಾರೆ.

ಒಟ್ಟಿನ ಮೇಲೆ ಭಾರತೀಯ ಬಂಡವಾಳಗಾರರಲ್ಲಿ ಎರಡು ಕೊರತೆಗಳಿವೆ. ಸಾಮ್ರಾಜ್ಯವಾದವನ್ನು ವಿರೋಧಿಸುವ ಚಳವಳದಲ್ಲಿ ದುಮುಕಲು ಅವರು ದುರ್ಬಲರು. ಸಾಮಾನ್ಯ ಜನತೆಯನ್ನೆಲ್ಲ ತಮ್ಮ ಧ್ವಜದ ನೆರಳಲ್ಲಿರಿಸಲು ಅವರಿಂದಾಗಿಲ್ಲ. ತಮಗೆ ಅಪಾಯವಿಲ್ಲದ ಆದರೆ ಜನತೆಯನ್ನು ಆಕರ್ಷಿಸುವ ಕಾರ್ಯಕ್ರಮವನ್ನು ಅವರು ಕಟ್ಟಿಲ್ಲ. ಇಂತಹ ಬಲವಾದ ಕೊರತೆಗಳುಳ್ಳ ಬಂಡವಾಳಗಾರರೊಡನೆ ಸೇರುವುದರಿಂದ ಕೈಕೊಂಡ ಕೆಲಸವೆಲ್ಲ ಕುಂಠಿತವಾಗಿ ಕಮರಿ ಹದಗೆಟ್ಟು ಹಾಳಾಗುವುದು. ಬಂಡವಾಳಗಾರರು ಈ ಕಾಳಗದಲ್ಲಿ ಕೂಡುವುದಿಲ್ಲ. ಜನತೆಗೆ ಅದರಲ್ಲಿ ಸೇರುವಷ್ಟು ಆಕರ್ಷಣವಿಲ್ಲ. ಎಂದ ಬಳಿಕ ಹೀಗಾಗುವುದರಲ್ಲಿ ಆಶ್ಚರ್ಯವೇನು? ಆದುದರಿಂದ ನಮ್ಮ ಸಿದ್ಧಾಂತವೇ ಸರಿ. ಜನತೆಯು ಕೆಲವು ಕಾಲ ತನ್ನ ಹಿತಸಂಬಂಧಗಳನ್ನು ಗಮನಕ್ಕೆ ತರದೆ ಉಚ್ಚವರ್ಗದವರೊಡನೆ ಸೇರಿ ಮೊದಲಿಗೆ ಸಾಮಾನ್ಯ ಶತ್ರುವನ್ನು ಎದುರಿಸಿ ಹೋರಾಡಬೇಕೆಂಬ ವಿಚಾರವು ಸರಿಯಾದುದಲ್ಲ. ಈ ಬಗೆಯ ಹೋರಾಟದಿಂದ ಏನೂ ಪ್ರಯೋಜನವಿಲ್ಲ. ಸಾಮ್ರಾಜ್ಯವಾದದೊಡನೆ ಕೆಲವು ಒಪ್ಪಂದಗಳು ಮಾತ್ರ ಆಗಬಹುದು. ಆದರೆ ಈ ಒಪ್ಪಂದಗಳಿಂದ ಜನತೆಯ ಹಿತಕ್ಕೆ ಬಾಧೆ ಬರುವುದೆಂಬುದನ್ನು ಲಕ್ಷ್ಯದಲ್ಲಿಡಬೇಕು. ಏಕೆಂದರೆ ಈ ಒಪ್ಪಂದಗಳಾಗುವುದು ಸಾಮ್ರಾಜ್ಯವಾದಿಗಳ ಮತ್ತು ಹಿಂದುಸ್ತಾನದ ಬಂಡವಾಳಗಾರರ ನಡುವೆ. ದೇಶದ ಜನಸಾಮಾನ್ಯರನ್ನು ಸಾಂಪತ್ತಿಕ ಸಾಧನಗಳನ್ನು ಯಾವ ರೀತಿಯಲ್ಲಿ ಸುಲಿಯಬೇಕೆಂಬುದೇ ಒಪ್ಪಂದಗಳ ವಿಷಯ. ಭಾರತೀಯ ಉಚ್ಚವರ್ಗದವರ ಮತ್ತು ಸಾಮ್ರಾಜ್ಯವಾದದ ನಡುವೆ ಆಗುವ

ಸ್ಪಷ್ಟಪಡಿಸುವೆನು. **ವರ್ಗಭಾವನೆಗಳನ್ನುಳಿದ ರಾಜಕೀಯವಿಲ್ಲ.** ಆದರೂ ಎಲ್ಲ ವರ್ಗದವರನ್ನೂ ಬದಿಗಿರಿಸಿ ಅನಾಸಕ್ತಿಯಿಂದ ಒಂದು ನಿಮಿಷ ಸ್ವಾತಂತ್ರ್ಯದ ವಿಷಯವನ್ನು ಯೋಚಿಸೋಣ.

ಸಾಮ್ರಾಜ್ಯವಾದದೊಡನೆ ದೇಶದ ಸರ್ವ ವರ್ಗಗಳಲ್ಲಿ ಜನತೆಯೊಂದೇ —ಕೂಲಿಕಾರರು, ಒಕ್ಕಲಿಗರು ಮತ್ತು ಇತರ ಮಧ್ಯಮ ವರ್ಗದ ಸಾಮಾನ್ಯ ಜನರು—ಕಾದಾಡಬಲ್ಲುದು ಏಕೆಂದರೆ. ಅದು ಸಾಮ್ರಾಜ್ಯವಾದವನ್ನವಲಂಬಿಸಿಲ್ಲ. ಇದನ್ನು ಮುಂಚೆಯೇ ಹೇಳಿದ್ದೇನೆ. ಜನತೆಗೆ ಸಾಮ್ರಾಜ್ಯವಾದದೊಡನೆ ಹೋರಾಡುವ ಬಲವಿರುವುದಲ್ಲದೆ ಪೂರ್ಣ ಸ್ವಾತಂತ್ರ್ಯದ ಹಿರಿ ಹಂಬಲವೂ ಇದೆ ಸಾಮ್ರಾಜ್ಯವಾದವು ಬಾಳುವುದು ಜನತೆಯನ್ನು ಸುಲಿದು, ಅವರ ನೆತ್ತರವನ್ನು ಹೀರಿ. ಸಾಮ್ರಾಜ್ಯವಾದವು ಜನತೆಯ ಹಗೆಯನ್ನು ಹಿಂಗಿಸಲು ಅವರ ದಾಳಿಯನ್ನು ತಬ್ಬಲು ಕೆಲವು ಅನ್ನದ ಅಗುಳುಗಳನ್ನು ಚೆಲ್ಲಬಹುದು. ಆದರೆ ಸುಲಿಗೆಯನ್ನೇ ನಿಲ್ಲಿಸಿಬಿಡುವೆನೆಂದು ಅದು ಹೇಳಿದರೆ ತನ್ನ ಅಸ್ತಿತ್ವವನ್ನೇ ಅಲ್ಲಗಳೆದಂತೆ, ಹೇತುವನ್ನು ಹೂಳಿದಂತೆ, ತನ್ನ ಆಂತರಿಕ ಸ್ವಭಾವಕ್ಕೆ ಹೊರತಾದಂತೆ. ನಾಡಿನೊಳಗಿನ ಬೇರೆ ವರ್ಗಗಳೊಂದಿಗೆ ಅದು ಸಂಧಾನವನ್ನು ನಡೆಸಬಹುದು, ಸೌಕರ್ಯ-ಸೌಲಭ್ಯಗಳನ್ನು ಕೊಡಬಹುದು, ಒಪ್ಪಂದಗಳನ್ನು ಮಾಡಬಹುದು. ಆದರೆ ಇಲ್ಲಿಯ ತನ್ನ ಕೈವಾರಿಗಳ ಮುಖಾಂತರ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ನಡೆಸುವ ಜನತೆಯ ಸುಲಿಗೆಯನ್ನು ನಿಲ್ಲಿಸಲು ಒಪ್ಪಿತೆಂದರೆ ಅದು ತನ್ನ ಸಾವನ್ನು ತಾನು ತಂದು ಕೊಂಡಂತೆ. ಇದರ ಅರ್ಥವಿಷ್ಟೇ. ಹಿಂದುಸ್ಥಾನದಲ್ಲಿ ಸಾಮ್ರಾಜ್ಯವಾದವನ್ನೆದುರಿಸಬಲ್ಲ ವರ್ಗವೆಂದರೆ ಸಾಮಾನ್ಯ ಜನತೆ. ಅದಕ್ಕೆ ಯಾವ ಹೊಂದಿಕೆ, ಒಪ್ಪಂದವೂ ಸೇರುವುದಿಲ್ಲ. ಅದು ಪೂರ್ಣ ಸ್ವಾತಂತ್ರ್ಯಕ್ಕಾಗಿ ಪಣ ತೊಟ್ಟಿದೆ. ಬೇರೆಯವರು ಬಹಿರಂಗವಾಗಿ ಇದನ್ನು ಗಹಗಹಿಸಿ ನಗುವರು. ಇಲ್ಲವೆ ಈ ವಿಚಾರವನ್ನು ವಿರೋಧಿಸುವರು. ಒಂದು ವೇಳೆ ಒಪ್ಪಿದರೂ ಅಷ್ಟಕ್ಕಷ್ಟೇ. ಒಪ್ಪಿಗೆಯ ಮಾತುಗಳು ತುಟಿಯ ತುದಿಯಿಂದ ಉಗಿದು ಬರುತ್ತವೆಯಲ್ಲದೆ ಹೃದಯದಿಂದ ನೇರವಾಗಿ ನೆಗೆದು ಬರುವುದಿಲ್ಲ. ಇನ್ನು ವಿದೇಶೀಯ ಪ್ರಭುತ್ವದಲ್ಲಿ ಸಡಗರದಿಂದ ಮೆರೆಯುತ್ತಿರುವ ಸರಕಾರದ ಅಧಿಕಾರಿಗಳು, ಬಿರುದು ಭಾವಲಿಗಳ ಬಂಟರು. ದೊಡ್ಡ ದೊಡ್ಡ ವರ್ಗದಾರರು (Landlords)

ಮತ್ತು ಸಾಮ್ರಾಜ್ಯವಾದದ ಕೈಯಾಳುಗಳು ಮುಂತಾದವರೆಲ್ಲರೂ ನಾಡಿನ ಬಿಡುಗಡೆಯ ವಿರೋಧಿಗಳು. ತಮ್ಮ ಪ್ರಗತಿಗೆ ಈ ವಿದೇಶೀಯ ಪ್ರಭುತ್ವವು ಪ್ರತಿರೋಧಕವಾದುದೆಂದು ಭಾವಿಸುವ, ಆದರೆ ಅದರೊಡನೆ ಕಾದಾಡುವ ಶಕ್ತಿಯುಳ್ಳ ಸಾಮ್ರಾಜ್ಯವಾದದ ಕಿರಿಪಾಲುಗಾರರಾದ ಭಾರತೀಯ ಉದ್ಯಮ ಪ್ರಭುಗಳಂತಹರು, ಸ್ವರಾಜ್ಯದ ಚಳವಳದಿಂದ ಜನತೆಯಲ್ಲಿ ಆತ್ಮಜಾಗೃತಿ ಯುಂಟಾದೀತೆಂಬ ಭಯದಿಂದ ತಮಗೆ ಜನತೆಯ ಸುಲಿಗೆಗೆ ತಕ್ಕ ಸೌಕರ್ಯ ಗಳು ಸಿಕ್ಕರೆ ಸಾಕೆಂಬ ಅಭಿಪ್ರಾಯವುಳ್ಳವರಾಗಿದ್ದಾರೆ. ಅವರಿಗೆ ತಮ್ಮ ಬೇಳೆಯೊಂದು ಬೆಂದರೆ ಸಾಕು.

ಜನತೆಯು ಮಾತ್ರ ಸಾಮ್ರಾಜ್ಯವಾದದೊಡನೆ ಹೋರಾಡುವಂತಹದು. ಮಿಕ್ಕವರೆಲ್ಲ ಕ್ರಾಂತಿರಂಗಕ್ಕಿಳಿಯುವವರಲ್ಲ. ಅಂದಬಳಿಕ ನಾವು ಈ ಚಳವಳ ದಲ್ಲಿ ಹೂಡಬೇಕಾದ ಹಂಚಿಕೆ ಯಾವುದು? ಜನತೆಯು ಒಂದಿಲ್ಲೊಂದು ಬಗೆ ಯಿಂದ ಸಾಮ್ರಾಜ್ಯವಾದವನ್ನೆದುರಿಸುವಂತೆ ಮಾಡಬೇಕಾದುದು ನಮ್ಮ ಕೆಲಸ. ಇದನ್ನು ಸಾಧಿಸುವುದು ಹೇಗೆ?

ನಮ್ಮ ದೇಶದ ಜನಬಲ ೩೫ ಕೋಟಿಗೆ ಮಿಕ್ಕಿದೆ. ನಮ್ಮನ್ನಾಳುವ ವಿದೇಶೀಯರಿರುವುದು ಬರಿಯ ಎರಡು ಲಕ್ಷ. ಈ ಸಂಗತಿಯನ್ನು ನಾವು ಚೆನ್ನಾಗಿ ಯೋಚಿಸಬೇಕು. ಸಂಖ್ಯಾಬಲದ ಇಂತಹ ಅತ್ಯದ್ಭುತವಾದ ವ್ಯತ್ಯಾಸದ ಮಹಾಪ್ರಮಾಣವು ಯಾವ ಪ್ರಯೋಜನದ್ದು? ಒಂದು ಹಿಡಿ ಬಿಳಿ ಜನರು ವಿಪುಲ ಮಾನವಬಲವುಳ್ಳ ಇಡಿಯ ದೊಡ್ಡ ನಾಡೊಂದನ್ನು ಹೇಗೆ ಆಳಬಲ್ಲರು? ಈ ೩೫ ಕೋಟಿ ಜನರ ಬದಲು ಅಷ್ಟೇ ಕುರಿಗಳಿದ್ದರೂ ಅವುಗಳನ್ನು ಸಾಕಿ ಹೇಳಿದಂತೆ ನಡೆಯಹಚ್ಚಲು ಸಹ ಎರಡು ಲಕ್ಷಕ್ಕಿಂತ ಹೆಚ್ಚು ಜನರು ಬೇಕಾಗಬಹುದೆಂದು ಒಬ್ಬರು ನುಡಿದಿರುವರು! ನಮ್ಮಲ್ಲಿ ರಾಷ್ಟ್ರೀಯ ಜಾಗೃತಿಯಿಲ್ಲದುದೇ ಈ ಅವಸ್ಥೆಗೆ ಕಾರಣವಿರಬಹುದೇ? ನಮ್ಮಲ್ಲಿ ಒಕ್ಕಟ್ಟಿಲ್ಲ; ಶಿಕ್ಷಣವಿಲ್ಲ. ಆಮದರಿಂದ ಹೀಗಾಗಿರಬಹುದೇ? ಹಿಂದುಸ್ಥಾನ ದಲ್ಲಿಯ ಬ್ರಿಟಿಶರ ಆಳಿಕೆಯ ಬುನಾದಿ ಯಾವುದು?

ಹಲವು ವರ್ಷಗಳ ಮುಂಚೆ ಅಮೇರಿಕೆಯ ಸ್ಯಾನ್‌ಫ್ರಾನ್ಸಿಸ್ಕೊದಲ್ಲಿ ಪ್ರಭಾವಶಾಲಿಯಾದ ಭಾರತೀಯ ಉಪನ್ಯಾಸಕರೊಬ್ಬರ ಭಾಷಣವನ್ನು ಕೇಳುವ ಸುಯೋಗವು ಪ್ರಾಪ್ತವಾಗಿತ್ತು. ಅವರ ದರ್ಶನ ಭಾಷಣಗಳೆರಡೂ

ಅಷ್ಟು ಸೊಗಸು. ಸಭಿಕರ ಮನಸ್ಸಿನ ಮೇಲೆ ಅವರ ಮಾತುಗಳು ಚೆನ್ನಾಗಿ ಬಿಂಬಿಸಿದವು. ಹಿಗ್ಗಿನಿಂದ ಜನರಿಕ್ಕಿದ ಚಪ್ಪಾಳೆಗಳ ಸಪ್ಪಳವು ಅಡಗುವಷ್ಟರಲ್ಲಿ ಸಭೆಯ ನಡುವಿನಿಂದ ಕುಳ್ಳನಾದ ಮನುಷ್ಯನೊಬ್ಬನು ಎದ್ದು ನಿಂತು ನೇರವಾದ ಪ್ರಶ್ನೆಯೊಂದನ್ನು ಕೇಳಿದ— “ ಒಂದು ಹಿಡಿ ಬ್ರಿಟಿಶರು ೩೦ ಕೋಟಿಗಿಂತ ಹೆಚ್ಚಾದ ಭಾರತೀಯರನ್ನು ಹೇಗೆ ಆಳಬಲ್ಲರು ? ” ಎರಡು ಗಂಟೆಗಳ ಕಾಲ ಉಪನ್ಯಾಸಕರು ಗೆಲವುಗಟ್ಟಿ ಮಾಡಿದ ಪರಿಣಾಮವೆಲ್ಲ ಅರೆನಿಮಿಷದಲ್ಲಿ ಮರೆಯಾಗುವಂತಾಯಿತು. ಪ್ರಶ್ನೆಯು ಪುಟ್ಟದಾದರೂ ಅದರ ಪ್ರಭಾವವಂತಹದು. ಆದರೂ ಉಪನ್ಯಾಸಕರು ನಂಬುಗೆಯ ನೋಟದಿಂದ ಮುಂದೆ ಸಾರಿ “ ನನ್ನ ಕೈಯಲ್ಲಿ ಒಂದೆರಡು ಕೋವಿಗಳಿದ್ದರೆ ನಾನು ಈ ಸಭೆಯನ್ನೆಲ್ಲ ಅಂಕಿತದಲ್ಲಿಟ್ಟು ಹೇಳಿದಂತೆ ಕೇಳ ಹಚ್ಚುವೆ ” ಎಂದು ಮಾರ್ನುಡಿದರು. ಆಧುನಿಕ ವಿನಾಶಕ ಶಸ್ತ್ರಾಸ್ತ್ರಗಳಿಂದ ಸುಸಜ್ಜಿತರಾದ ಹಿಡಿ ಜನರು ನಿರಾಯುಧರಾದ ಕೋಟಿಗಟ್ಟಲೆ ಜನರನ್ನು ಸುಲಭವಾಗಿ ಆಳಬಹುದೆಂಬುದೇ ಅವರ ಮಾತಿನ ಮರ್ಮ. ಸಭಿಕರ ಮೇಲೆ ಈ ಮಾತಿನಿಂದ ಯಾವ ಪರಿಣಾಮವಾಯಿತೆಂಬುದನ್ನು ನಾನರಿಯೆ. ಸಭೆಯಲ್ಲಿದ್ದ ಸದಸ್ಯರೆಲ್ಲ ಹೆಚ್ಚಾಗಿ ಇಂಗ್ಲೆಂಡಿನವರಾಗಿದ್ದುದರಿಂದ ಇದು ಹೇಗೆ ಸಾಧ್ಯವೆಂದು ಅವರು ಹೆಚ್ಚು ವಾದಿಸಲಿಲ್ಲ. ಬ್ರಿಟಿಶರ ಅನುಭವವು ಅವರಿಗೆ ಚೆನ್ನಾಗಿರುವುದರಿಂದ ಸಹಜವಾಗಿಯೇ ಅವರು ಸುಮ್ಮನಿದ್ದುಬಿಟ್ಟರು. ನನ್ನ ಮಟ್ಟಿಗೆ ಆ ಪ್ರಶ್ನೋತ್ತರಗಳಿಂದ ಅಂದಿನ ಭಾಷಣದಿಂದಾದ ಪರಿಣಾಮವೆಲ್ಲ ಅಳಿದು ಹೋಯಿತು. ಈ ೧೫ ವರ್ಷಗಳ ಒಳಗೆ ಬ್ರಿಟಿಶರ ದಂಡುಗುಂಡುಗಳೇ ನಮ್ಮ ದಾಸ್ಯದ ಕಾರಣವೆಂಬ ಮಾತಿನಲ್ಲಿಯ ವಿಶ್ವಾಸವು ಎಷ್ಟೋ ಕಡಿಮೆಯಾಗಿದೆ.

ನಾವು ದಾಸ್ಯದಲ್ಲಿ ನರಳುತ್ತಿರುವುದು ನಿರಾಯುಧರೆಂದಲ್ಲ. ಶಸ್ತ್ರಾಸ್ತ್ರಗಳ ಶಕ್ತಿ ಅದೆಷ್ಟಿದ್ದರೂ ಎರಡು ಲಕ್ಷ ಜನರು ೩೫ ಕೋಟಿ ಜನರನ್ನು ಮಣಿಸಿ ಆಳಲಾರರು. ಹಾಗೆಯೇ ನಮ್ಮಲ್ಲಿಯ ಐಕ್ಯದ ಅಭಾವ, ಜಾತಿವೈಷಮ್ಯ, ಮತಮತಾಂತರಗಳ ಗೊಂದಲ, ಭಾಷೆಗಳ ಬಾಹುಳ್ಯ ಮುಂತಾದವುಗಳೂ ನಮ್ಮ ಪಾರತಂತ್ರ್ಯಕ್ಕೆ ಕಾರಣಗಳಲ್ಲ. ಜಾತಿಯ ಸ್ವಭಾವದಿಂದಲೇ ನಾವು ಆಳಲ್ಪಡಲು ಯೋಗ್ಯರೆಂದೂ ಹೇಳಲಾಗಿಲ್ಲ. ಇಂತಹ ಯಾವ ಕಾರಣದಿಂದಲೂ

ಸಂಸ್ಕೃತಿಜನ್ಯ ಮನಸ್ಸಿನ ಸಂಸ್ಕಾರಗಳ ಒತ್ತಾಯದಿಂದಾಗಲಿ ಇದು ಗಳಿಸುವುದೋ ಆ ವರ್ಗವು ಸಹಜವಾಗಿ ಅವರಿಗೆ ಬೆಂಬಲವಾಗಿ ನಿಲ್ಲುವುದು. ಪರಕೀಯರ ಭಯದಿಂದಲೂ ಅವರೊಂದಿಗೆ ಬರುವ ಸ್ವಾತಂತ್ರ್ಯಗಳ ಅನುಮಾನಗಳಿಂದಲೂ ಆಳುವ ವರ್ಗಕ್ಕೆ ಇತರ ವರ್ಗಗಳಿಂದ ನೆರವು ದೊರೆಯುವ ಸಂಭವವಿದೆ. ಆದರೆ ಆಳುವ ವರ್ಗವು ಹೆಚ್ಚು ದಬ್ಬಾಳಿಕೆಯನ್ನು ನಡೆಸುವಂತಹವಾಗಿದ್ದು ಇದಕ್ಕಿಂತಲೂ ಪರಕೀಯರ ಆಳಿಕೆಯು ಹೆಚ್ಚು ಹಿತಕರವಾಗಿದ್ದರೆ ಎಲ್ಲ ವರ್ಗಗಳೂ ಅವರನ್ನೇ ಸ್ವಾಗತಿಸುವುದೂ ಉಂಟು.

ಅಂತೂ ನೆನಪಿನಲ್ಲಿಡತಕ್ಕ ಮಹತ್ವದ ಸಂಗತಿಯಿಷ್ಟೇ. ಏರಿಬರುವ ಪರಕೀಯರನ್ನು ಮೊದಲು ಎದುರಿಸುವವರು ನಾಡನ್ನಾಳುವ ವರ್ಗದವರು. ಸಮಾಜಕ್ಕೆ ಅಗ್ರೇಸರರಾದವರು. ಈ ವರ್ಗದವರೊಮ್ಮೆ ಹಣ್ಣಾಗಿ ಮಣ್ಣು ಮುಕ್ಕಿದರೆಂದರೆ, ಇವರಲ್ಲಿ ಅಳಿದುಳಿದವರಿಂದ ಕೂಡ ಈ ಪರಕೀಯರನ್ನೆದುರಿಸುವುದಾಗದಿದ್ದರೆ, ಬೇರೆ ವರ್ಗದವರಿಗೆ ತಮ್ಮ ಅಸಮಾಧಾನ—ದ್ವೇಷಗಳನ್ನು ತೋರಿಸಿದರೂ ಆಗೊಮ್ಮೆ ಈಗೊಮ್ಮೆ. ಈ ಆಳುವ ವರ್ಗದ ಸಮಾನಸ್ಕಂಧವಾದ ಸ್ಥಾನವನ್ನಾಕ್ರಮಿಸುವ ಇನ್ನೊಂದು ವರ್ಗವು ತಲೆದೋರಿ ಪರಕೀಯ ಪ್ರಭುತ್ವವನ್ನು ತಳ್ಳುವ ವರೆಗೆ ಜನತೆಯ ಅತೃಪ್ತಿಯೆಂಬುದೆಲ್ಲ ಕೆಲಸಕ್ಕೆ ಬಾರದೆ ಹುಸಿಯಾಗಿ ಹೋಗುವುದು.

ಈ ಅನುಭವವನ್ನು ಹಿಂದುಸ್ಥಾನದ ಪರಿಸ್ಥಿತಿಗೆ ಹಚ್ಚಿನೋಡುವಾ. ಹೊರನಾಡಿನ ರಾಜವಂಶವು ಬಂದ ಸಮಯದಲ್ಲಿ ಇಲ್ಲಿ ಪಾಳೆಯಗಾರಿಕೆಯ ಪ್ರಾಬಲ್ಯವಿತ್ತು. ಆದುದರಿಂದ ಹೊರನಾಡಿನವರಿಗೆದುರಾಗಿ ಮೊದಲು ಹೋರಾಡಿದವರೆಂದರೆ ಈ ಪಾಳೆಯಗಾರರೇ. ಇದು ಸಹಜವಾದುದು. ಹಗೆಗಳು ಇವರನ್ನೆಲ್ಲ ಒಬ್ಬರ ಹಿಂದೊಬ್ಬರನ್ನು ಮುರಿದು ಮಣಿಸಿದರು. ಇವನ ವಿರುದ್ಧ ಅವನನ್ನು, ಅವನ ವಿರುದ್ಧ ಇನ್ನೊಬ್ಬನನ್ನು ನಿಲ್ಲಿಸಿ ಈ ಪಾಳೆಯಗಾರ ಅರಸರ ಬಲವನ್ನೆಲ್ಲ ಮೆತ್ತಗೆ ಮಾಡಿ ನೆಲಕ್ಕಂಟಿಸಿದರು. ಈ ಕಾಳಗಗಳಲ್ಲಿ ಜನತೆಯು ಹೆಚ್ಚಾಗಿ ಪಾಲುಗೊಂಡಂತೆ ಕಾಣಲಿಲ್ಲ. ಕ್ಷಣಕ್ಷಣಕ್ಕಾಗುವ ಅರಸೊತ್ತಿಗೆಯ ಪಲ್ಲಟ, ಅರಸುಮನೆತನಗಳ ಉರುಳಾಟ, ಸೀಮೆಗಳ ಕೀಳಾಟ, ಸಲಸಲಕ್ಕೂ ಆಗುವ ಕಾಳಗಗಳ ಕಾಟ, ಇವುಗಳಿಂದ ಪಾಳೆಯ

ವುದು ಅಗತ್ಯವೆಂದು ಸಾಮ್ರಾಜ್ಯವಾದಕ್ಕೆ ಮನವರಿಕೆಯಾಯಿತು. ಆದುದರಿಂದ ಮೊದಲು ಇಲ್ಲಿ ನ್ಯಾಯ-ವ್ಯವಸ್ಥೆಗಳ ಆಳಿಕೆಯನ್ನು ಸ್ಥಾಪಿಸಿತು. ಇದರಿಂದ ಪ್ರಜೆಗಳಲ್ಲಿ ಅವರ ಸದುದ್ದೇಶಗಳ ಬಗ್ಗೆ ವಿಶ್ವಾಸವುಂಟಾಯಿತು. ಈ ಭ್ರಮೆಯ ಮೂಲಕವೇ ಸುಲಿಗೆಯು ಸುಲಭವಾಗಿ ನಡೆಯುವಂತಾಯಿತು. ಆದರೆ ಇದೆಲ್ಲ ಸಾಮ್ರಾಜ್ಯವಾದವು ತನ್ನ ಆಳಿಕೆಯನ್ನು ಭದ್ರಪಡಿಸಲು ಕೈಕೊಂಡ ಧೋರಣದ ಮಾತಾಯಿತು. ಇದು ನಮಗೆ ವಿಶೇಷ ಮಹತ್ವದ ವಿಷಯವಾಗಿ ತೋರುವುದಿಲ್ಲ.

## ರಕ್ಷಾಕವಚ

ಶಾಂತತೆಯ ಸರಕಾರವನ್ನು ಸ್ಥಿರಗೊಳಿಸುವ ಉಪಕ್ರಮದೊಡನೆ ತನ್ನ ಮತ್ತು ಜನತೆಯ ನಡುವೆ, ಪ್ರಜೆಗಳ ವಿರೋಧವನ್ನೆದುರಿಸುವ ಒಳಗಿನ ಒಂದು ಸಂಸ್ಥೆಯನ್ನು ನಿಲ್ಲಿಸುವ ಹಂಚಿಕೆಯನ್ನೂ ಸಾಮ್ರಾಜ್ಯವಾದವು ಮಾಡಿತು. ಪಾಳೆಗಾರರ ಅಧಿಕಾರಸ್ಥಾನಗಳಾದ ನಗರಗಳು ತನ್ನ ವಶದಲ್ಲಿರುವುದರಿಂದ ಅಲ್ಲಿಂದ ಅದಕ್ಕೆ ಯಾವ ಭಯವೂ ಇರಲಿಲ್ಲ. ಆದರೆ ಹಳ್ಳಿಗಳನ್ನು ತನ್ನ ಹಿಡಿತದಲ್ಲಿಡುವುದು ಅದಕ್ಕೆ ಅಗತ್ಯವಾಗಿತ್ತು. ಅಲ್ಲಿ ತನ್ನ ಆಳಿಕೆಯು ಗಟ್ಟಿಯಾಗಿ ಬೇರುಬಿಟ್ಟರೆ ಮುಂದೆ ತನಗೆ ಯಾವ ಹೆದರಿಕೆಯೂ ಇಲ್ಲವೆಂದು ಅದಕ್ಕೆ ಕಂಡುಬಂತು. ಆದುದರಿಂದ ಅತ್ಯಂತ ಮಹತ್ವದ ಈ ರಕ್ಷಾಕವಚವನ್ನು ಹಳ್ಳಿಗಳಲ್ಲಿಯೇ ಹುಟ್ಟಿಸಿತು. ನಾಡನ್ನು ಗೆಲ್ಲುವ ತನ್ನೊಡನೆ ಆದ ಪಾಳೆಗಾರ ಪ್ರಭುಗಳ—ದೇಶೀಯ ಅರಸರ—ಯುದ್ಧಗಳಲ್ಲಿ ಸ್ವಾಮಿನಿಷ್ಠೆಯನ್ನು ತೋರಿದ ತನಗೆ ನೆರವಾದ ಹಿಂದುಸ್ಥಾನದ ಆಗಿನ ಸಮಾಜದ ಉಚ್ಚವರ್ಗದ ಕುಳವಾರುಗಳಲ್ಲಿ ವಿಶಾಲವಾದ ಭೂಭಾಗಗಳನ್ನು ಹಂಚಿಹಾಕಿ ಲಕ್ಷೋಪಲಕ್ಷ ಒಕ್ಕಲಿಗರನ್ನು ಅವರ ಕೈಗೊಪ್ಪಿಸಿತು. ಇದರಿಂದ ದೊಡ್ಡ ದೊಡ್ಡ ಸಂಸ್ಥಾನಿಕರೂ ಜಾಗೀರದಾರರೂ ದೇಸಾಯಿ ದೇಶಪಾಂಡೆಗಳೂ ತಾಲೂಕುದಾರರೂ ತಲೆದೋರಿದರು. ಜಮೀನುದಾರರನ್ನು ಹುಟ್ಟಿಸಿದ ಈ ಕುತಂತ್ರದಿಂದ ಹಲವು ಅನುಕೂಲ ಪರಿಣಾಮಗಳಾದುವು. ಇವರು ಸಾಮ್ರಾಜ್ಯವಾದದ ನಿತಾಂತ ನಿಷ್ಠೆಯ ಹಾಗೂ ಪ್ರಭಾವಶಾಲಿಗಳಾದ ನೆರವಿಗರಾದರು. ಒಕ್ಕಲಿಗರ ರಾಜಭಕ್ತಿಯನ್ನೂ ಇವರು ಗಳಿಸಿಕೊಟ್ಟರು. ತಮಗೆ

ದೊರೆತ ವಿಶೇಷ ಸೌಕರ್ಯಗಳಿಂದಲೂ ಉನ್ನತವಾದ ಆರ್ಥಿಕ ಸ್ಥಿತಿಯಿಂದಲೂ ಇವರಿಗೆ ಗ್ರಾಮಗಳಲ್ಲಿ ಗೌರವವೂ ಪಟ್ಟಣಗಳಲ್ಲಿ ಪ್ರತಿಷ್ಠೆಯೂ ಉಂಟಾದವು. ಆದುದರಿಂದ ಸ್ವಾಮಿನಿಷ್ಠೆಯನ್ನು ತೋರಿಸುವ ಈ ಜಮೀನದಾರರ ಕೈಕೆಳಗಿನ ಆಳುಯೋಳುಗಳೂ ಒಕ್ಕಲಿಗರೂ ಯಾವ ತೊಂದರೆಯೂ ಇಲ್ಲದೆ ಅವರಂತೆಯೇ ಸಾಮ್ರಾಜ್ಯವಾದದ ಭಕ್ತರಾದರು. ಸರಕಾರವೆಂದರೆ ಎಲ್ಲೆಲ್ಲಿಯೂ ಭಯಭಕ್ತಿಗಳುಂಟಾಗುವಂತಾಯಿತು. ಒಕ್ಕಲಿಗರು ಸಾಮ್ರಾಜ್ಯವಾದವನ್ನು ಮಲಿತು ನೋಡುವಾಗ, ಅದರ ಮೇಲೆ ಏರಿ ಬರುವಾಗ ಈ ಜಮೀನುದಾರರು —ವರ್ಗದಾರರು— ರಕ್ಷಾಕವಚವಾಗಿ ನಿಲ್ಲುವಂತಾಯಿತು. ಒಕ್ಕಲಿಗರಲ್ಲಿ ಒಂದು ವೇಳೆ ಅತೃಪ್ತಿಯುಂಟಾಗಿ ಅವರು ಸಿಡಿಮಿಡಿಗೊಂಡರೆ ಅವರ ಕೋಪದ ತಾಪವೆಲ್ಲ ಈ ಜಮೀನದಾರರಿಗಾಗುತ್ತಿತ್ತಲ್ಲದೆ ಸರಕಾರಕ್ಕಲ್ಲ. ಆದುದರಿಂದ ವರ್ಗದಾರಿಕೆಯೇ ( Landlordism ) ಬ್ರಿಟಿಶರ ಆಳಿಕೆಯ ಮೊದಲಿನ ಮತ್ತು ವಿಶಾಲವಾದ ಭದ್ರ ಬುನಾದಿ.

ಸಾಮ್ರಾಜ್ಯವಾದವು ಪ್ರಬಲವಾದಂತೆ ಅದಕ್ಕೆ ಜೋತುಬೀಳುವ ಅಧಿಕಾರಿಗಳು, ಪದವೀಧರರು, ಮಧ್ಯಸ್ಥರು, ದಲ್ಲಾಲಿಗಳು ಎಂಬ ಅನೇಕ ಸಹಾಯಕರುಂಟಾದರು. ಇವರೆಲ್ಲ ಕೈವಾರಿಗಳಂತಾದರು. ಈ ಸರಕಾರದ ಬಳಗದ ಜನರೆಲ್ಲ ಸಮಾಜದ ಮೇಲಿನ ಹಂತಕ್ಕೆ ಸೇರಿ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಜನತೆಯ ಮೇಲೆ ವಿಶೇಷ ಪ್ರಭಾವವನ್ನು ನಡೆಸತೊಡಗಿದರು. ಜಮೀನದಾರರಂತೆ ಇವರೂ ಸರಕಾರದ ಸಂರಕ್ಷಕರಾದರು. ಒಂದೇ ಮಾತಿನಲ್ಲಿ ಹೇಳುವುದೆಂದರೆ ಸರಕಾರವು ತನ್ನನ್ನವಲಂಬಿಸುವ ಜನರಿಂದ ಕೂಡಿದ ಒಂದು ವರ್ಗವನ್ನು ಹುಟ್ಟಿಸಿ ಅದಕ್ಕೆ ಸಮಾಜದಲ್ಲಿ ಉನ್ನತ ಸ್ಥಾನವನ್ನುಂಟು ಮಾಡಿತು. ಈ ವರ್ಗದ ಸಹಾಯವೇ ಸಾಮ್ರಾಜ್ಯವಾದದ ಗಟ್ಟಿಮುಟ್ಟಾದ ವಿಶಾಲವಾದ ತಳಹದಿ. ಆದ್ದರಿಂದ ಬ್ರಿಟಿಶರ ಆಳಿಕೆಯು ಗಟ್ಟಿಯಾಗಿ ಬೇರು ಬಿಟ್ಟದ್ದು ದಂಡಿನ ಬಲದಿಂದಲ್ಲ; ಆದರೆ ಇಲ್ಲಿಯ ಸಮಾಜದ ಕೆಲವು ವರ್ಗಗಳ ಹಿತಸಂಬಂಧಗಳೊಡನೆ ಮಾಡಿಕೊಂಡ ಒಪ್ಪಂದದ ಬಲದಿಂದ. ಸಾಮ್ರಾಜ್ಯವಾದವು ತನ್ನನ್ನವಲಂಬಿಸಿದ ವರ್ಗದವರಿಗೆ ತನ್ನ ಬೊಕ್ಕಣದಿಂದ ಹಣ ತೆತ್ತು ಸಂಭಾವನೆಯನ್ನು ಮಾಡಲಿಲ್ಲ. ಅವರು ಸಹ ಸಾಮ್ರಾಜ್ಯವಾದದಂತೆಯೇ ಜನತೆಯಿಂದ ಗೇಣಿ-ಬಾಡಿಗೆ ಕಪ್ಪ-ಕಾಣಿಕೆಗಳ

ಮುಖಾಂತರ ತಮ್ಮ ಲಾಭವನ್ನು ಸೆಳೆಯತೊಡಗಿದರು. ದೇಶದ ನಿಜವಾದ ಉತ್ಪತ್ತಿಕಾರರನ್ನು ಸುಲಿಯಬೇಕೆಂದು ಇವರಿಬ್ಬರೂ ಮಾಡಿಕೊಂಡ ಈ ಅನ್ಯಾಯದ ಒಪ್ಪಂದವೇ ಬ್ರಿಟಿಶರ ಆಳಿಕೆಯ ಭದ್ರತೆಗೆ ಮೂಲಾಧಾರ.

ಇವರಿಬ್ಬರಲ್ಲಿ ಈ ಬಗೆಯ ಒಪ್ಪಂದವಿರುವುದು ನಿಜವಾದರೂ ಜನತೆಯಲ್ಲಿ ಮಾತ್ರ ಈ ಬಗೆಗೆ ತಕ್ಕ ಜಾಗೃತಿಯಿಲ್ಲ. ಅದಕ್ಕೆ ಇದೆಲ್ಲ ಹೇಗೆ ನಡೆದಿದೆಯೆಂಬುದು ಗೊತ್ತಿಲ್ಲ. ಅದಕ್ಕೆ ಇದೆಲ್ಲ ಒಂದು ದೊಡ್ಡ ತೊಡಕು. ಈ ಅವಲಂಬಕ ವರ್ಗಗಳ ನಿರ್ಮಾಣದಿಂದ ಜನತೆಯಲ್ಲಿ ಸಾಮ್ರಾಜ್ಯವಾದದ ಬಗೆಗೆ ವಿರೋಧಭಾವವು ಬೆಳೆಯದಂತಾಗಿದೆಯೆಂಬುದು ನಿಜ. ಇತ್ತ ವರ್ಗದಾರರೂ ಬಂಡವಾಳಗಾರರೂ ಹತ್ತಿರದ ಬಳಗದವರಾದ್ದರಿಂದ ಅವರೊಡನೆ ಕಾದಾಡಬಾರದೆಂದು ಜನತೆಗೆ ಪಾಠ ಕಲಿಸಲಾಗಿದೆ. ಅತ್ತ ಜನತೆಗಂತೂ ಈ ಸಮೀಪದ ಬಂಧುಗಳೇ ತಮ್ಮನ್ನು ಹೆಚ್ಚಾಗಿ ಸುಲಿಯುವವರೆಂದು ಮನದಟ್ಟಾಗಿದೆ. ತಮ್ಮ ಸುಲಿಗೆಗೆ ಸಾಮ್ರಾಜ್ಯವಾದವೇ ಮೂಲಕಾರಣವೆಂದು ಅದಕ್ಕೆ ಗೊತ್ತಿಲ್ಲ. ಏಕೆಂದರೆ, ಅದು ನೇರವಾಗಿ ಜನತೆಯನ್ನು ಸುಲಿಯುವುದಿಲ್ಲ. ಇತರ ಎಷ್ಟೋ ಸುಲಿಗೆಗಳಂತೆ ಇದೂ ಒಂದು ಹೀರಿಕೆಯೆಂದು ಮಾತ್ರ ಅದಕ್ಕೆ ಗೊತ್ತು. ಆದುದರಿಂದ ಅದಕ್ಕೆ ಸಾಮ್ರಾಜ್ಯವಾದದ ಮೇಲೆ ಹಲ್ಲು ಕಚ್ಚಲು ಮನಸ್ಸು ಬರುವುದಿಲ್ಲ. ಇತ್ತ ಜಿಗಣೆಗಳಂತೆ ತನ್ನ ನೆತ್ತರವನ್ನು ಹೀರುವ ಬಂಡವಾಳಗಾರ-ವರ್ಗದಾರರನ್ನು ದ್ವೇಷಿಸದೆ ಜನರು ತನ್ನವರೆಂದು ತಿಳಿಯುವುದೂ ಸಾಧ್ಯವಿಲ್ಲ.

ಆದ ಪ್ರಯುಕ್ತ ಇಂದು ಜನತೆಯ ಎದುರಿಗೆ ನಿಂತು "ಸಾಮ್ರಾಜ್ಯವಾದವು ನಿಮ್ಮನ್ನು ಹಿಂಡಿ ಹಿಪ್ಪೆ ಮಾಡಿದೆ, ನೀವು ಕಣ್ತೆರೆದು ಅದರೊಡನೆ ಹೋರಾಡಬೇಕು" ಎಂದು ಕಿರಿಚಿಕೊಂಡರೂ ಅದರ ಮನಸ್ಸಿನ ಮೇಲೆ ಪರಿಣಾಮವಾಗುವುದಿಲ್ಲ. ಅದು ಅತ್ತಿತ್ತ ಅಲುಗುವುದಿಲ್ಲ. ತಮ್ಮ ಹತ್ತಿರದ ಸುಲಿಗೆಗಾರರಾದ ಬಂಡವಾಳಗಾರರ ಮತ್ತು ಜಮೀನದಾರರ ಸಂಬಂಧವು ಆ ಬಿನ್ನಹದಲ್ಲಿ ಬರದಿದ್ದರೆ ಅದರಿಂದ ಕಾಸಿನ ಲೇಸೂ ಆಗುವುದಿಲ್ಲ. ಎರಡನೆಯ ತಂಗಡದವರನ್ನು ಹಾಗೆಯೇ ಬಿಟ್ಟು ಕೇವಲ ಸಾಮ್ರಾಜ್ಯವಾದಿಗಳ ಬಗೆಗೆ ಹಗೆತನವು ಹುಟ್ಟಿ ಬೆಳೆಯುವುದು ಸಾಧ್ಯವಿಲ್ಲ. ಏಕೆಂದರೆ, ಇಬ್ಬರ ಬಗೆಗೂ ಇರುವ ದ್ವೇಷದ ಮೂಲವು ಒಂದೇ. ಒಂದೇ ಕಾರಣಕ್ಕಾಗಿ ಪ್ರಜೆಗಳು ಇವೆ

ಕಣವು ಹತ್ತಿರದಲ್ಲಿಯೇ ಇರುವಾಗ, ಸುಲಿಗೆಗಾರರನ್ನು ಇಲ್ಲಿಯೇ ಎದುರಾಗಬೇಕು. ಇದು ಜನತೆಯ ಹೋರಾಟದ ಹೊಸ ಬಗೆ. ಇದಕ್ಕೆ ಸಾಂಪತ್ತಿಕ ಸಂಗ್ರಾಮವೆಂದು ಹೇಳಬಹುದು. ಇದರ ದಂಡನಾಯಕರಾರು ? ಈ ರಣರಂಗವನ್ನು ರಚಿಸುವುದು ಹೇಗೆ ? ಕಾಳಗದ ಕಟ್ಟಳೆ ಎಂತಹದು ? ಈ ಆರ್ಥಿಕ ಯುದ್ಧದ ಕಾರ್ಯಕ್ರಮ ಯಾವುದು ?

## ಮುಂದಿನ ಮಾರ್ಗ

ಜನತೆಯ, ಮುಖ್ಯವಾಗಿ ಒಕ್ಕಲಿಗರ ಮತ್ತು ಕೂಲಿಯಾಳುಗಳ ವರ್ಗಗಳ ಸಂಘಟನವನ್ನು ಮಾಡುವುದೇ ಈ ರಣವ್ಯೂಹವನ್ನು ಸಜ್ಜುಗೊಳಿಸುವ ಹೆದ್ದಾರಿ. ಈ ಸಂಘಗಳು ತಮ್ಮ ಮೇಲೆ ನಡೆಯುವ ಸುಲಿಗೆ-ದಬ್ಬಾಳಿಕೆಗಳನ್ನು ತಡೆಯಲು ಕೈಕೊಂಡ ಹೋರಾಟವನ್ನು ಬಲಪಡಿಸುವುವು. ಈ ಹೋರಾಟದ ಮೂಲಕ ಅವುಗಳಲ್ಲಿ ಸಾಮ್ರಾಜ್ಯವಾದದ ವಿರೋಧಭಾವದ ಎಚ್ಚರಿಕೆ ಬಿಸುವುಗಳುಂಟಾಗಿ ಕೊನೆಗೆ ಸಾಮ್ರಾಜ್ಯವಾದವು ಸೋತು ಮಣ್ಣು ಮುಕ್ಕುವುದು. ಈ ಹಾದಿಯನ್ನು ಹಿಡಿದರೆ ಮಾತ್ರ ಪ್ರಜೆಗಳೆಲ್ಲರೂ ಒಬ್ಬಳಿಗೂಡಿ ಸಾಮೂಹಿಕವಾಗಿ—ವೈಯಕ್ತಿಕವಾಗಿ ಅಲ್ಲ—ಸಾಮ್ರಾಜ್ಯವಾದವೆದುರು ಸೆಡ್ಡು ಹೊಡೆದು ನಿಲ್ಲುವರು. ಜನತೆಯೆಲ್ಲ ಕಲೆತು ಸಾಮ್ರಾಜ್ಯವಾದವನ್ನು ಮಲೆತು ನೋಡಬೇಕಾದರೆ ಇದು ಒಳಿತಾದ ಹಂಚಿಕೆ.

ಆದರೆ ಒಕ್ಕಲಿಗರ ಮತ್ತು ಕೂಲಿಕಾರರ ಕೂಟಗಳು ಸುಲಿಗೆಗಾರರಿಂದ ಅಲ್ಲಿಷ್ಟು ಇಲ್ಲಿಷ್ಟು ಲಾಭವನ್ನು ಸೆಳೆಯುವ ಅಲ್ಪ ಸಂತುಷ್ಟಿಯನ್ನು ತೋರಿಸಿದರೆ ಹಿಡಿದ ಕೆಲಸವು ಕೈಗೂಡುವುದಿಲ್ಲ. ಸುಲಿಗೆಗಾರರೊಡನೆ ಹೇಗಾದರೂ ಮಾಡಿ ಹೊಂದಿಕೊಳ್ಳುವುದಲ್ಲ ಅವುಗಳ ಗುರಿ. ಅವುಗಳ ಅರಸು ಗುರಿ, ಸುಲಿಗೆ—ದಬ್ಬಾಳಿಕೆಗಳಿಂದ ಎಂದೆಂದಿಗೂ ಬಿಡುಗಡೆಹೊಂದುವುದು. ಅವುಗಳು ಸುಧಾರಕರ ಶಾಂತಿಮಾರ್ಗವನ್ನು ತೊರೆದೇ ಕ್ರಾಂತಿಭೇರಿಯನ್ನು ಮೊಳಗಿಸಬೇಕು. ಮೇಲೆ ಮಾತ್ರ ಮೆತ್ತುವ ಕೆಲಸಕ್ಕೆ ಮನಸೋಲದೆ ದಬ್ಬಾಳಿಕೆಯ ಬುಡುಬೇರುಗಳನ್ನೇ ಕಿತ್ತುವ ಹವ್ಯಾಸವನ್ನು ಹಿಡಿಯಬೇಕು. ಅವುಗಳು ವರ್ಗಜಾಗೃತಿಯನ್ನು ಕಣ್ಣೆದುರಿಗಿಟ್ಟು ದುಡಿಯಬೇಕು. ಗುರಿಯನ್ನು ಮುಟ್ಟದೆ ಮರಳಬಾರದು. ಪೊಳ್ಳು ಒಪ್ಪಂದಗಳಿಗೆ ಮೋಹಿಸಬಾರದು.

ಇದುವೆ ನಮ್ಮೆದುರಿಗಿರುವ ಅತ್ಯಂತ ಉಪಯುಕ್ತವಾದ–ತಾಳುವ ಬಾಳುವ–ಗಟ್ಟಿಮುಟ್ಟಾದ ಕೆಲಸ. ಜನಾಂಗದ ಒಕ್ಕಟ್ಟು ಎಂಬ ಹಿರಿಮುಚ್ಚನ್ನು ನಾವು ಅಟ್ಟಬೇಕು. ಎಲ್ಲರಿಗೂ ಅದೊಂದು ದೊಡ್ಡ 'ಬೆದರು.' ಈ ಹುರುಳಿಲ್ಲದ ರಾಷ್ಟ್ರೀಯ ಐಕ್ಯವೆಂಬ ಮಾಯೆಯ ಮುಸುಕನ್ನು ಹಾರಿಸಬೇಕು. ಜನಾಂಗದ ಸ್ವಾತಂತ್ರ್ಯದ ಶುಭಸಂಕಲ್ಪಕ್ಕಾಗಿ ಒಕ್ಕಲಿಗರ ಮತ್ತು ಕೂಲಿಕಾರರ ಸಂಘಗಳನ್ನು ಕಟ್ಟಬೇಕು. ನಮ್ಮ ನಾಡಿನ ವಿಸ್ತಾರ ಮತ್ತು ಜನರ ಸಂಖ್ಯಾಬಲಗಳನ್ನು ನೋಡಿದರೆ ಉಪಯುಕ್ತ ಕಾರ್ಯಕ್ರಮದ ಅದೆಂತಹ ನಿಷ್ಠೆಯುಳ್ಳ ಪರಮ ಭಕ್ತನಿಗೂ ಈ ಕೆಲಸದಲ್ಲಿ ಬೇಸರ ಬರಲಾರದು.

ಆದರೆ ವಿಧಾಯಕ ಕಾರ್ಯಕ್ಕಾಗಿ ಹಂಬಲಿಸುವವರಿಗೆ ಇದು ಸರಿಬಾರದು. ಏಕೆಂದರೆ ಇದು ವಿಧಾಯಕ ಕಾರ್ಯಕ್ರಮಕ್ಕೆ ಸೇರಿದುದಲ್ಲ. ಸಾಮ್ಯವಾದೀಯ ವಿಧಾಯಕ ಕಾರ್ಯಕ್ರಮವೊಂದನ್ನು ತೋರಿಸಿರಿ ಎಂದು ನನಗೆ ಹಲವರು ಮೊದಲಿಸಿದ್ದಾರೆ. ವರ್ಗಕಲಹದ ಬಗೆಗೆ ಮೈಲುದ್ದ ಮಾತುಗಳನ್ನು ಗಂಟಿಗಟ್ಟಲೆ ಆಡುವುದಕ್ಕಿಂತ ಸಾಮ್ಯವಾದದ ಈಸೊಂದು ದರ್ಶನವನ್ನಾದರೂ (ನಸು ನೋಟವನ್ನಾದರೂ) ನಮಗೆ ಮೊದಲು ಮಾಡಿಸುವುದೊಳಿತೆಂದು ಕೆಲವರು ಚುಚ್ಚಿ ಮಾತಾಡಿರುವರು. ಸಾಮ್ಯವಾದದ ವಿಧಾಯಕ ಕಾರ್ಯಕ್ರಮದ ಶುಭದರ್ಶನವು ಬೇಕಿದ್ದರೆ ರಶಿಯದ ಕಡೆಗೆ ನೋಡಿಕೊಳ್ಳಬೇಕು. ಕ್ರಾಂತಿಯು ನೆರವೇರಿದ ನಂತರವೇ ನಿರ್ಮಾಣ ಕಾರ್ಯ. ಅಲ್ಲಿಯ ವರೆಗೆ ಜನತೆಯ ಹೋರಾಟವೊಂದನ್ನುಳಿದು ನಾವು ಏನನ್ನೂ ಕಟ್ಟಲಾರೆವು. ಕಟ್ಟುವ ಕೆಲಸವು ಸಾಮ್ರಾಜ್ಯವಾದವನ್ನು ಕಿತ್ತೊಗೆದ ಬಳಿಕ. ಆದುದರಿಂದ ಗ್ರಾಮೋದ್ಯೋಗ-ಖಾದಿ ಕೇಂದ್ರಗಳನ್ನು ಕಟ್ಟಬೇಕೋ ಅಥವಾ ನಾನು ಮೇಲೆ ವಿವರಿಸಿದ ಕೆಲಸಗಾರರ ಕೂಟಗಳನ್ನು ಹುಟ್ಟಿಸಬೇಕೋ ಎಂಬ ವಿಚಾರವನ್ನು ಕಾಂಗ್ರೆಸ್ ಕೆಲಸಗಾರರಿಗೇ ಬಿಟ್ಟುಕೊಡುವುದು ಲೇಸು.

ಇಂತಹ ಕೂಟಗಳಲ್ಲಿ ಒಕ್ಕಲಿಗರ ಮತ್ತು ಕೂಲಿಕಾರರ ಸಂಘಗಳೇ ಮಹತ್ವದವುಗಳೆಂದು ನಾನು ಸೂಚಿಸಿದ್ದೇನೆ. ಇವುಗಳಲ್ಲಿ ಕೂಲಿಕಾರರ ಸಂಘಗಳು ಮುಖ ಹಲವು ವರ್ಷಗಳಾದುವು. ಅವುಗಳನ್ನೆಲ್ಲ ಪೋಣಿಸಿ ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್ ಎಂಬ ಕೇಂದ್ರ ಸಂಸ್ಥೆ

ಯನ್ನು ನಿರ್ಮಿಸಲಾಗಿದೆ. ಇದನ್ನು ಬಲಪಡಿಸಿ ಬೆಳೆಸುವುದೇ ನಮ್ಮ ಮೊದಲ ಕೆಲಸ.

ಆದರೆ ಒಕ್ಕಲಿಗರ ಸಂಘಗಳು ಮಾತ್ರ ಕುಂಟುತ್ತ ಕೂರುತ್ತ ಸಾಗಿವೆ. ಇತ್ತೀಚಿನ ಆರ್ಥಿಕ ಮುಗ್ಗಟ್ಟಿನ ಮೂಲಕ ಅವುಗಳೂ ನಾಶದಲ್ಲಿ ಬಲಿ ಹೋಗುತ್ತಿವೆ. ಅವುಗಳನ್ನು ಕಟ್ಟಬೇಕು, ಕುದುರಿಸಬೇಕು. ನಮ್ಮದು ಒಕ್ಕಲುತನದ ನಾಡಾದುದರಿಂದ ನಮ್ಮಲ್ಲಿ ಅವುಗಳ ಹಬ್ಬುಗೆ ಹೆಚ್ಚಾಗಬೇಕು. ಇದು ನಮ್ಮ ಹಿರಿಗೆಲಸ.

ಈ ವರ್ಗಸಂಸ್ಥೆಗಳ ವಿಕಾಸವಾದಂತೆ ಇವುಗಳಿಗೆಲ್ಲ ಸಾಮಾನ್ಯವಾದ ಒಂದು ರಾಜಕೀಯ ಸಂಸ್ಥೆಯೂ ಉಂಟಾಗಬೇಕು. ಅದರ ಮುಖಾಂತರ ಇವುಗಳಿಗೆ ಸಾಮ್ರಾಜ್ಯವಾದದೊಡನೆ ಹೋರಾಡಲು ಎಡೆಯಾಗುವುದು. ಪ್ರತ್ಯೇಕವಾಗಿರುವ ವರ್ಗಸಂಸ್ಥೆಗಳು ಕೂಲಿಯಾಳುಗಳಿಗೂ ಒಕ್ಕಲಿಗರಿಗೂ ತಮ್ಮ ತಮ್ಮ ಆರ್ಥಿಕ-ರಾಜಕೀಯ ಸಂಗ್ರಾಮದ ಸಿದ್ಧತೆಯನ್ನು ಮಾಡಿಕೊಳ್ಳಲು ಅನುಕೂಲವಾಗುವುವು. ಇವುಗಳ ಹೋರಾಟವನ್ನು ಒಂದು ಹದದಲ್ಲಿರಿಸಿ ಅವಕ್ಕೆ ಹುರುಪನ್ನೊದಗಿಸಿ ಹಾದಿ ತೋರಿಸುವ ಒಂದು ಸಂಸ್ಥೆಯು ಅಗತ್ಯವಿದೆ. ಇದರಿಂದ ಇವುಗಳ ಕಾದಾಟವು ಸೂತ್ರಬದ್ಧವಾಗಿ ಸಾಗುವಂತಾಗುವುದು. ವರ್ಗಸಂಸ್ಥೆಗಳು ಬೇಕೇ ಬೇಕು. ಇವುಗಳಿಲ್ಲದೆ ಶ್ರಮಜೀವಿಗಳ—ಜನತೆಯ-ಸಂಘಟನವಾಗಲಿ ಜಾಗೃತಿಯಾಗಲಿ ಕೈಗೂಡಲಾರದು. ಸ್ವವರ್ಗದ ಹಿತಸಂಬಂಧಗಳ ಬಿನ್ನಾಣವು ಮೊದಲಿಗೇ ಜನತೆಯಲ್ಲಿ ಒಕ್ಕಟ್ಟಾಗಬಲ್ಲುದು. ಆದರೆ ಇದು ಸಾಲದು. ಎಲ್ಲ ವರ್ಗದವರೂ ಒಂದು ಸಾಮಾನ್ಯವಾದ ಕೇಂದ್ರಸಂಸ್ಥೆಯಲ್ಲಿ ಸೇರಬೇಕು. ನಮ್ಮ ಆರ್ಥಿಕ-ರಾಜಕೀಯ ಬಿಡುಗಡೆಗಾಗಿ ಅವರೆಲ್ಲರೂ ಹೆಗಲಿಗೆ ಹೆಗಲು ಹಚ್ಚಿ ಒಂದೆಡೆಯಲ್ಲಿ ಸಂಘಟಿತರಾಗಬೇಕು.

ಭಾರತದ ರಾಷ್ಟ್ರೀಯ ಮಹಾಸಭೆಯು-ಕಾಂಗ್ರೆಸ್ಸು--ಇಂಥ ಕೇಂದ್ರ ಸಂಸ್ಥೆಯಾಗಲಾರದೋ ಎಂದು ಯಾರಾದರೂ ಕೇಳಬಹುದು. ಆಗಬಹುದು—ಆಗಲಿಕ್ಕಿಲ್ಲ. ಈಗಿನ ರೂಪ-ರಚನೆಯಲ್ಲಿ ಕಾಂಗ್ರೆಸ್ಸು ಇಂಥ ಸಂಸ್ಥೆಯಲ್ಲ. ಇಂಥ ಕೇಂದ್ರ ಸಂಸ್ಥೆಗೆ ಬೇಕಾದ ರಚನೆಯಾಗಲಿ ಕಾರ್ಯಕ್ರಮವಾಗಲಿ ಅದರಲ್ಲಿ ತೋರುವುದಿಲ್ಲ. ಅದು ದೇಶದ ಎಲ್ಲ ವರ್ಗಗಳ ಪ್ರಾತಿನಿಧಿಕ

ಸಂಸ್ಥೆಯೆಂದು ತಿಳಿಯಲಾಗಿದೆ. ಅದರಲ್ಲಿ ಬಂಡವಾಳಗಾರರೂ ಇದ್ದಾರೆ, ಬಡವರೂ ಇದ್ದಾರೆ; ಜಮೀನ್ದಾರರಂತೆ ( Land-lords ) ಒಕ್ಕಲುಗಳೂ ಇದ್ದಾರೆ; ಉದ್ಯಮಗಳ ಒಡೆಯರಂತೆ ಆಳುಗಳೂ ಇದ್ದಾರೆ. ಹೀಗೆ ಎಲ್ಲರೂ ಸೇರಿದ ಒಂದು ಸಂಸ್ಥೆಯೆಂದೇನಾಗುವುದೆಂಬುದನ್ನು ನಾನು ಮುಂಚೆಯೇ ತಿಳಿಸಿದ್ದೇನೆ. ಉಚ್ಚ ಮತ್ತು ನೀಚ ವರ್ಗಗಳ ಜನರಿಂದ ಕೂಡಿದ ಸಂಸ್ಥೆಯು ಯಾವಾಗಲೂ ಮುಖ್ಯವಾಗಿ ಉಚ್ಚವರ್ಗದವರ ಹಿತಕ್ಕಾಗಿಯೇ ದುಡಿಯುವುದೆಂಬುದರಲ್ಲಿ ಸಂದೇಹವಿಲ್ಲ. ಇಂಥ ಒಂದೇ ಸಂಸ್ಥೆಯು ತನ್ನೊಳಗಿನ ಎರಡೂ ವರ್ಗಗಳ ಹಿತಸಂಬಂಧಗಳ ನಿಷ್ಪಕ್ಷ ಪ್ರತಿನಿಧಿಯಾಗಿ ನಿಲ್ಲಬಲ್ಲುದೆಂದು ನಂಬುವುದು ಹಾನಿಕಾರಿಯಾದ ಮುಗ್ಧತನ; ಶುದ್ಧ ಆತ್ಮವಂಚನೆ.

ಆದುದರಿಂದ ಕಾಂಗ್ರೆಸ್ಸು ಜನತೆಯ (Masses) ಸಂಸ್ಥೆಯಾಗಬೇಕಾಗಿದ್ದರೆ ತಾನು ಬಂಡವಾಳಗಾರರ ಪ್ರತಿನಿಧಿಯಲ್ಲವೆಂದು ಅದು ಬಹಿರಂಗವಾಗಿ ಸಾರಬೇಕು. ಸಾಮ್ರಾಜ್ಯವಾದಿಗಳಷ್ಟೇ ದೇಶೀಯ ಬಂಡವಾಳಗಾರರನ್ನೂ ತಾನು ಪ್ರತಿಭಟಿಸುವುದಾಗಿ ಹೇಳಬೇಕು. ಹೀಗೆ ಮಾಡಿದರೆ ಕಾಂಗ್ರೆಸ್ಸಿನ ರಾಷ್ಟ್ರೀಯತೆಯು ನಿರ್ನಾಮವಾಗುವುದೆಂದು ಜನರ ನಂಬುಗೆ. ಆದರೆ ಹಾಗೇನೂ ಆಗುವುದಿಲ್ಲ. ಕಾಂಗ್ರೆಸ್ಸು "ಬಂಡವಾಳಗಾರರ ಸಂಸ್ಥೆ" ಎಂಬ ಮಾತು ಅಡಗಿ ಅದು ನಿಜವಾಗಿಯೂ ಜನತೆಯ ಸಂಸ್ಥೆಯಾಗುವುದು. ಅದರ ಗೌರವಕ್ಕೆ ಕೆಲವು ಕಾಲ ಕೊರತೆಯಾಗಬಹುದಾದರೂ ಪ್ರಗತಿಗೆ ಪುಟ ಕೊಟ್ಟಂತಾಗುವುದೆಂಬುದರಲ್ಲಿ ಅನುಮಾನವಿಲ್ಲ.

ಕಾಂಗ್ರೆಸ್ಸಿನ ಘಟನೆಯು ಸದ್ಯದ ಕಾಂಗ್ರೆಸ್ ಕಮಿಟಿಗಳಿಗೆ ಪ್ರಾತಿನಿಧಿಕ ಸ್ವರೂಪವನ್ನು ಕೊಡುವುದಿಲ್ಲ. ಬಹುಶಃವಾದರೆ ಈ ಕಮಿಟಿಗಳು ಮಾಡಿದ ಕಾಂಗ್ರೆಸ್ ಸದಸ್ಯರಿಗೆ ಮಾತ್ರ ಅದರಲ್ಲಿ ಪ್ರಾತಿನಿಧ್ಯವಿದೆ. ಈ ಕೃತಕ ವ್ಯವಸ್ಥೆಯು ಬದಲಾಯಿಸದ ಹೊರತು ಕಾಂಗ್ರೆಸ್ಸು ಜನತೆಯ ಸಂಸ್ಥೆಯಾಗುವುದು ಕಷ್ಟ. ಅದು ನಿಜವಾಗಿಯೂ ಜನತೆಯ ಪ್ರಾತಿನಿಧಿಕ ಸಂಸ್ಥೆಯಾಗಬೇಕಾದರೆ ಜನತೆಯ ಸಂಘಸಂಸ್ಥೆಗಳ ಪ್ರತಿನಿಧಿಗಳು ಅದರಲ್ಲಿ ಸೇರಬೇಕು. ಅಥವಾ ತಳದಿಂದ ಮೇಲಿನ ವರೆಗೆ ಅದಕ್ಕೊಂದು ಸೋವಿಯೆಟ್ ಘಟನೆಯ ಸ್ವರೂಪವನ್ನು ಕೊಡಬೇಕು. ಜಿಲ್ಲೆಯ ಕಾಂಗ್ರೆಸ್ ಕಮಿಟಿಯು ಆ ಜಿಲ್ಲೆಯೊಳಗಿನ

ಕೃಷೀವಲರ ಸಂಘ, ಕೂಲಿಕಾರರ ಸಂಘ ಮತ್ತು ಸಾಮ್ರಾಜ್ಯವಾದದ ವಿರುದ್ಧ ಹೋರಾಡುವ ವರ್ಗಗಳ ಕರ್ಮಸಂಘಗಳೆಲ್ಲವನ್ನೂ (Functional Organisations) ಒಳಗೊಂಡ ಅವುಗಳ ಪ್ರತಿನಿಧಿಯಾಗಿರಬೇಕು. ಇದಕ್ಕಿಂತ ಮೇಲಿನ ಸಂಸ್ಥೆಗಳನ್ನು ಪರ್ಯಾಯದಿಂದಾಗಲಿ ಪ್ರತ್ಯಕ್ಷವಾಗಿಯಾಗಲಿ ಅಥವಾ ಮಿಶ್ರಪದ್ಧತಿಯಿಂದಾಗಲಿ ಆರಿಸಬಹುದು. ಈ ಪ್ರಕಾರದ ನೂತನ ವ್ಯವಸ್ಥೆಯಾಗುವ ವರೆಗೆ ಸದ್ಯದ ವೈಯಕ್ತಿಕ ಸದಸ್ಯತ್ವದೊಡನೆ ಈ ಹೊಸ ಬಗೆಯ ಏರ್ಪಾಟನ್ನೂ ಬೆರಸಿ ಕೆಲಸ ನಡೆಸುವುದೊಳಿತು.

ಒಟ್ಟಿನ ಮೇಲೆ, ಕಾಂಗ್ರೆಸ್ಸಿನ ಸದ್ಯದ ಕಾರ್ಯಕ್ರಮ ಮತ್ತು ಅದರ ಉದ್ದೇಶನಿವೇದನಗಳಿಂದ ಕಾಂಗ್ರೆಸ್ಸು ಜನತೆಯ ಪ್ರತಿನಿಧಿಯೆಂದು ಹೇಳಲಿಕ್ಕೆ ಬಾರದು. ಹಾಗಾಗಬೇಕಾದರೆ ಅದರ ಉದ್ದೇಶಗಳ ಪಟ್ಟಿಯಲ್ಲಿ ತೀರ ಕಡಿಮೆಯೆಂದರೂ ಈ ಕೆಳಗಿನ ಸಂಗತಿಗಳಿರಲೇಬೇಕು.

೧. ಸಂಪೂರ್ಣ ಸ್ವಾತಂತ್ರ್ಯ (ಬ್ರಿಟಿಶ್ ಸಾಮ್ರಾಜ್ಯದಿಂದ ಬೇರೆಯಾಗುವ ಅರ್ಥದಲ್ಲಿ).

೨. ರಾಷ್ಟ್ರದ ರಾಜಕೀಯ ಮತ್ತು ಆರ್ಥಿಕ ಪ್ರಭುತ್ವವೆಲ್ಲ ಶ್ರಮಜೀವಿಗಳ (ಮಿದುಳಿನ ಕೆಲಸಗಾರರೂ ಇವರಲ್ಲಿ ಸೇರುವರು) ಕೈಗೆ ಹೋಗಬೇಕು.

೩. ಕುಸೀದಾಗಾರಗಳು ಖನಿಗಳು ಮುಂತಾದ ಜ್ಯೇಷ್ಠ ಮತ್ತು ಜೀವಾಳದ ಎಲ್ಲ ಉದ್ಯಮಗಳ ರಾಷ್ಟ್ರೀಕರಣವಾಗಬೇಕು.

೪. ಎಲ್ಲ ಬಗೆಯ ವರ್ಗದಾರಿಕೆ(Land-lordism)ಯನ್ನೂ ತಳ್ಳಿಹಾಕಬೇಕು.

೫. ಸಾಗುವಳಿ ಮಾಡುವ ಒಕ್ಕಲಿಗರಿಗೆಲ್ಲ ಹೊಲಗದ್ದೆಗಳು ಸಿಕ್ಕಬೇಕು.

೬. ಒಕ್ಕಲಿಗರ ಮತ್ತು ಕೂಲಿಕಾರರ ಸಾಲಗಳ ಸಂದಾಯವಾಗಬೇಕು.

ತನ್ನ ಸದಸ್ಯರ ಮೂಲಕ ಸಾಮಾನ್ಯ ಜನತೆಯ ಸಂಘಗಳ ಬೆಳವಣಿಗೆಯನ್ನು ಮಾಡುವುದೇ ಕಾಂಗ್ರೆಸ್ಸಿನ ಕಾರ್ಯಕ್ರಮದ ಪ್ರಮುಖ ಅಂಗವಾಗಬೇಕು. ಕಾಂಗ್ರೆಸ್ಸು ನಿಜವಾಗಿಯೂ ಯೋಗ್ಯವಾದ ಸಾಮ್ರಾಜ್ಯವಿರೋಧಕ

ಸಂಸ್ಥೆಯಾಗಬೇಕಾದರೆ ಕೊನೆಗೆ ಈ ಮೂರು ಸಂಗತಿಗಳನ್ನಾದರೂ ನಡೆಸಬೇಕು. ಇವುಗಳನ್ನು ಬಿಟ್ಟರೆ ಉಪಯೋಗವಿಲ್ಲ. ಅಲ್ಲಿಯವರೆಗೆ ಕಾಂಗ್ರೆಸ್ಸಿಗೆ ಸಾಮ್ರಾಜ್ಯವಿರೋಧಕ ಸಂಸ್ಥೆಯೆಂದು ಹೇಳಲಿಕ್ಕೆ ಬಾರದು.

ನಾವು ಮೊದಲು ಕಾಂಗ್ರೆಸ್ಸಿನ ಬಗೆಗೆ "ಆಗಬಹುದು—ಆಗಲಿಕ್ಕಿಲ್ಲ" ಎಂದು ಹೇಳಲಿಕ್ಕೆ ಕಾರಣವಿಷ್ಟೆ: ಸದ್ಯದ ಅದರ ರಚನೆಯ ಮತ್ತು ಕಾರ್ಯಕ್ರಮದ ಮೇರೆಗೆ ಕಾಂಗ್ರೆಸ್ಸು ಅಂಥ ಸಂಸ್ಥೆಯಲ್ಲ. ಆದರೂ ಅದರಲ್ಲಿ ಒಕ್ಕಲಿಗ ಕೂಲಿಕಾರರಂಥ ಸಾಮ್ರಾಜ್ಯವಿರೋಧಕ ಹೇತುಗಳುಳ್ಳ ಕೆಲವು ಸಾಮಾನ್ಯ ಜನರೂ ಇರುವುದರಿಂದ ಅದು ಅಂಥ ಸಂಸ್ಥೆಯಾಗಿ ಮುಂದಕ್ಕೆ ಬೆಳೆಯುವ ಸಂಭವವಿದೆ. ಕಾಂಗ್ರೆಸ್ಸಿನ ಸಂಸರ್ಗದಲ್ಲಿರುವ ಈ ಸಾಮಾನ್ಯ ಜನರಿಗೆ ವಸ್ತುಸ್ಥಿತಿಯ ಜ್ಞಾನವಾಯಿತೆಂದರೆ ಅವರು ಕೂಡಲೆ ಸಾಮ್ರಾಜ್ಯವಾದವನ್ನು ಹೆಚ್ಚು ಚಟುವಟಿಕೆಯಿಂದಲೂ ಜೋರಿನಿಂದಲೂ ವಿರೋಧಿಸುವರು.

ಕಾಂಗ್ರೆಸ್ಸು ಸಾಮ್ರಾಜ್ಯವಿರೋಧಕ ಸಂಸ್ಥೆಯಾಗಲು ನಾವು ಸೂಚಿಸಿದ ಸಂಗತಿಗಳು ಮೂಲಗ್ರಾಹಿಯಾಗಿರುತ್ತವೆ. ಅವುಗಳಿಂದ ಪರಿವರ್ತನವಾಗುವುದರಲ್ಲಿ ವಿಚ್ಛೇದವೂ ಆಗಬಹುದು. ಸಾಮ್ರಾಜ್ಯವಿರೋಧಕ ಅಂಶಗಳ ಪೂರ್ಣ ಪರಿವರ್ತನವಾಗಲೇಬೇಕು. ಆದರೆ ಬಲ್ಲಿದರ (ಧನಿಕರ) ಪರಿವರ್ತನವಾಗುವುದು ದುಸ್ತರ. ಮೊದಲಿನಿಂದ ಸಂಗಡದಲ್ಲಿ ಸಹ ಹಲವರು, ಸೊತ್ತುಳ್ಳವರು ಉಪದೇಶಿಸುವ ಕಾರ್ಯಕ್ರಮಕ್ಕೆ ಅಂಟಿಕೊಂಡಿರುವ ಸಂಭವವಿದೆ. ಬೇರೆಯವರ ಉದ್ದೇಶವಿಂತಲ್ಲವಾದರೂ ಕೇವಲ ಜನಾಂಗದ ಒಕ್ಕಟ್ಟಿಗೋಸ್ಕರ ಅವರು ಹಾಗೆ ಮಾಡುವುದು ಖಂಡಿತ. ಎಂದ ಬಳಿಕ ಕಾಂಗ್ರೆಸ್ಸಿನ ಧನಿಕವರ್ಗದೊಡನೆ ಮತ್ತು ಅದಕ್ಕೆ ಹೊಂದಿಕೊಂಡವರೊಡನೆ ಜಗಳವು ತಪ್ಪಿದ್ದಲ್ಲ. ಆ ವರ್ಗದವರಿಂದ ಬೇರೆಯಾಗುವ ಆಗತ್ಯವೂ ತೋರಬಹುದು. ಈ ವಿಯೋಗಕ್ಕಾಗಿ ಆ ತರದ ಗಡಬಡಿಯನ್ನು ಮಾಡಬಾರದು. ಆದರೆ ಮೂರ್ಖತನದ ಹೆದರಿಕೆಯಿಂದ ಸುಮ್ಮನೆ ಹೊತ್ತುಗಳೆಯಲೂ ಕೂಡದು.

ಕಾಂಗ್ರೆಸ್ಸಿನೊಳಗಿನ ಧನಿಕ ವರ್ಗದ ಹಲವು ಸಾಮಾನ್ಯ ಜನರು ಬಂಡವಾಳಗಾರಿಕೆಯ ವಿಚಾರಪಥದಿಂದ ಅಗಲಿರುವರೆಂಬುದು ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ರಚನೆಯಿಂದ ಕಂಡುಬರುತ್ತದೆ. ಈ ಸಾಮ್ಯವಾದದ ಪಕ್ಷ

ದವರು ಕಾಂಗ್ರೆಸ್ಸನ್ನು ಬಿಟ್ಟು ಹೋಗಲಿಲ್ಲೆಂದು ಟೀಕಿಸುತ್ತಿದ್ದಾರೆ. ಆದುದರಿಂದಲೇ ಇವರು ಫ್ಯಾಸಿಸ್ಟರುವರೆಂದು ಕೆಲವರ ಅಭಿಪ್ರಾಯ. ಈ ಸಾಮ್ಯವಾದೀ ಪಕ್ಷದವರು ಕಾಂಗ್ರೆಸ್ಸಿನೊಳಗುಳಿದು ಸಾಮ್ರಾಜ್ಯವಿರೋಧಕ ಪಕ್ಷದ ವಿರುದ್ಧ ಬಂಡವಾಳಗಾರಿಕೆಯನ್ನು ಎತ್ತಿ ಕಟ್ಟಿ ಅವರ ಹಿಡಿತವನ್ನು ಬಿಗಿ ಮಾಡುತ್ತಿದ್ದಾರೆಂದು ಹೇಳುತ್ತಾರೆ. ನಿಜಸ್ಥಿತಿಗೆ ವಿರುದ್ಧವಾದ ಇದಕ್ಕಿಂತ ಹೆಚ್ಚಿನ ಸಂಗತಿ ಇನ್ನೊಂದಿರಲಾರದು. ಕಾಂಗ್ರೆಸ್ಸಿನ ಹೊರಗಿನ ಹಾಗೂ ಒಳಗಿನ ಪ್ರಚಾರಕಾರ್ಯದಿಂದ ಬಂಡವಾಳಗಾರಿಕೆಯ ಈ ಹಿಡಿತವನ್ನು ಸಡಿಲಿಸುವುದೇ ಈ ಪಕ್ಷದವರು ಕಾಂಗ್ರೆಸ್ಸಿನೊಳಗಿರುವ ಮುಖ್ಯ ಉದ್ದೇಶ. ಇವರು ಕಾಂಗ್ರೆಸ್ಸನ್ನು ಬಿಟ್ಟರೆ ಅದರೊಳಗಿನ ಸಾಮಾನ್ಯ ಜನತೆಯಿಂದಲೂ ಜಾಗೃತ ವರ್ಗದಿಂದಲೂ ಅಗಲಿದಂತಾಗುತ್ತಿತ್ತು. ಅದಲ್ಲದೆ ಕಾಂಗ್ರೆಸ್ಸು ಹೆಚ್ಚಾಗಿ ಬಂಡವಾಳಗಾರರ ಕಾರ್ಯಕ್ರಮವನ್ನೇ ಅನುಸರಿಸುತ್ತಿತ್ತು. ಈ ವಿಷಯವು ಇಷ್ಟು ಸ್ಪಷ್ಟವಾಗಿರುವುದರಿಂದ ಇವರ ಬಗೆಗೆ ಅನುಮಾನಪಡುವುದೇ ಆಶ್ಚರ್ಯ. ಕಾಂಗ್ರೆಸ್ಸಿನಿಂದ ದೂರ ಉಳಿದು ಅದರೊಳಗಿನ ಸಾಮಾನ್ಯ ಜನತೆ ಮತ್ತು ಸಾಮ್ರಾಜ್ಯವಿರೋಧಕ ಚಳವಳಿ ಇವುಗಳನ್ನು ಕುರಿತು ಹರಟುವವರು ತಮ್ಮ ಹೊಣೆಗಾರಿಕೆಯನ್ನು ತಪ್ಪಿಸಿಕೊಳ್ಳುವವರು. ಆದರೂ ಅಂತರ್ ರಾಷ್ಟ್ರೀಯ ಸಂಘವಾದಿಗಳ ಕಾಂಗ್ರೆಸ್ಸಿನವರು ಶ್ರೀ. ಆರ್. ಪಾಲ್ಮೆದತ್ತರು ಪಟ್ಟ ಅಭಿಪ್ರಾಯವು ಆನಂದದಾಯಕವಾಗಿರುತ್ತದೆ. ಕಾಂಗ್ರೆಸ್ ಸಾಮ್ಯವಾದೀಪಕ್ಷವು ಫ್ಯಾಸಿಸ್ಟ ಪಕ್ಷವೆಂದು ತಾನು ಹೇಳಿದುದು ತಪ್ಪಾಯಿತೆಂದು ಒಪ್ಪಿಕೊಳ್ಳುವುದಲ್ಲದೆ ಹಾಗೆ ಹಿಂದುಮುಂದಿನ ವಿಚಾರ ಮಾಡದೆ ಮನಬಂದಂತೆ ಆಡಿಕೊಳ್ಳುವುದು ಸರಿಯಲ್ಲೆಂದು ನೆರೆದವರಿಗೆ ಎಚ್ಚರ ಕೊಟ್ಟರು. ಸದ್ಯದ ಪರಿಸ್ಥಿತಿಯ ಅವಶ್ಯಕತೆಗಳನ್ನು ಸರಿಯಾಗಿ ಗುರ್ತಿಸಲು ಇದೀಗ ಪ್ರಾರಂಭವಾಯಿತೆಂದು ಹೇಳಬಹುದು. ಇನ್ನು ಮುಂದಾದರೂ ಕಾಂಗ್ರೆಸ್ ಸಾಮ್ಯವಾದೀಪಕ್ಷದವರ ಬಗೆಗೆ ತಪ್ಪು ತಿಳುವಳಿಕೆಯಾಗದಿರಲೆಂದು ಆಶಿಸಬೇಕಾಗಿದೆ.

ಸಾಮ್ರಾಜ್ಯವಿರೋಧಕ ಚಳವಳದ ಸಂಬಂಧದಲ್ಲಿ ಇನ್ನೊಂದೇ ವಿಷಯದ ಆಲೋಚನೆ ಮಾಡುವುದುಳಿಯಿತು. ಇದರ ಮುಂದಾಳುಗಳು ಯಾರು? ಪಾಳೆಯಗಾರರ ಮುಂದಾಳುತನದ ಕಾಲವೊಂದು ಸಂದುಹೋಗಿರುವುದನ್ನು

ನಾವು ಕಂಡಿರುತ್ತೇವೆ. ಆ ಮೇಲೆ ಬಂಡವಾಳಗಾರರ ನೇತೃತ್ವದಲ್ಲಿ ರಾಷ್ಟ್ರೀಯ ಸುಧಾರಣಾವಾದದ ಚಳವಳಕ್ಕೆ ಮೊದಲಾಯಿತು. ಇನ್ನು ಮುಂದಿನ ಮುಂದಾಳುತನದ ಲಕ್ಷಣ ಯಾವುದು? ಸುಲಿಗೆಯಿಂದ ಸಂಪೂರ್ಣ ಬಿಡುಗಡೆಯನ್ನು ಪಡೆಯುವುದೇ ಸಾಮ್ರಾಜ್ಯವಿರೋಧಕ ಚಳವಳದ ಧ್ಯೇಯವಿರುವುದಾದರೆ, ಉತ್ಪಾದನ ಸಾಧನಗಳ ಬೆಳವಣಿಗೆಯ ಸದ್ಯದ ಸ್ಥಿತಿಯಲ್ಲಿ ಸುಲಿಗೆಯರಿಯದ ಸಮಾಜದ ಕೇಂದ್ರವಾಗಬಹುದಾದ ವರ್ಗದವರೇ ನಾಯಕರಾಗುವ ಸಂಭವವಿದೆ. ಸದ್ಯದ ಪರಿಸ್ಥಿತಿಯಲ್ಲಿ ಸುಲಿಗೆಯನ್ನು ಉತ್ಪಾದನ ಸಾಧನಗಳ ಒಡೆತನಗಳಿಂದಲೇ ನಿಲ್ಲಿಸಬಹುದಾಗಿದೆ. ಇಂತಹ ಒಡೆತನಕ್ಕಾಗಿ ದುಡಿಯುವ ವರ್ಗದವರು ಮಾತ್ರ ಬುದ್ಧಿಪೂರ್ವಕವಾಗಿ ಹೋರಾಡುವವರು. ಈಗಾಗಲೆ ತಾವು ಸಮಾಜದೃಷ್ಟಿಯಿಂದಲೇ ಉತ್ಪತ್ತಿಯನ್ನು ಮಾಡುತ್ತಿರುವೆವೆಂಬ ವಿಚಾರವು ಅವರನ್ನು ಈ ಬೇಡಿಕೆಗಾಗಿ ಮತ್ತಷ್ಟು ಹುರುಪಿನಿಂದ ಹೋರಾಡಲು ಹಚ್ಚುವುದು. ಈ ಬೇಡಿಕೆಗಾಗಿ ಆಗ್ರಹ ಹಿಡಿಯುವುದಲ್ಲದೆ ನೂತನ ಸಮಾಜರಚನೆಯಲ್ಲಿ ಅವರು ಪ್ರಧಾನ ಪಾತ್ರವನ್ನೂ ವಹಿಸುವರು. ಜನತೆಯು ಪಡೆಯಬೇಕಾದ ಆದರ್ಶವು ಕೂಲಿಕಾರರ ಕೈಯಲ್ಲಿಯೇ ಇರುವುದೊಳಿತು. ಸಾಮ್ರಾಜ್ಯವಿರೋಧಕ ಚಳವಳದ ಬೆಳವಣಿಗೆಯ ಮೇಲೆ ಮಾಡುವ ತಮ್ಮ ವಿಚಾರ ಪ್ರಭಾವದಿಂದಲೇ ಅವರ ಮುಂದಾಳುತನವು ಹೆಚ್ಚಾಗಿ ಕೆಲಸ ನಡೆಸುವುದು.

ಈ ಪ್ರಸ್ತಾಪವನ್ನು ಮುಗಿಸುವ ಮುಂಚೆ ರಾಜಕೀಯ ಕೆಲಸಗಾರರು "ತಾವೆಂದರೆ ವರ್ಗಾತೀತರು. ಮಿಕ್ಕ ವರ್ಗದವರು ತಮ್ಮ ರಾಜಕೀಯ ಚತುರಂಗದಾಟದಲ್ಲಿ ಬರೀ ಪೇದೆಗಳು (Pawns)" ಎಂದು ಬಗೆಯುವ ಸಂಗತಿಯನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಬೇಕಾಗಿದೆ. ವಸ್ತುಸ್ಥಿತಿಯು ಮಾತ್ರ ತೀರ ಭಿನ್ನವಾಗಿದೆ. ರಾಜಕೀಯ ಕಾರ್ಯಕರ್ತರು ಕೇವಲ ವ್ಯಕ್ತಿಗಳಲ್ಲ. ಅಲ್ಪಸ್ವಲ್ಪ ಅಭಿಪ್ರಾಯಭೇದವಿದ್ದರೂ ಇವರನ್ನೆಲ್ಲ ಹಲವು ಪಂಗಡಗಳಲ್ಲಿ ವಿಂಗಡಿಸಬಹುದು. ನಾವೆಲ್ಲರೂ ನಮ್ಮ ನಮ್ಮ ಅಭಿಪ್ರಾಯಗಳನ್ನು ಸ್ವತಂತ್ರವಾಗಿಯೇ ಉಂಟುಮಾಡಿಕೊಂಡಿದ್ದೇವೆಂದು ನಮ್ಮ ಕಲ್ಪನೆ. ವ್ಯಕ್ತಿಗಳನ್ನು ಮಿಕ್ಕಿ ಮೀರಿ ನಿಂತ ಕೆಲವು ವಿಷಯಗಳಿಂದಲೇ ನಮ್ಮ ಅಭಿಪ್ರಾಯಗಳ ರಚನೆಯಾಗುತ್ತದೆಂಬುದು ಅನುಭವದ ಮಾತು. ಸಾಮಾಜಿಕ

ವರ್ಗಗಳೇ ಈ "ಕೆಲವು ವಿಷಯಗಳು". ರಾಜಕೀಯ ಕೆಲಸಗಾರರನ್ನು ವರ್ಗೀಕರಿಸಿದರೆ ಕೆಲವು ಪಕ್ಷಗಳಾಗುತ್ತವೆ. ಆ ಪಕ್ಷಗಳೆಲ್ಲ ಬೇರೆ ಬೇರೆ ಸಾಮಾಜಿಕ ವರ್ಗಗಳ ಅಥವಾ ಪಂಗಡಗಳ ಹಿತಸಂಬಂಧಗಳೊಡನೆ ಬೆರೆತು ಹೋಗುತ್ತವೆ. ೧೮೮೫ರಲ್ಲಿ ರಾಷ್ಟ್ರೀಯ ಮಹಾಸಭೆ (ಕಾಂಗ್ರೆಸ್) ಯನ್ನು ಸ್ಥಾಪಿಸಿದ ೭೨ ಸದ್ಗೃಹಸ್ಥರು ಒಂದೇ ಮನಸ್ಸಿನವರಾಗಿದ್ದರು. ಏಕೆಂದರೆ, ಅವರೆಲ್ಲರೂ ತಾವು ಹೊರಪಡಿಸುವ ಒಂದೇ ಬಗೆಯ ಹಿತಸಂಬಂಧಗಳ ಪ್ರತಿನಿಧಿಗಳಾಗಿದ್ದರು.

ಈ ವಿಷಯವನ್ನು ಜನರ ಮನಸ್ಸಿನಲ್ಲಿ ಹೊಗಿಸುವುದು ತುಂಬ ಕಷ್ಟ. ಪ್ರತಿಯೊಬ್ಬನಿಗೂ ಸ್ವಾಭಿಮಾನವೆಂಬುದಿದೆ. ತನ್ನ ವಿಚಾರಗಳ ಮೇಲೆ ಆಗುವ ಹೊರಗಿನ ಅಪ್ಪಣೆಗಳ ದಬ್ಬಾಳಿಕೆಯನ್ನು ಆತನು ತಾಳಲಾರನು. ಆದರೂ ಪರಿಸ್ಥಿತಿಯ ಪ್ರಭಾವವು ಇದ್ದೇ ಇದೆಯೆಂಬುದನ್ನು ಅಲ್ಲಗಳೆಯಲಾಗದು. ನಾವು ಸಾಮಾಜಿಕ ಮತ್ತು ರಾಜಕೀಯ ಚಳವಳಿಗಳನ್ನು ವ್ಯಕ್ತಿಗಳ ದೃಷ್ಟಿಯಿಂದ ಅರ್ಥ ಮಾಡಿಕೊಳ್ಳಲು ಕಲಿತಿರುವೆವು. ಆ ವ್ಯಕ್ತಿಗಳ ಹಿನ್ನೆಲೆಯನ್ನು ನಾವು ಗಮನಕ್ಕೆ ತರುವುದು ಕಡಿಮೆ. ಹಿನ್ನೆಲೆಯಲ್ಲಿರುವ ಸಾಮಾಜಿಕ ಪರಿಸ್ಥಿತಿಯ ಒತ್ತಡವೇ (Pressure) ನಮ್ಮನ್ನು ಹುರಿದುಂಬಿಸಿ ಮುಂದಕ್ಕೆ ದಬ್ಬುತ್ತಿದೆ. ನಮ್ಮ ರಾಜಕೀಯ ಕಾರ್ಯಕ್ರಮ, ಧರ್ಮ, ತತ್ತ್ವಜ್ಞಾನಗಳ ರೂಪರೇಷೆಗಳನ್ನೂ ಅದುವೇ ನಿರ್ಣಯಿಸುವುದು. ವ್ಯಕ್ತಿಗಳಿಗೆ ಬೆಲೆ ಇಲ್ಲವೆಂದಲ್ಲ. ಉಂಟು—ಕೆಲವರಿಗೆ ತುಂಬಾ ಉಂಟು—ಆದರೆ ಆ ಸಾಮಾಜಿಕ ಶಕ್ತಿಗಳ ಪ್ರತಿನಿಧಿಗಳಾಗಿ ಅವುಗಳನ್ನು ನೆರವೇರಿಸುವವರೆಂದೇ ಇವರಿಗೆ ಸ್ಥಾನಮಾನಗಳು. ಇವರೂ ಸ್ವತಂತ್ರರಲ್ಲ. ಆ ಶಕ್ತಿಗಳ ಅಂಶಮಾತ್ರರು. ಒಮ್ಮೊಮ್ಮೆ ಇವರೂ ಆ ಶಕ್ತಿಗಳ ನಿಯಂತ್ರಣವನ್ನು ಮಾಡುವರು.

ಒಂದು ಸಮಾಜದ ಪರಿಸ್ಥಿತಿಯು ಅನುಕೂಲವುಳ್ಳದ್ದಾಗದಿದ್ದರೆ ಅದೆಂತಹ ಪ್ರತಿಭಾಶಾಲಿಯಾದ ಮಾನವನಿಂದಲೂ ಅಲ್ಲಿ ಸಾಮಾಜಿಕ ಚಳವಳವೊಂದನ್ನು ಹೂಡಲಿಕ್ಕಾಗದು. ಪರಿಸ್ಥಿತಿಯು ಪರಿಪಕ್ವವಾಗಿರುವಾಗಂತೂ ಅಂತಹ ಚಳವಳವು ತನ್ನಿಂದ ತಾನೆ ಉಂಟಾಗುತ್ತದಲ್ಲದೆ ಅದರಲ್ಲಿ ಮಾನವನ ಕೈಗೆಲಸವು ತೀರ ಕಡಿಮೆ. ಅದರ ಜಯಾಪಜಯಗಳಿಗೆ ಆತನ ವ್ಯಕ್ತಿತ್ವವು ಬಹುಮಟ್ಟಿಗೆ ಕಾರಣವಾಗಬಹುದಾದರೂ ಅದರ ಸ್ವಭಾವಾದರ್ಶಗಳು ಮಾತ್ರ

ಆಗಿನ ಸಾಮಾಜಿಕ ಪರಿಸ್ಥಿತಿಯನ್ನೇ ಹೊಂದಿಕೊಂಡು ರೂಪುಗೊಳ್ಳುತ್ತವೆ. ಹಿಡಿದ ಹಾದಿಯಲ್ಲಿ ಗೆಲವು ಸಿಕ್ಕಬೇಕೆಂದು ಆ ಸಾಮಾಜಿಕ ಪರಿಸ್ಥಿತಿಯ ಸರಿಯಾದ ತಿಳುವಳಿಕೆಯನ್ನು ಮಾಡಿಕೊಡುವುದೇ ಮುಂದಾಳುತನದ ಲಕ್ಷಣ. ಮುಂದಾಳುತನವು ಬೇಕೇಬೇಕು. ಆದರೆ ಸಾಮಾಜಿಕ ನಿಯಮಗಳಿಗನುಸರಿಸಿ ಇರುವ ಮುಂದಾಳುತನವೇ ಗೆಲವು ಪಡೆಯುವುದು.

ಆದುದರಿಂದಲೇ ಈ ಹಿಂದಿನ ದೇಶೀಯ ಚಳವಳಿ, ಸಾಮ್ರಾಜ್ಯದ ಬುನಾದಿ, ಮುಂತಾದವುಗಳ ವಿಮರ್ಶಾತ್ಮಕ ವಿವೇಚನೆಯನ್ನು ನಾನು ವರ್ಗಗಳ ದೃಷ್ಟಿಯಿಂದ ಮಾಡಿರುವೆನೇ ಹೊರತು ವ್ಯಕ್ತಿಗಳ ದೃಷ್ಟಿಯಿಂದಲ್ಲ. ರಾಜಕೀಯ ಚಟುವಟಿಕೆಗಳನ್ನು ನಿರ್ಲಿಪ್ತ ಭಾವದಿಂದ ಕಾಣುವೆವೆಂದು ಹೇಳುತ್ತಿರುವ ಕಾಂಗ್ರೆಸ್ ಕೆಲಸಗಾರರು ಧನಿಕರ ಕುಲಗೆಟ್ಟ ಸಮಾಜಶಾಸ್ತ್ರವಲ್ಲಿಯ ತಪ್ಪುಗಳನ್ನೇ ತೀಡುತ್ತಿದ್ದಾರೆ. ರಾಜಕಾರಣದಲ್ಲಿ ನಿರ್ಲಿಪ್ತ ದೃಷ್ಟಿಯನ್ನಿಡುವುದು ಸಾಧ್ಯವಿಲ್ಲ. ಏಕೆಂದರೆ, ನಾವು ಶೂನ್ಯದಲ್ಲಿ ಜೀವಿಸುತ್ತಿಲ್ಲ. ರಾಜಕಾರಣವು ಶೂನ್ಯದ ಬಯಲಿನಲ್ಲಿ ಬೆಳೆಯುವುದೂ ಇಲ್ಲ.



# ಗಾಂಧೀ - ರಾಜಕೀಯ ಸಾಹಿತ್ಯ



**ಗಾಂಧೀಜಿ :**

| | |
|---|---|
| ನನ್ನ ಆರಂಭ ಜೀವನ .... .... | ೨—೦—೧ |
| ಭಾರತದಿಂದ ಹೊರಗೆ ... .... | ೧—೪—೦ |
| ಸ್ತ್ರೀಯರ ಸಮಸ್ಯೆಗಳು ... .... | ೧—೪—೦ |
| ಮಹಾತ್ಮರ ಮನೋರಂಗ .... .... | ೪—೪—೦ |
| ಮಂಗಲಪ್ರಭಾತ .... ... | ೦—೮—೦ |
| ನೀತಿಧರ್ಮ ... .... | ೦—೫—೦ |

**ಶ್ರೀ. ಕಿಶೋರಿಲಾಲ ಮಶ್ರುವಾಲಾ :**

| | |
|---|---|
| ಗಾಂಧೀವಿಚಾರದೋಹನ .... .... | ೨—೮—೦ |

**ಶ್ರೀ. ಜಿ. ಡಿ. ಬಿರ್ಲಾ :**

| | |
|---|---|
| ಬಾಪು ... .... ... .... | ೨—೦—೦ |

**ಶ್ರೀ. ಜಯಪ್ರಕಾಶ ನಾರಾಯಣ :**

| | |
|---|---|
| ಸಾಮ್ಯವಾದವೇ ಏಕೆ ? .... ... | ೧—೧೦—೦ |



ಕನ್ನಡದ ಯಾವ ಪುಸ್ತಕ ಬೇಕಾದರೂ
ನಮಗೆ ಬರೆಯಿರಿ



**ಸಾಹಿತ್ಯ ಭಂಡಾರ ಕೊಪ್ಪೀಕರ ಬೀದಿ, ಹುಬ್ಬಳ್ಳಿ**